

ಬಲಿ (ಕ್ರೇಯಾನ್ ಮಾಧ್ಯಮ)



# ಚಿಂತನಶೀಲ ಕಲಾವಿದ ಟಿ. ಕೆ. ರಾಮಸಿಂಗ್

**ಟಿ.** ಕೆ. ರಾಮಸಿಂಗ್ ತಾ॥ 15.02.63ರಲ್ಲಿ ತುಮಕೂರು ಜಿಲ್ಲೆಯ ಬುಗುಡನ ಹಳ್ಳಿಯಲ್ಲಿ ಜನಿಸಿದ್ದು ಬಾಲ್ಯದಲ್ಲಿಯೇ ಚಿತ್ರಕಲೆಯ ಬಗ್ಗೆ ಹೆಚ್ಚು ಆಸಕ್ತಿ ಬೆಳೆಸಿ ಕೊಂಡಿದ್ದರು. ಪಿ.ಯು.ಸಿ. ಶಿಕ್ಷಣದ ನಂತರ ತುಮಕೂರಿನ ರವೀಂದ್ರ ಕಲಾನಿಕೇತನದಲ್ಲಿ, ನಂತರ ಬೆಂಗಳೂರಿನ ಕಲಾಮಂದಿರ ಕಲಾಶಾಲೆಯಲ್ಲಿ ಮತ್ತು ಕೆನ್ ಕಲಾಶಾಲೆಯಲ್ಲಿ ವ್ಯಾಸಂಗ ಮಾಡಿದರು.

1991ರಿಂದ ತುಮಕೂರಿನ ರವೀಂದ್ರ ಕಲಾನಿಕೇತನದಲ್ಲಿ ಚಿತ್ರಕಲಾ ಉಪನ್ಯಾಸಕರಾಗಿ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡುತ್ತಾ ಒಬ್ಬ ಕಲಾವಿದರಾಗಿ ಬೆಳೆಯುತ್ತಿದ್ದಾರೆ. ಪ್ರಕೃತಿಯಲ್ಲಿನ ಗಂಡು-ಹೆಣ್ಣುಗಳ ನಡುವಿನ ಸಂಬಂಧ ಮತ್ತು ವೈರತ್ವಗಳ ಬಗ್ಗೆ ಮುನ್ನೂರಕ್ಕೂ ಹೆಚ್ಚು ತೈಲ, ಕ್ರೇಯಾನ್, ಅಕ್ರಿಲಿಕ್ ಮಾಧ್ಯಮದ ಚಿಂತನಶೀಲ ಚಿತ್ರಗಳನ್ನು ರಚಿಸಿದ್ದು, ಹೆಚ್ಚಿನವು ಕ್ರೇಯಾನ್ಸ್ ಮಾಧ್ಯಮದವಾಗಿವೆ.

ಕರ್ನಾಟಕ ಲಲಿತಕಲಾ ಅಕಾಡೆಮಿ ಸಹಾಯದೊಂದಿಗೆ ಬೆಳಗಾವಿ ಮತ್ತು ಪಣಜಿಯಲ್ಲಿ ಏಕವ್ಯಕ್ತಿ ಚಿತ್ರಕಲಾ ಪ್ರದರ್ಶನಗಳು ಹಾಗೂ ಬೆಂಗಳೂರು, ತುಮಕೂರು, ನವದೆಹಲಿ, ಕಲ್ಕತ್ತ, ಚೆನ್ನೈ ಮುಂತಾದ ಕಡೆ ಸಮೂಹ ಚಿತ್ರಕಲಾ ಪ್ರದರ್ಶನಗಳನ್ನು ಮಾಡಿ ಪ್ರಖ್ಯಾತರಾಗಿದ್ದಾರೆ. ರಾಜ್ಯಮಟ್ಟದ ಕಲಾಮೇಳ, ರಾಷ್ಟ್ರೀಯ ಕಲಾಮೇಳ, ಮೈಸೂರು ದಸರಾ ವಸ್ತುಪ್ರದರ್ಶನ, ಮಿಲೇನಿಯಂ ಆಲ್ ಇಂಡಿಯಾ ಫೈನ್‌ಆರ್ಟ್ ಅಂಡ್ ಕ್ರಾಫ್ಟ್ ಎಕ್ಸಿಬಿಷನ್ ಇನ್ನೂ ಹಲವಾರು ಕಲಾ ಪ್ರದರ್ಶನಗಳಲ್ಲಿ ಮತ್ತು ಕಲಾ ಶಿಬಿರಗಳಲ್ಲಿ ಭಾಗವಹಿಸಿ ಮೆಚ್ಚುಗೆ ಪಡೆದಿದ್ದಾರೆ.

● ಟಿ. ಆರ್. ರೇವಣ್ಣ, ತುಮಕೂರು



ಗಾಡ್ (ಕ್ರೇಯಾನ್ ಮಾಧ್ಯಮ)



ಮದರ್ (ಕ್ರೇಯಾನ್ ಮಾಧ್ಯಮ)



ಪೋಲೋ ಸ್ಟಡಿ (ಕ್ರೇಯಾನ್ ಮಾಧ್ಯಮ)

# ಹೊಸತು

## ಒಳಗೇನಿದೆ.....




*ಚಿತ್ರಗಳು :ಶ್ರೀಹರಿ, ಜಿ. ಎಂ. ಬೊಮ್ನಳ್ಳಿ, ಸ್ಯಾಮ್, ಸುರೇಶ್ ವಗ್ಗಾ*

*ಮುಖಪುಟ : ಪಂದ್ಯಕ್ಕಾಗಿ ತರಬೇತಿ. ರೂಪದರ್ಶಿ : ರಕ್ಷಿತ್. ಪಿ*

*ವರ್ಣಚಿತ್ರ : ಕೆ. ಪಿ. ಸ್ವಾಮಿ*

*ವಿನ್ಯಾಸ : ನವಕರ್ನಾಟಕ ವಿನ್ಯಾಸ*

*ಕಚೇರಿ ಸಹಕಾರ : ಜಿ. ವಿ. ತೇಜೋವತಿ*


## ಈ ತಿಂಗಳು

"**ಸಾ**ಮ್ನಾ" ಎಂಬುದು ಬಾಳ ಠಾಕ್ರೆ ನಡೆಸುವ ಒಂದು ಪತ್ರಿಕೆ. ಅದರ ಜನವರಿ ೧೮ರ ಭಾನುವಾರದ ಪುರವಣಿಯಲ್ಲಿ ಒಂದು ಲೇಖನದ ಶೀರ್ಷಿಕೆ ಹೀಗಿತ್ತು : "ಸಾಂಬಾಜಿ ಬ್ರಿಗೇಡ್ ವಿರುದ್ಧ ಔರಂಗಜೇಬ್." ಅದಕ್ಕೆ ಎರಡು ದಿನಗಳ ಮುನ್ನ ಮರಾಠಿ ಲೇಖಕ ಚಿತ್ರೆ ಒಂದು ಹೇಳಿಕೆ ನೀಡಿ ಪುಣೆಯ ಭಂಡಾರ್ಕರ್ ಪ್ರಾಚ್ಯ ಸಂಶೋಧನಾ ಸಂಸ್ಥೆಯಲ್ಲಿ ಶಿವಾಜಿ ಮಹಾರಾಜರ ಅಭಿಮಾನಿಗಳೆಂದು ಹೇಳಿಕೊಳ್ಳುವವರು ನಡೆಸಿದ್ದ ದಾಂಧಲೆಯನ್ನು ಕಟುವಾಗಿ ಟೀಕಿಸಿ ಅವರ ಕೃತ್ಯವು ಮಹಾರಾಷ್ಟ್ರದ ಎಲ್ಲ ನಾಗರಿಕರಿಗೂ ನಾಚಿಕೆ ತರುವಂಥದೆಂದು ಹೇಳಿದ್ದರು. ಸಂಸ್ಕೃತಿಯ ಬಗ್ಗೆ ಎಳ್ಳಷ್ಟೂ ಗೌರವವಿಲ್ಲದ ಬ್ರಿಗೇಡ್‌ನ ಕೆಲವು ಯುವಕರು ಭಂಡಾರ್ಕರ್ ಸಂಸ್ಥೆಯಲ್ಲಿದ್ದ ಅತ್ಯಮೂಲ್ಯ ಹಸ್ತಪ್ರತಿಗಳನ್ನೂ ಪುಸ್ತಕಗಳನ್ನೂ ಹಾಳುಗೆಡಹಿದ್ದಾರೆ. ಪುಸ್ತಕಗಳಲ್ಲಿ ಶಿವಾಜಿಯನ್ನು ಕುರಿತವೂ ಸೇರಿದ್ದುವೆಂಬುದು ಒಂದು ದೊಡ್ಡ ವ್ಯಂಗ್ಯ. ಇದಕ್ಕೆಲ್ಲಾ ಕಾರಣ ಯಾವನೋ ಅಮೆರಿಕಾದ ಒಬ್ಬ ವಿದ್ವಾಂಸ ತನ್ನ ಗ್ರಂಥವೊಂದರಲ್ಲಿ ಶಿವಾಜಿಯ ಬಗ್ಗೆ ಅವಹೇಳನಕರ ಮಾತೊಂದನ್ನು ಬರೆದಿದ್ದಾನೆಂಬುದು. ಅದಕ್ಕೆ ಸಮರ್ಥವಾದ ಉತ್ತರವೊಂದನ್ನು ಕೊಡುವ ಬೌದ್ಧಿಕ ಸಾಮರ್ಥ್ಯವಿಲ್ಲದವರು ಭುಜಬಲವನ್ನು ಪ್ರದರ್ಶಿಸುವ ಹೀನಾಯ ಕೃತ್ಯದಲ್ಲಿ ತೊಡಗಿದರೆಂಬುದು ಈಗ ಸ್ಪಷ್ಟವಾಗಿದೆ. ಸಾಹಿತಿ ಚಿತ್ರೆ ಅದನ್ನು ಪ್ರಸ್ತಾಪಿಸಿದ್ದರು. ಸಾಂಬಾಜಿ ಬ್ರಿಗೇಡ್‌ನ ದಾಂಧಲೆಕೋರರನ್ನು ದಸ್ತಗಿರಿ ಮಾಡಿರುವುದನ್ನು ಪ್ರತಿಭಟಿಸಿ, ಅವರನ್ನೆಲ್ಲಾ ಕೂಡಲೆ ಬಿಡುಗಡೆ ಮಾಡಬೇಕೆಂದು ಅವರ ನೇತಾರರು ಆಗ್ರಹಪಡಿಸಿದ್ದಾರೆ. ಅಂದರೆ, ದಾಂಧಲೆ ಮಾಡಿದ್ದು ತಪ್ಪೇನೂ ಅಲ್ಲವೆಂಬುದು ಅವರ ಗ್ರಹಿಕೆ. ಅದರ ಹಿನ್ನೆಲೆಯಲ್ಲಿ ಬಂದಿರುವ ಠಾಕ್ರೆ ಪತ್ರಿಕೆಯ ಲೇಖನದ ಪ್ರಕಾರ ಚಿತ್ರೆಯಂಥವರು ಔರಂಗಜೇಬ್‌ನ ಸಮಾನರು. ಭಂಡಾರ್ಕರ್ ಸಂಸ್ಥೆಯಲ್ಲಿರುವ ಪುಸ್ತಕಗಳನ್ನು ಹರಿದು ಬೀದಿಗೆ ಬಿಸಾಡುವುದು ಶಿವಾಜಿಯ ಔನ್ನತ್ಯವನ್ನು ರಕ್ಷಿಸಲು ಸರಿಯಾದ ಮಾರ್ಗವೆಂದು ಇವರ ಪುಂಡುತನವು ಘೋಷಿಸುತ್ತದೆ. ಪ್ರಾಚೀನ ಭಾರತೀಯ ಸಾಹಿತ್ಯ - ಸಂಸ್ಕೃತಿಗಳನ್ನು ಕುರಿತಂತೆ ಭಂಡಾರ್ಕರ್ ಸಂಸ್ಥೆ ಮಾಡಿರುವ ಕೆಲಸದ ಕಲ್ಪನೆಯೂ ಇಲ್ಲದ ಈ ಮೂಢರು ಇಡೀ ದೇಶಕ್ಕೆ ಸಂಸ್ಕೃತಿಯ ಪಾಠ ಹೇಳುವ ವಿಪರ್ಯಾಸ ನಮ್ಮ ಮುಂದಿದೆ. ಅಮೆರಿಕಾದಲ್ಲಿರುವ ಆ ಲೇಖಕನನ್ನು ಬಂಧಿಸಬೇಕೆಂದು ಈ ಜನ ಮಹಾರಾಷ್ಟ್ರ ಸರ್ಕಾರವನ್ನು ಆಗ್ರಹಿಸಿದ್ದಾರೆ. ಅದನ್ನು ಹೇಗೂ ಮಾಡಲಾಗದ ಸರ್ಕಾರ ಅವನ ಪುಸ್ತಕವನ್ನು ಬಹಿಷ್ಕರಿಸಿದೆ ಮತ್ತು ಅದನ್ನು ಪ್ರಕಟಿಸಿರುವ ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್‌ನ ಪುಸ್ತಕ ಮಾರಾಟ ಮಳಿಗೆಯನ್ನು ಮುಚ್ಚಿಸಿದೆ. "ಭಾರತವು ಪ್ರಕಾಶಿಸುತ್ತಿದೆ" ಎಂದು ಕೇಂದ್ರ ಸರ್ಕಾರ ಕಿರುಚಿ ಹೇಳುತ್ತಿರುವಾಗ ನಡೆಯುತ್ತಿರುವ ಪ್ರಸಂಗ ಇದು. ಠಾಕ್ರೆ ಆಶೀರ್ವಾದವಿರುವ ಪಡೆಯವರು ಯಾವ ಸಂಸ್ಥೆಯನ್ನಾಗಲಿ, ವ್ಯಕ್ತಿಯನ್ನಾಗಲಿ ಮನಬಂದಂತೆ ನಡೆಸಿಕೊಳ್ಳಬಹುದೆಂಬ ಪರಿಸ್ಥಿತಿ ದೇಶದ ನಾಗರಿಕ ಜೀವನಕ್ಕೆ ಆರೋಗ್ಯಕರವಲ್ಲ. ಆತ ಅನುಸರಿಸುವುದು ಫ್ಯಾಸಿಸ್ಟ್ ತಂತ್ರವೆಂಬುದನ್ನು ವಾಜಪೇಯಿಯವರು ಮನಗಾಣಬೇಕು. ಆದರೆ ಅವರಿಗೆ ಆತನ ಸಖ್ಯ ಬಹಳ ಆಪ್ಯಾಯಮಾನವಾದ್ದು, ಲಾಭದಾಯಕವಾದ್ದು. ಲೇಖಕ ಚಿತ್ರೆಯೂ ಸೇರಿದಂತೆ ಈವರೆಗೆ ಮರಾಠಿ ಸಾಹಿತಿಗಳು ಮತ್ತು ವಿದ್ವಜ್ಜನ ಒಂದು ಪ್ರತಿಭಟನಾ ಮೆರವಣಿಗೆಯನ್ನು ಸಹ ನಡೆಸದೆ ಮೌನವಾಗಿದ್ದಾರೆಂದರೆ ಠಾಕ್ರೆ ಪಡೆಯ ವರ್ತನೆ ಎಂತಹುದೆಂದು ತಿಳಿಯುತ್ತದೆ. ಆದರೆ ದೇಶ-ವಿದೇಶಗಳಿಂದ ಭಂಡಾರ್ಕರ್ ಸಂಸ್ಥೆಗೆ ಬೆಂಬಲದ ಪತ್ರಗಳು ಬರುತ್ತಿವೆ. ಸಾಂಬಾಜಿ ಬ್ರಿಗೇಡ್‌ನ ಹೀನಕೃತ್ಯವನ್ನು ಖಂಡಿಸುವುದು ಔರಂಗಜೇಬನಿಗೆ ಸಮಾನವಾಗುವುದೆಂದು ಠಾಕ್ರೆ ಪತ್ರಿಕೆ ಹೇಳಿದರೂ ಸರಿಯೆ, ಅದನ್ನು ಖಂಡಿಸುವುದು ಎಲ್ಲ ಸಂಸ್ಕೃತಿ ಚಿಂತಕರ, ಕ್ರಿಯಾವಂತರ, ಜವಾಬ್ದಾರಿಯಾಗಿದೆ. ಹಾಗೆಂದರೆ, ಶಿವಾಜಿಯನ್ನು ಅವಮಾನಿಸುವುದು ಸರಿಯೆಂದಲ್ಲ. ಶಿವಾಜಿಯ ಬಗ್ಗೆ ಅಚಾರಿತ್ರಿಕ ಸಂಗತಿಗಳನ್ನು ನಿರಾಧಾರವಾಗಿ ಯಾರಾದರೂ ಹೇಳಿದರೆ ಅದನ್ನು ಖಂಡತುಂಡವಾಗಿ ವಿರೋಧಿಸುವ ಬೌದ್ಧಿಕ ಕ್ರಿಯೆ ನಮ್ಮದಾಗಬೇಕು.

* * *

ಲೋಕಸಭಾ ಚುನಾವಣೆ ಇನ್ನೂ ಘೋಷಿತವಾಗಿರದಿದ್ದರೂ ಅದು ಸದ್ಯದಲ್ಲೇ ನಡೆಯಲಿದೆಯೆಂಬುದು ಇಡೀ ದೇಶಕ್ಕೆ ತಿಳಿದಿದೆ. ಕೇಂದ್ರ ಸರ್ಕಾರವು ತನ್ನ ಜೋಳಿಗೆಯಿಂದ ಎಲ್ಲರಿಗೂ ಧಾರಾಳವಾಗಿ ಉಡುಗೊರೆಗಳನ್ನು ಘೋಷಿಸುತ್ತಿರುವುದು ಏತಕ್ಕಾಗಿ ಎಂಬುದು ಚುನಾವಣಾ ಆಯೋಗವೂ ಸೇರಿದಂತೆ ಎಲ್ಲರಿಗೂ ತಿಳಿದಿದೆ. ಈಗ ದಿನಂಪ್ರತಿ ನೀಡಲಾಗುತ್ತಿರುವ ದಯಾಭಿಕ್ಷೆಯಲ್ಲಿ ಯಾವುದು ಪೂರ್ತಿ ಗಿಟ್ಟುತ್ತದೆ ಮತ್ತು ಎಷ್ಟು ಕೇವಲ ಆಶ್ವಾಸನೆಗಳಾಗಿ ಉಳಿಯುತ್ತವೆ ಎಂಬುದು ಅಷ್ಟೊಂದು ಗುಟ್ಟಲ್ಲ. ಉದಾಹರಣೆಗೆ, ಮೂವತ್ತೆಂಟು ಕೋಟಿ ಜನರಿಗೆ ನಿವೃತ್ತಿ ಅಶನ ನೀಡಲಾಗುತ್ತದೆಂದು ಪ್ರಧಾನಿ ಹೇಳಿದ್ದಾರೆ. ಅದು ಕಾರ್ಯಗತವಾಯಿತೆಂದು ಮುಂದೊಂದು ದಿನ ದೊಡ್ಡ ಜಾಹಿರಾತು ನೀಡಿದರೆ ಮುಗಿಯಿತು, ಅದು ಎಲ್ಲರಿಗೂ ಲಭ್ಯವಾಯಿತೆಂದು ಭಾವಿಸಬೇಕು, ಅಷ್ಟೆ. ಒಂದು ಕೋಟಿ ಉದ್ಯೋಗ ಸೃಷ್ಟಿಸುವ ಆಶ್ವಾಸನೆಯಲ್ಲಿ

*೬ನೇ ಪುಟಕ್ಕೆ....*

ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ



ಸಂಪುಟ-೫ ಸಂಚಿಕೆ - ೭ ಫೆಬ್ರವರಿ ೨೦೦೪

*ಪ್ರಧಾನ ಸಂಪಾದಕ*

ಜಿ. ರಾಮಕೃಷ್ಣ

*ಸಂಪಾದಕ ಮಂಡಲಿ*

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಚಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ

*ವ್ಯವಸ್ಥಾಪಕರು*

ಎಸ್. ಸುರೇಂದ್ರ
ಎ. ಆರ್. ಉಡುಪ

*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೨೬

*ಹೊಸತು ಕಚೇರಿಯ ವಿಳಾಸ*



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**
**website : www.navakarnatakabooks.com**


# ಕಲಾವಿದನೆಂದರೆ ಏನೆಂದು ತಿಳಿದಿದ್ದೀರಿ ?

## ಸಂಪಾದಕೀಯ

**ಮೂ**ಡಬಿದ್ರೆಯಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ಅದ್ದೂರಿಯಿಂದ ನಡೆಯಿತೆಂಬ ವರದಿಗಳು ಬರುತ್ತಿದ್ದಂತೆ ಅಲ್ಲಿ ಎತ್ತಲಾಗಿದ್ದ ಕೆಲವು ಪ್ರಶ್ನೆಗಳನ್ನು ಕುರಿತಂತೆ ವಿವಾದವೇರ್ಪಟ್ಟಿತು. ಯಾವುದರ ಬಗ್ಗೆ ಆಕ್ಷೇಪ ಎತ್ತಬೇಕೋ ಅದನ್ನು ಮಾಡದೆ ಕೆಲವರು 'ಶುದ್ಧ ಸಾಹಿತ್ಯ' ಎಂಬ ಮುಸುಕು ಧರಿಸಿ, ಧರ್ಮಾಂಧತೆಯಿಂದ ಏನೆಲ್ಲಾ ಅನಾಹುತಗಳು ನಡೆಯಬಹುದೆಂಬುದರ ಬಗ್ಗೆ ಬಂದಿದ್ದ ಪ್ರಸ್ತಾಪಗಳ ಬಗ್ಗೆ ಅಸಮಾಧಾನ ವ್ಯಕ್ತಪಡಿಸಿದ್ದಾರೆ. ಹಿಂದೆ ಡಾ॥ ಎಸ್. ಎಲ್ ಭೈರಪ್ಪನವರು ಸಮ್ಮೇಳನಾಧ್ಯಕ್ಷರಾಗಿ ನುಡಿದಿದ್ದ ಅತಾರ್ಕಿಕ ಮಾತುಗಳನ್ನು ಮೀರಿಸುವಂತೆ ಬುದ್ಧನನ್ನು ಜನವಿರೋಧಿಯೆಂದು ಇತ್ತೀಚೆಗೆ ಅವರು ಹೇಳಿರುವುದನ್ನು ಟೀಕಿಸಬಾರದಿತ್ತೆಂದು ಈ 'ಶುದ್ಧ ಸಾಹಿತ್ಯ' ಮೀಮಾಂಸಕರ ಗೋಣಗಾಟ. ಬಾಬಾಬುಡನ್‌ಗಿರಿಯ ಬಗೆಗಂತೂ ಸಾಹಿತಿಗಳು ಮಾತನಾಡುವುದೇ ಬೇಡವೆಂದು ಇವರ ಇರಾದೆ. ಇಂತಹ ಅಭಿಪ್ರಾಯಗಳು ಎಷ್ಟು ನಿರರ್ಥಕವೆಂಬುದನ್ನು ಸಾಹಿತ್ಯ ಸಮ್ಮೇಳನ ಇನ್ನೂ ಪ್ರಬಲವಾಗಿ ಪ್ರತಿಪಾದಿಸುವ ದಿನಗಳು ಬರುತ್ತವೆಂದು ಆಶಿಸಬೇಕಾಗಿದೆ.

ಈ ಸಂದರ್ಭದಲ್ಲಿ ಎರಡು ಪ್ರತ್ಯೇಕ ಘಟನೆಗಳನ್ನು ನೆನೆದರೆ ಸರಿಯಾದ ಮಾರ್ಗದ ಕಲ್ಪನೆ ಬರಲು ಸಾಧ್ಯ. ಫೆಬ್ರವರಿ ೨೦೦೩ರಲ್ಲಿ ಅಮೆರಿಕಾದ ಅಧ್ಯಕ್ಷನ ಪತ್ನಿ ವಾಷಿಂಗ್‌ಟನ್ನಿನ ಶ್ವೇತಭವನದಲ್ಲಿ ಒಂದು ಸಾಹಿತ್ಯ ಗೋಷ್ಠಿ ಏರ್ಪಡಿಸಿ ಅನೇಕ ಕವಿಗಳಿಗೆ ಮತ್ತು ವಿಮರ್ಶಕರಿಗೆ ಆಹ್ವಾನ ಕಳಿಸಿದಳು. ''ಕವಿತೆ ಮತ್ತು ಅಮೆರಿಕಾದ ಧ್ವನಿ'' ಎಂಬುದು ಗೋಷ್ಠಿಯ ವಿಷಯ. ಆಗ್ಗೆ ಇರಾಕಿನ ಮೇಲೆ ಆಕ್ರಮಣ ನಡೆಸುವ ಸಿದ್ಧತೆ ಬಹುಮಟ್ಟಿಗೆ ಪೂರ್ಣಗೊಂಡಿತ್ತು. ಶ್ವೇತಭವನದ ಧಾಳಿಯ ಧ್ವನಿಗೆ ಕವಿಗಳು ತಮ್ಮ ದನಿಯನ್ನು ಕೂಡಿಸಲಿ ಎಂಬ ಉದ್ದೇಶ ಸ್ಪಷ್ಟವಿತ್ತು. ಯಾರಿಗೆ ಆಹ್ವಾನ ನೀಡಲಾಗಿತ್ತೋ ಅವರಲ್ಲಿ ಬಹುಮಂದಿ ಅಮೆರಿಕಾ ಮಾಡಲಿದ್ದ ಆಕ್ರಮಣವನ್ನು ವಿರೋಧಿಸಿ ಹೇಳಿಕೆಗಳನ್ನು ನೀಡಿದರು, ಅಧ್ಯಕ್ಷನಿಗೆ ಪತ್ರಗಳನ್ನು ಬರೆದರು ಮತ್ತು ಯುದ್ಧವನ್ನು ವಿರೋಧಿಸಿ ಕವಿತೆಗಳನ್ನು ಪ್ರಕಟಿಸಿದರು. ಸ್ಯಾಮ್ ಹ್ಯಾಮಿಲ್ ಎಂಬ ಕವಿ ತನಗೆ ಆಮಂತ್ರಣ ಬಂದ ಕೂಡಲೆ ''ಯುದ್ಧದ ವಿರೋಧವಾಗಿ ಕವಿಗಳು'' ಎಂಬ ವೇದಿಕೆಯನ್ನು ನಿರ್ಮಾಣ ಮಾಡಿ ಸಾವಿರಾರು ಕವಿತೆಗಳನ್ನು ಸಂಗ್ರಹಿಸಿದ. ಲಾರಾ ಬುಷ್‌ಗೆ ಜಂಘಾಬಲ ಉಡುಗಿಹೋಯಿತು. ಶ್ವೇತಭವನಕ್ಕೆ ಬಂದ ಕವಿಗಳು ಇರಾಕ್ ಆಕ್ರಮಣದ ವಿರುದ್ಧ ಕವಿತೆಗಳನ್ನೋದಿಬಿಡುವ ಪ್ರಸಂಗ ನಡೆಯದಿರಲೆಂದು ಸಾಹಿತ್ಯ ಗೋಷ್ಠಿಯನ್ನು ರದ್ದು ಮಾಡಿದಳು. ಆಕೆ ರದ್ದು ಮಾಡಿದರೇನಂತೆ, ಕವಿಗಳು ತಾವೇ ಬೇರೆ ಬೇರೆ ನಗರಗಳಲ್ಲಿ ಗೋಷ್ಠಿಗಳನ್ನು ಆಯೋಜಿಸಿದರು, ಕವಿತೆಗಳನ್ನು ಸಹಸ್ರಾರು ಮಂದಿಯ ಜೊತೆ ಸೇರಿ ಓದಿದರು. ''ಶ್ವೇತಭವನಕ್ಕೆ ಮಾನ್ಯವಲ್ಲದ ಕವಿತೆಗಳು'' ಎಂಬ ಹೆಸರಿನಲ್ಲಿ ೧೬೦ ಕವಿಗಳು ನ್ಯೂಯಾರ್ಕಿನಲ್ಲಿ ಒಟ್ಟಾಗಿ ಗೋಷ್ಠಿ ನಡೆಸಿದರು. ನಮ್ಮ ''ಶುದ್ಧ ಸಾಹಿತ್ಯ''ದ ಆರಾಧಕರಾದ ಬೆಪ್ಪುತಕ್ಕಡಿಗಳಿಗೆ ಇದರಿಂದ ಏನಾದರೂ ಪಾಠ ಕಲಿಯಲು ಸಾಧ್ಯವೇ ಎಂಬುದನ್ನು ಕಾದುನೋಡೋಣ.

ಇನ್ನೊಂದು ಪ್ರಸಂಗ ಜರುಗಿದ್ದು ಜನವರಿ ೨೦೦೩ರಲ್ಲಿ, ವಿಶ್ವಸಂಸ್ಥೆಯ ಭದ್ರತಾ ಮಂಡಲಿ ಸಭೆ ಸೇರುವ ಕೊಠಡಿಯಲ್ಲಿ. ಅದೂ ಸಹ ಇರಾಕಿನ ಮೇಲೆ ನಡೆಸಲಾದ ದೌರ್ಜನ್ಯದ ಸಂಬಂಧದಲ್ಲೇ ಜರುಗಿದ್ದು. ಅದನ್ನು ವಿಶದೀಕರಿಸುವ ಮುನ್ನ ಇತಿಹಾಸದ ಪುಟಗಳನ್ನೊಮ್ಮೆ ತಿರುವಿ ಹಾಕುವುದು ಅವಶ್ಯಕ : ೧೯೩೭ರ ಏಪ್ರಿಲ್ ೨೯ ಸ್ಪೇನಿನ ಗೆರ್ನಿಕಾ ಎಂಬ ಪಟ್ಟಣಕ್ಕೆ ಕರಾಳಪ್ರಾಯವಾದ ದಿನ. ಫ್ರಾಂಕೋ ಎಂಬ ಫ್ಯಾಸಿಸ್ಟ್ ಸೈನ್ಯಾಧಿಕಾರಿ ಸ್ಪೇನ್ ದೇಶದಲ್ಲಿ ಅಧಿಕಾರಕ್ಕೆ ಬಂದಿದ್ದ. ಪ್ರಜಾಪ್ರಭುತ್ವ ರೀತ್ಯಾ ಚುನಾವಣೆಗಳಲ್ಲಿ ಗೆದ್ದಿದ್ದ ಕಮ್ಯುನಿಸ್ಟರಿಗೆ ಸರ್ಕಾರ ರಚಿಸಲು ಬಿಡದೆ ತಾನು ಮಿಲಿಟರಿ ದಂಡನಾಯಕನಾಗಿ ಫ್ಯಾಸಿಸ್ಟ್ ದುರಾಡಳಿತ ಸ್ಥಾಪಿಸಿದ್ದ. ದೇಶದಲ್ಲಿ ಅಂತರ್ಯುದ್ಧ ಆರಂಭವಾಯಿತು. ವಿಶ್ವದ ಶ್ರೇಷ್ಠ ಸಾಹಿತಿಗಳು, ತತ್ತ್ವಶಾಸ್ತ್ರಜ್ಞರು, ಕಲಾವಿದರು, ಸಂಗೀತಗಾರರು, ಅಭೂತಪೂರ್ವವಾದ ರೀತಿಯಲ್ಲಿ ಸ್ಪೇನಿನ ಜನರ ಪರವಾಗಿ ಕಾದಾಡಲು ಟೊಂಕಕಟ್ಟಿ ನಿಂತರು, ಫ್ಯಾಸಿಸ್ಟ್ ದಬ್ಬಾಳಿಕೆಯನ್ನು ವಿರೋಧಿಸಿದರು. ಎಷ್ಟೋ ವಿದೇಶಿ ಸಾಹಿತಿಗಳು ಪ್ರಾಣ ಕೂಡ ಕಳೆದುಕೊಂಡರು. ಆದರೆ ದುರುಳ ಫ್ರಾಂಕೋ ಪರವಾಗಿ, ಅವನಿಗಿಂತಲೂ ಹೆಚ್ಚು ನೀಚನಾಗಿದ್ದ ಅಡಾಲ್ಫ್ ಹಿಟ್ಲರ್ ಬಂದ. ೧೯೩೭ರ ಏಪ್ರಿಲ್ ೨೬ರ ಮಧ್ಯಾಹ್ನ ಇದ್ದಕ್ಕಿದ್ದಂತೆ ನಾಜ಼ಿ ವಿಮಾನಗಳು ಬಂದು ಗೆರ್ನಿಕಾ ಮೇಲೆ ಬಾಂಬುಗಳ ಮಳೆಯನ್ನು ಸುರಿಸಿದವು. ಇಂದು ಬೇರೊಂದು ರೀತಿಯ ಅಂತರ್ಯುದ್ಧ ನಡೆಯುತ್ತಿರುವ ಬಾಸ್ಕ್ ಪ್ರಾಂತ್ಯಕ್ಕೆ ಸೇರಿದ್ದು ಗೆರ್ನಿಕಾ ಪಟ್ಟಣ. ಬಾಸ್ಕಿನ ಜನ ಅಂದೂ ಸಹ ಫ್ರಾಂಕೋ ವಿರುದ್ಧ ದಿಟ್ಟತನದಿಂದ ಹೋರಾಡುತ್ತಿದ್ದರು. ಅವರನ್ನು ಕಂಗಾಲು ಮಾಡಲು ಹಿಟ್ಲರ್ ಬಂದಿದ್ದ. ಮೂರು ಗಂಟೆಗಳ ಸತತ ಬಾಂಬ್ ಧಾಳಿಯಿಂದ ಗೆರ್ನಿಕಾ ಅತ್ಯಂತ ಭೀಕರ ಸಾವು-ನೋವುಗಳನ್ನು ಅನುಭವಿಸಿತು. ೧೬೦೦ ಮಂದಿ ನಾಗರಿಕರು ಹತರಾದರು. ಮೂರು ದಿನಗಳ ಪರ್ಯಂತ ಪಟ್ಟಣ ಹತ್ತಿ ಉರಿಯಿತು. ಇಡೀ ವಿಶ್ವ ಈ ಫ್ಯಾಸಿಸ್ಟ್ ಆಕ್ರಮಣವನ್ನು ಕಂಡು ರೋಸಿಹೋಯಿತು. ಮೇ ೧ರಂದು ಪ್ಯಾರಿಸ್‌ನಲ್ಲಿ ಹತ್ತು ಲಕ್ಷ ದುಡಿಮೆಗಾರರು ಬೀದಿಗಿಳಿದು ಗೆರ್ನಿಕಾ ಪರವಾಗಿ ಪ್ರತಿಭಟನೆ ಸಲ್ಲಿಸಿದರು. ಅಂದೇ ಪ್ಯಾಬ್ಲೋ ಪಿಕಾಸೊ ತನ್ನ ಪ್ರಖ್ಯಾತ ''ಗೆರ್ನಿಕಾ'' ಚಿತ್ರಿಸಲು ಕುಂಚವನ್ನು ಕೈಗೆತ್ತಿಕೊಂಡ. ಇಪ್ಪತ್ತನೆಯ ಶತಮಾನದ ಅತಿಶ್ರೇಷ್ಠ ಕಲಾಚಿತ್ರವೆಂದು ಅದು ವಿಖ್ಯಾತವಾಗಿದೆ. ಯುದ್ಧದ ಭೀಕರತೆಯನ್ನು ತೋರುವ ಈ ಚಿತ್ರ ಸುಮಾರು ಹನ್ನೊಂದು ಅಡಿ ಎತ್ತರ, ಇಪ್ಪತ್ತಾರು ಅಡಿ ಅಗಲದ ಆಯಾಮವನ್ನು ಹೊಂದಿದೆ. ಸತ್ತವರು, ಸಾಯುತ್ತಿರುವವರು, ಅಂಗಾಂಗಗಳು ಊನವಾದವರು, ಆಕ್ರಂದನ ಮಾಡುತ್ತಿರುವ ಮಹಿಳೆಯರು, ಮಕ್ಕಳು, ಪ್ರಾಣಿಗಳು ಎಲ್ಲಾ ಈ ಚಿತ್ರದಲ್ಲಿ ಮೂಡಿಬಂದಿದ್ದಾರೆ.

ಈ ಹಿನ್ನೆಲೆಯ ''ಗೆರ್ನಿಕಾ'' ಚಿತ್ರವೊಂದು ವಿಶ್ವಸಂಸ್ಥೆಯ ಭದ್ರತಾ ಮಂಡಲಿ ಸಭೆ ಸೇರುವೆಡೆ ಗೋಡೆಯನ್ನು ಅಲಂಕರಿಸಿದೆ. ಅದು ಪಿಕಾಸೊ ಚಿತ್ರದ ಯಥಾವತ್ ಅನುಕರಣ, ಪರದೆಯ ಮೇಲೆ ಬಿಡಿಸಲಾದ್ದು. ಅದನ್ನು ಚಿತ್ರಯವನಿಕಾ ಎಂದು ಕರೆಯುತ್ತಾರೆ. ಪಿಕಾಸೊ ಮೂಲಚಿತ್ರವು ನ್ಯೂಯಾರ್ಕಿನಿಂದ ಸ್ಪೇನಿಗೆ ತೆರಳಿದಾಗ ಆಗಿನ ನ್ಯೂಯಾರ್ಕ್ ಗವರ್ನರ್ ಆಗಿದ್ದ ನೆಲ್ಸನ್ ರಾಕಫೆಲ್ಲರ್ ಇದನ್ನು ಮಾಡಿಸಿ ಸರ್ಕಾರದ ಭವನದಲ್ಲಿ ತೂಗಿಹಾಕಿದ್ದ. ೧೯೮೫ರಲ್ಲಿ ಅದನ್ನು ಶಾಶ್ವತ ಅನುದಾನವಾಗಿ ವಿಶ್ವಸಂಸ್ಥೆಗೆ ನೀಡಲಾಗಿದ್ದು, ಅಂದಿನಿಂದ ಭದ್ರತಾ ಮಂಡಲಿಯ

ಸಭಾಭವನದಲ್ಲಿ ಶೋಭಿಸುತ್ತಾ ಬಂದಿದೆ, ಬರ್ಬರ ಯುದ್ಧಗಳ ಬಗ್ಗೆ ವಿಶ್ವದ ಮುತ್ಸದ್ದಿಗಳಿಗೆ ಎಚ್ಚರ ನೀಡುತ್ತಾ ಬಂದಿದೆ.

ಸಾಹಿತ್ಯ ಪ್ರತಿಭೆಯು ಯುದ್ಧ ವಿರೋಧಿ ಪ್ರಜ್ಞೆ ಬೆಳೆಸಿದರೆ ಅದನ್ನು ಚಿವುಟಿಹಾಕುವ ಅಮೆರಿಕಾದ ಸರ್ಕಾರ ಜನವರಿ ೨೦೦೩ರಲ್ಲಿ ಈ ''ಗೆರ್ನಿಕಾ'' ಚಿತ್ರದ ಮೇಲೆ ಹರಿಹಾಯ್ದು ತನ್ನ ಮಾನವ ವಿರೋಧಿ ನೀತಿಯನ್ನು ತೋರ್ಪಡಿಸಿತು. ಇರಾಕಿನಲ್ಲಿತ್ತೆಂದು ಹೇಳಲಾಗುತ್ತಿದ್ದ ಮಾರಕಾಸ್ತ್ರಗಳ ತಪಾಸಣೆ ಮಾಡುತ್ತಿದ್ದ ಹ್ಯಾನ್ಸ್ ಬ್ಲಿಕ್ಸ್ ತನ್ನ ವರದಿಗಳನ್ನು ಮಂಡಿಸುತ್ತಿದ್ದುದು ಜನವರಿಯಲ್ಲಿ. ಅಮೆರಿಕಾದ ವಿದೇಶಾಂಗ ಕಾರ್ಯದರ್ಶಿ ಕಾಲಿನ್ ಪವೆಲ್ ಆ ಸಭೆಗಳಲ್ಲಿ ಹಾಜರಿರುತ್ತಿದ್ದ. ''ಗೆರ್ನಿಕಾ'' ಆತನ ಪ್ರಜ್ಞೆಗೆ ಹಿಂಸೆಯುಂಟುಮಾಡುತ್ತಿತ್ತು. ಯಾವ ಧಾಳಿಯನ್ನು ಆ ಚಿತ್ರ ಖಂಡಿಸಿದ್ದಿತ್ತೋ ಅಂತಹ ಧಾಳಿಗೆ ಆತ ಮತ್ತು ಆತನ ಅಧ್ಯಕ್ಷ ನಕಾಶೆ ಸಿದ್ಧಪಡಿಸಿಯಾಗಿತ್ತು. ಭದ್ರತಾ ಮಂಡಳಿಯ ಸಭೆಯನ್ನು ಟಿ.ವಿ. ಮಾಧ್ಯಮದವರು ಚಿತ್ರಿಸಿ ವಿಶ್ವಕ್ಕೆ ತೋರಿಸಿದರೆ ''ಗೆರ್ನಿಕಾ'' ಹಿನ್ನೆಲೆ ಎದ್ದುಕಾಣುತ್ತಿತ್ತು. ಅದಕ್ಕೆ ಪವೆಲ್ ಮಾಡಿದ್ದೇನು ? ತನ್ನ ಸರ್ಕಾರದ ಪ್ರಭಾವವನ್ನು ಬಳಸಿ, ಚಿತ್ರದ ಮೇಲೆ ಬೇರೊಂದು ಪಟವನ್ನು ತೂಗಿಹಾಕುವಂತೆ ವಿಶ್ವಸಂಸ್ಥೆಯ ಅಧಿಕಾರಿಗಳಿಗೆ ತಾಕೀತು ಮಾಡಿದ! ಇರಾಕಿನ ಮೇಲೆ ತಾನು ಹೂಡಲಿದ್ದ ಯುದ್ಧವನ್ನು ಸಮರ್ಥಿಸುವ ಭಾಷಣ ಮಾಡುತ್ತಿದ್ದಾಗ ಹಿಂದೆ ''ಗೆರ್ನಿಕಾ'' ಇದ್ದರೆ ಅವನಿಗೆ ಕಸಿವಿಸಿ ; ಆದ್ದರಿಂದ ವಿಶ್ವಸಂಸ್ಥೆಯ ಲಾಂಛನವಿರುವ ನೀಲಿಪಟವನ್ನು ತೂಗಿಹಾಕಿಸಿದ !

ಈ ಇಡೀ ಪ್ರಕರಣದಲ್ಲಿ ಒಂದು ವ್ಯಂಗ್ಯವಡಗಿದೆ. ತನ್ನ ಸರ್ಕಾರದ ಹೊಲಸು ಕೃತ್ಯಗಳನ್ನು ಮುಚ್ಚಿಹಾಕಲು ವಿಶ್ವಸಂಸ್ಥೆಯನ್ನು ಒಂದು ಮುಸುಕನ್ನಾಗಿ ಬಳಸಿದ ಕಾಲಿನ ಪಾವೆಲ್ ''ಗೆರ್ನಿಕಾ'' ಪ್ರತಿನಿಧಿಸುವ ಬರ್ಬರ ಯುದ್ಧದ ಭೀಕರತೆಯನ್ನು ಪರದೆಯ ಹಿಂದಕ್ಕೆ ಸರಿಸುವ ನೀಚ ಪ್ರಯತ್ನ ಮಾಡಿದ. ಅದಕ್ಕೇ ಚಿತ್ರಪಟಕ್ಕೆ ಹೊದಿಕೆ ಹೊದಿಸಿದ್ದು! ವಿಶ್ವದ ಜನತೆ ಕ್ರೂರಹತ್ಯೆಗಳನ್ನು ನೋಡಬಾರದು, ನೋಡುವುದಿಲ್ಲ ಎಂದು ಅಮೆರಿಕಾ ಎಣಿಸಿತು. ಲಾರಾ ಬುಶ್ ತಾನು ಏರ್ಪಡಿಸಿದ್ದ ಗೋಷ್ಠಿಯನ್ನು ರದ್ದು ಮಾಡಿದಾಗ ಕವಿಗಳು ತಮ್ಮದೇ ಗೋಷ್ಠಿ ಆಯೋಜಿಸಿಕೊಂಡರು. ಅಂತೆಯೇ, ಅಮೆರಿಕಾ ಮುಚ್ಚಿಹಾಕಲು ಯತ್ನಿಸಿದ ಇರಾಕ್ ಆಕ್ರಮಣದ ಬರ್ಬರತೆಯನ್ನು ವಿಶ್ವ ತನ್ನದೇ ರೀತಿಯಲ್ಲಿ ನೋಡಿ ಜುಗುಪ್ಸೆ ಹೊಂದಿತು.

''ಶುದ್ಧ ಸಾಹಿತ್ಯ''ದ ವಕ್ತಾರರು ಮೂಡಬಿದ್ರೆ ಸಮ್ಮೇಳನದಲ್ಲಿ ಹೊರಬಂದ ಮಾನವ ಕಾಳಜಿಗಳನ್ನು ಪಕ್ಕಕ್ಕೆ ಸರಿಸಲು ಯತ್ನಿಸಿದ್ದು ತೀರಾ ಮೂರ್ಖತನದ ಕೆಲಸವೆಂದು ಈ ಎರಡು ಪ್ರಕರಣಗಳು ಗಟ್ಟಿಯಾಗಿ ಘೋಷಿಸಿ ಮನದಟ್ಟು ಮಾಡಿಕೊಡುತ್ತಿವೆ. ಸ್ವತಃ ಪಿಕಾಸೊ ಮಾರ್ಚ್ ೧೯೪೫ರಲ್ಲಿ ಹೇಳಿದ್ದ ಮಾತುಗಳನ್ನು ಮನನ ಮಾಡಿಕೊಳ್ಳುವ ಅಗತ್ಯವಿದೆ. ಫ್ರಾನ್ಸಿನ ಕಮ್ಯುನಿಸ್ಟ್ ಪಕ್ಷದ ಸದಸ್ಯತ್ವ ಪಡೆದಿದ್ದ ಆ ಕಲಾವಿದನನ್ನು ಅದು ಸಮಂಜಸವೇ ಎಂದು ಆಗಾಗ್ಗೆ ಪ್ರಶ್ನಿಸಲಾಗುತ್ತಿತ್ತು. ಬಾಬಾಬುಡನ್‌ಗಿರಿ ಬಗ್ಗೆ ಆಗಲಿ, ಗೌತಮ ಬುದ್ಧನ ಬಗ್ಗೆ ಆಗಲಿ, ಮೂಡಬಿದ್ರೆಯಲ್ಲಿ ಚರ್ಚೆ ಆರಂಭಿಸಿದವರು ಕಮ್ಯುನಿಸ್ಟರೇ ಆಗಿರಬೇಕೆಂದೇನೂ ಇರಲಿಲ್ಲ. ಸಾರ್ವಜನಿಕ ಹಿತವನ್ನು ಬಯಸುವ ಎಲ್ಲರೂ ಆ ಪ್ರಶ್ನೆಗಳನ್ನೆತ್ತಿದ್ದಾರೆ. ಪಿಕಾಸೊ ೧೯೪೫ರಲ್ಲಿ ಹೇಳಿದ್ದುದು ಇದು : ''ಕಲಾವಿದನೆಂದರೆ ಏನೆಂದು ತಿಳಿದಿದ್ದೀರಿ ? ಅವನೊಬ್ಬ ನರಸತ್ತ ವ್ಯಕ್ತಿಯೆಂದು ತಿಳಿದಿದ್ದೀರಾ ? ಚಿತ್ರಕಾರನಾದರೆ ಬರಿ ಕಣ್ಣುಗಳಿವೆ, ಸಂಗೀತಕಾರನಾದರೆ ಬರಿ ಕಿವಿಗಳಿವೆ, ಕವಿಯಾದರೆ ತನ್ನ ಹೃದಯದಲ್ಲೆಲ್ಲೋ ವೀಣೆಯೊಂದನ್ನು ಬಚ್ಚಿಟ್ಟುಕೊಂಡಿದ್ದಾನೆ, ಕುಸ್ತಿಪಟುವಾದರೆ ಬರಿ ಮಾಂಸಖಂಡಗಳನ್ನು ಹೊಂದಿದ್ದಾನೆ, ಎಂದೆಲ್ಲಾ ಭಾವಿಸುವುದು ಬಾಲಿಶತನ. ಇದನ್ನು ತಿಳಿಯಿರಿ : ಅವನಿಗೂ ರಾಜಕೀಯ ವ್ಯಕ್ತಿತ್ವವೆಂಬುದೊಂದು ಇದೆ. ಪ್ರಪಂಚದಲ್ಲಿ ನಡೆಯುವ ಹೃದಯವಿದ್ರಾವಕ ಘಟನೆಗಳು ಅವನನ್ನು ಕಲಕುತ್ತವೆ, ಸಂಭ್ರಮದ ಸಂಗತಿಗಳು ಅವನನ್ನು ಪುಲಕಿತಗೊಳಿಸುತ್ತವೆ ಮತ್ತು ಸಂತೋಷದ ವಿಷಯಗಳು ಅವನಿಗೆ ನೆಮ್ಮದಿ ತರುತ್ತವೆ ; ಅವುಗಳ ಪ್ರತಿಮೆ ಅವನಲ್ಲಿ ಅಚ್ಚೊತ್ತಿರುವಂತೆ ಕಾಣಬರುತ್ತವೆ. ಬೇರೆ ಜನಗಳನ್ನು ಕುರಿತಂತೆ ಕುತೂಹಲದ ಭಾವನೆ ತಳೆಯದಿರುವುದು ಹೇಗೆ ತಾನೆ ಸಾಧ್ಯ ? ಅವರ ಆಸೆ-ಆಕಾಂಕ್ಷೆಗಳಿಗೆ ಪುಟಿಯದಿರಲು ಕಲಾವಿದನ ಹೃದಯವೇನು ಮೃತಿ ಹೊಂದಿದ ನಿರ್ಜೀವಿಯೆ ? ಇಲ್ಲಾ ಸ್ವಾಮಿ, ಅದು ಸಾಧ್ಯವಿಲ್ಲ. ನಾವು ಚಿತ್ರಕಲೆ ನಿರ್ಮಿಸುವುದು ಯಾವುದೋ ಬಂಗಲೆಯನ್ನು ಅಲಂಕರಿಸಲು ಅಲ್ಲ. ಅದು ಯುದ್ಧದ ಒಂದು ಸಾಧನ. ನಾವು ಜನರ ಮೇಲೆ ಯುದ್ಧ ಮಾಡುವವರಲ್ಲ; ಬದಲಾಗಿ, ಯುದ್ಧ ಮಾಡುವವರ ಮೇಲೆ ಯುದ್ಧ ಸಾರುವವರು.''

ಸಾಹಿತ್ಯ, ಸಂಗೀತ, ಕಲೆ ಇವಕ್ಕೆಲ್ಲಾ ಮಹತ್ವದ ಅರ್ಥ ಕೂಡಿಬರುವುದು ಈ ಮಾನವಪರವಾದ ಭಾವನೆಗಳನ್ನು ಮೈಗೂಡಿಸಿಕೊಂಡಾಗ. ನಮ್ಮ ಮೂಡಬಿದ್ರೆ ''ಶುದ್ಧ ಸಾಹಿತ್ಯ'' ಗ್ರಾಹಕರಿಗೆ ಇದು ತಿಳಿಯಲೆಂದು ಆಶಿಸೋಣ. ಈ ಆಶಯವನ್ನು ಹೊತ್ತು ಮುನ್ನಡೆಯದಿದ್ದರೆ ಸಾಹಿತ್ಯ ಸಮ್ಮೇಳನಗಳು ಯಾಕೆ ಬೇಕು ? ಸಾರ್ವಜನಿಕ ಹಣವನ್ನು ಸಂಸ್ಕೃತಿ ಇಲಾಖೆಯ ಪೆದ್ದುಗಳು ನುಂಗಿ ನೀರು ಕುಡಿಯಲೆಂದೆ ?




ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ





*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ.೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೪೨೪೩೦೨




ವಿಶೇಷಾಂಕ ತಲುಪಿದೆ. ಜವಾಬ್ದಾರಿಯುತ ಸಂಚಿಕೆಯಂತಿದೆ. ಪರಿವಿಡಿಯನ್ನು ಗಮನಿಸಿ ತಕ್ಷಣ ನನಗನಿಸಿದ್ದು ಇದು. ಜಾಗತೀಕರಣದ ಚರ್ಚೆ, ಹೆಗ್ಗಡಿತಿ ಲೇಖನ, ಶರ್ಮರ ಸಂದರ್ಶನ ಓದಿದ ಮೇಲೆ ನನ್ನ ಅನಿಸಿಕೆಗೆ ಆಧಾರವಿದೆ ಎನಿಸಿತು. ಜಾಗತೀಕರಣದ ಚರ್ಚೆಯಲ್ಲಿ ರಾಮಯ್ಯನವರ ಮಾತುಗಳು ತುಂಬಾ ಭಿನ್ನ ದೃಷ್ಟಿಯವು. ಆ ಬಗ್ಗೆ ಚಿಂತಿಸುವಂತೆ ಆಗಬೇಕು. ಕಾಶಿ, ಗಿರೀಶ್‌ರ ಮಾತುಗಳೂ ಅಷ್ಟೆ. ಯಾಕೋ ಶರ್ಮರ ಮಾತುಗಳು ಅರೆ ಅನ್ನಿಸುತ್ತಿದ್ದವು. ಆದರೂ ಅವರ ಈ ವಯಸ್ಸಿನ ಉತ್ಸಾಹ ಮೆಚ್ಚುವಂಥದೆ.

*ಹೊಳಲ್ಕೆರೆ* **ಚಂದ್ರಶೇಖರ ತಾಳ್ಯ**

ಹೊಸ ವರ್ಷದ ಉಡುಗೊರೆಯಾಗಿ 'ಹೊಸತು' ವಿಶೇಷ ಸಂಚಿಕೆಯನ್ನು ನೀಡಿದೆ. ಉತ್ತಮ ಲೇಖನಗಳು, ಆಕರ್ಷಣೀಯ ಮುಖಪುಟ, ಸುಂದರ ಮುದ್ರಣಗಳಿಂದ ಕೂಡಿದ ಜನವರಿಯ ವಿಶೇಷ ಸಂಚಿಕೆ ಸಂಗ್ರಹಯೋಗ್ಯವಾಗಿದೆ.

'ಹೊಸತು'ವಿಗೆ ಹೊಸ ವರ್ಷದ ಶುಭಾಶಯಗಳು.

*ಬರೋಡ* **ಸುಜಾತ ವಡೋದರ**




ಜನವರಿಯ ವಿಶೇಷ ಸಂಚಿಕೆಯನ್ನು ನೋಡಿ ತುಂಬಾ ಸಂತೋಷಗೊಂಡೆ. ಲೇಖನಗಳಂತು ಯಾವುದು ಓದಬೇಕು ಯಾವುದು ಬಿಡಬೇಕು ಎನ್ನದೆ ಎಲ್ಲವೂ ಸಹ ಅರ್ಥಪೂರ್ಣವಾಗಿವೆ. ಮುಖಪುಟದ ಚಿತ್ರ ಆಕರ್ಷಕವಾಗಿದೆ. ಒಟ್ಟಿನಲ್ಲಿ ಹೊಸತು ಒಂದು ಗ್ರಂಥಾಲಯ ಇದ್ದಂತೆ ಎಲ್ಲ ವಿಷಯವನ್ನು ಒಳಗೊಂಡಿರುವುದು ಶ್ಲಾಘನೀಯ.

*ಪಾಂಡವಪುರ* **ಅ. ಮೃತ್ಯುಂಜಯ**

ಹೊಸತು – ತುಂಬಾ ಅರ್ಥಪೂರ್ಣವಾಗಿ ಪ್ರಕಟಗೊಳ್ಳುತ್ತಿದೆ. ಜನವರಿ ೨೦೦೪ರ ಸಂಚಿಕೆಯಲ್ಲಿ ಉತ್ತಮ (ಲೇಖನ), ವಿಷಯಗಳೆಲ್ಲಾ ತುಂಬಾ ಚೆನ್ನಾಗಿವೆ ಅಲ್ಲದೆ ಸಂಗ್ರಹಯೋಗ್ಯವಾಗಿದೆ. ಸಂತೋಷ, ಧನ್ಯವಾದಗಳು.

*ಹೊಸಪೇಟೆ* **ಡಾ|| ರಾಜಶೇಖರ ಜಮಳಂಡಿ**

ಹೊಸವರ್ಷದ ಶುಭಾಶಯಗಳು. ವಿಶೇಷ ಸಂಚಿಕೆಯನ್ನು ಓದಲು ಸಾಕಷ್ಟು ಸಮಯ ಬೇಕಾಯಿತು. ಉತ್ತಮ ಮುಖಚಿತ್ರ ಹಾಗೂ ಡಾ|| ಸಿ. ಆರ್. ಚಂದ್ರಶೇಖರ್‌ರವರ ಯುವಜನರಲ್ಲಿ ಹೆಚ್ಚುತ್ತಿರುವ ಅಪರಾಧಗಳು ಈ ಲೇಖನ ಮೆಚ್ಚುಗೆಯಾಯಿತು. ಆನಂದ ಝುಂಜರವಾಡರ ಮೊರ ಕೇರುವ ಮೊರವಿದು ಈ ಕವಿತೆ ಅದ್ಭುತವಾಗಿ ಮೂಡಿಬಂದಿದೆ. ಒಟ್ಟಾರೆ ಇಡೀ ಸಂಚಿಕೆಯೂ ಉತ್ತಮವಾಗಿದ್ದು ಪುಟಪುಟಕ್ಕೂ ಓದಿಸಿಕೊಳ್ಳುತ್ತಿದೆ.

*ಕಡೂರು* **ಜಿ. ಹೆಚ್. ತ್ರಿವೇಣಿ ಶಿವಕುಮಾರ್**

*೩ನೇ ಪುಟದಿಂದ...... (ಈ ತಿಂಗಳು)*

೮೪ಲಕ್ಷ ನಿಜಕ್ಕೂ ಸೃಷ್ಟಿಯಾಯಿತೆಂದು ಜಾಹಿರಾತು ನೀಡಲಾಗಿದೆಯಲ್ಲಾ, ಹಾಗೆ ! ಅನುಭವದ ವಿಷಯವೇ ಬೇರೆ. ಏಕೆಂದರೆ, ಉದ್ಯಮಗಳು ಮುಚ್ಚಿಕೊಂಡು ಉದ್ಯೋಗಗಳು ನಷ್ಟವಾದ್ದು ಮುಚ್ಚಿಹೋಗುವ ವಿಷಯವಲ್ಲ. ಸಂವಿಧಾನವನ್ನು ಕುರಿತು ಹೇರಳವಾಗಿ ಚರ್ಚಿಸುವ ಮಂದಿ ಮತ್ತು ಚುನಾವಣಾ ಆಯೋಗ ಗಮನಿಸಬೇಕಾದ ಅಂಶ ಇದು : ಈಗಾಗಲೆ ವಿಧಿವತ್ತಾಗಿ ಚುನಾವಣೆಯ ದಿನಾಂಕಗಳನ್ನು ಗೊತ್ತುಪಡಿಸಿಲ್ಲದಿದ್ದರೂ ಚುನಾವಣೆಯ ವಾತಾವರಣ ನಿರ್ಮಾಣವಾಗಿರುವುದು ನಿಜ. ಹಾಗಿರುವಾಗ ಮತದಾರರನ್ನು ಓಲೈಸಲು ಕೇಂದ್ರ ಸರ್ಕಾರವು ಏನೇನೋ ಆಮಿಷ - ಆಶ್ವಾಸನೆಗಳನ್ನು ನೀಡುವುದು ಭ್ರಷ್ಟಾಚಾರವೆನಿಸಿಕೊಳ್ಳುವುದಿಲ್ಲವೆ ? ಈಗ ನೀಡಲಾಗುತ್ತಿರುವ ಆಶ್ವಾಸನೆಗಳು ಚುನಾವಣಾ ಸಂಹಿತೆಯಡಿ ಅನಾಚಾರವೆನಿಸಿಕೊಳ್ಳದಿದ್ದರೂ ವಾಸ್ತವವಾಗಿ ಅದರ ಉದ್ದೇಶ ಯಾವ ಅನುಮಾನಕ್ಕೂ ಅವಕಾಶ ನೀಡುವುದಿಲ್ಲ. ಇದು ನಮ್ಮ ಚುನಾವಣಾ ಸಂಸ್ಕೃತಿಯ ಒಂದು ಮುಖ. ಇನ್ನೊಂದು ಅಷ್ಟೇ ಭೀಕರವಾದ ಮುಖ ನಮ್ಮ ರಾಜಕೀಯ ಕಮಂಗಿಗಳ ಹಾರಾಟದಲ್ಲಿ ಕಾಣಬರುತ್ತದೆ. ಕರುಣಾನಿಧಿ, ಸಂಗ್ಮಾ, ಮುಂತಾದವರನ್ನು ನಿದರ್ಶನವಾಗಿ ಹೆಸರಿಸಬೇಕಾಗಿಲ್ಲ. ನಂಬಿಕೆ, ಸಿದ್ಧಾಂತ, ಎಂಬ ಪದಗಳು ಅವರಾರ ಕೋಶದಲ್ಲೂ ಇಲ್ಲ. ಯಾರ ಜೊತೆ ಸೇರಿಕೊಳ್ಳಬೇಕೆಂಬುದು ಆರ್ಥಿಕ - ಸಾಂಸ್ಕೃತಿಕ - ಸಾಮಾಜಿಕ ನೀತಿಗಳನ್ನು ಎತ್ತಿ ಹಿಡಿಯುವ ದೃಷ್ಟಿಯಿಂದ ತೀರ್ಮಾನವಾಗುವುದಿಲ್ಲ; ಬದಲಾಗಿ, ಅಧಿಕಾರದಲ್ಲಿ ಉಳಿಯಬೇಕಾದರೆ ಯಾರೊಡನೆ ಇರಬೇಕು ಎಂಬುದರಿಂದ ನಿರ್ಧಾರವಾಗುತ್ತದೆ. ಆದ್ದರಿಂದ ಅಂಥವರಿಗೆ ಮತೀಯತೆ, ಸ್ವಾವಲಂಬನೆ, ಸರ್ವೋದಯ, ಮುಂತಾದ ವಿಷಯಗಳು ತೀರಾ ಗೌಣ. ನಮ್ಮ ದೇಶದ ರಾಜಕೀಯ ಚಿಂತನೆ ಮತ್ತು ಕ್ರಿಯೆ ಇಷ್ಟು ಅಧೋಗತಿಗೆ ಇಳಿದಿರುವುದು ಕೂಡ ಫ್ಯಾಸಿಸ್ಟ್ ಪ್ರವೃತ್ತಿಗೆ ಅನುಕೂಲಕರ ಸನ್ನಿವೇಶವನ್ನು ರಚಿಸಿಕೊಡುತ್ತದೆ. ಸಾರ್ವಜನಿಕರು ಇದರ ಬಗ್ಗೆ ಎಚ್ಚರದಿಂದಿರಬೇಕಾಗಿದೆ.

*   *   *

ಮುಂಬೈಯಲ್ಲಿ ವಿಶ್ವ ಸಾಮಾಜಿಕ ವೇದಿಕೆಯ ಹಾಗೂ ಮುಂಬೈ ಪ್ರತಿರೋಧದ ಮಹಾಮೇಳಗಳು ನಡೆದಿವೆ. ದೇಶ-ವಿದೇಶಗಳ ಲಕ್ಷಗಟ್ಟಲೆ ಜನ ಇವುಗಳಲ್ಲಿ ಪಾಲ್ಗೊಂಡಿದ್ದು ಒಂದು ರೀತಿಯ ಉತ್ಸಾಹದಾಯಕ ಭಾವನೆಗಳನ್ನು ಪ್ರಚೋದಿಸುತ್ತದೆ. ಸಾಮ್ರಾಜ್ಯಶಾಹಿ ಭಂಡತನ ಮತ್ತು ಜಾಣತನದ ಪ್ರತೀಕವಾದ ಜಾಗತೀಕರಣವನ್ನು ಘೋಷಣೆಗಳಿಂದ ಸೋಲಿಸಲಾಗುವುದಿಲ್ಲವೆಂಬುದು ನಿಜ; ಆದರೆ ಅದರ ದುಷ್ಟತನದ ಬಗೆಗಿನ ಪ್ರಜ್ಞೆ ಸ್ವಾಗತಾರ್ಹವಾದ್ದು. ವಿಶ್ವ ಸಾಮಾಜಿಕ ವೇದಿಕೆಯಲ್ಲಿ ಪಾಲ್ಗೊಂಡವರು ಬಹುತೇಕ ಸರ್ಕಾರೇತರ ಸಂಸ್ಥೆಗಳಿಗೆ ಸೇರಿದವರು, ಮತ್ತು ಆ ಸಂಸ್ಥೆಗಳಲ್ಲಿ ಬಹುತೇಕ ವಿದೇಶಿ ನೆರವು ಪಡೆಯುವ ಸಂಸ್ಥೆಗಳೇ ಹೆಚ್ಚು ಎಂಬುದನ್ನು ಯಾರೂ ಗಮನಿಸದಿರಲು ಸಾಧ್ಯವಿಲ್ಲ. ಆದರೆ ಅವರಡಿಯಲ್ಲಿ ಸಂಘಟಿಸಲ್ಪಟ್ಟಿರುವವರು ನಮ್ಮ ದೇಶದ ದೀನ-ದಲಿತರು. ಜಾಗತೀಕರಣವನ್ನು ಹಿಮ್ಮೆಟ್ಟಿಸಲು ಇವರೆಲ್ಲಾ ಹೇಗೆ ಕ್ರಿಯಾಶೀಲರಾಗಬೇಕೆಂಬ ಮಹತ್ತರ ಪ್ರಶ್ನೆಗೆ ಸಮಾವೇಶವು ಸಮಗ್ರ ಉತ್ತರವನ್ನೇನೂ ನೀಡಿಲ್ಲ. ಆ ಉತ್ತರವನ್ನು ಹೋರಾಟಗಳ ಮೂಲಕ ನಾವೇ ಪಡೆದುಕೊಳ್ಳಬೇಕು. ''ಬೇರೊಂದು ಕಮ್ಯುನಿಸ್ಟ್ ವಿಶ್ವವು ಸಾಧ್ಯ'' ಎಂಬುದನ್ನು ಮನನ ಮಾಡಿಕೊಳ್ಳಬೇಕೆಂದು ವಿಶ್ವ ಸಾಮಾಜಿಕ ವೇದಿಕೆಯಲ್ಲಿ ಪಾಲ್ಗೊಂಡ ಭಾರತೀಯ ಕಮ್ಯುನಿಸ್ಟ್ ಪಕ್ಷ ಮುಂಬೈ ಮಹಾಮೇಳದಲ್ಲಿ ಹೇಳಿತೆಂದು ವರದಿಯಾಗಿದೆ. ಅಂತಹ ವಿಶ್ವವನ್ನು ಸಮರ್ಥಿಸದಿರುವವರೂ ವಿಶ್ವ ಸಾಮಾಜಿಕ ವೇದಿಕೆಯಲ್ಲಿದ್ದಾರೆ. ವಿಶ್ವದ ಜನಸಮುದಾಯದ ವಿಭಿನ್ನ ಗುಂಪುಗಳು ಒಂದೆಡೆ ಸೇರಿ ವಿಚಾರಮಂಥನ ನಡೆಸುವುದು ಅಪ್ರಸ್ತುತವಲ್ಲ. ಆ ದೃಷ್ಟಿಯಿಂದ ಈ ವೇದಿಕೆಯ ಸಮಾವೇಶ ಲಾಭದಾಯಕ. ಆದರೆ ಅದು ನಿಶ್ಚಿತ ಕ್ರಿಯೆಗೆ ಸುಸಂಬದ್ಧವಾದ ರೀತಿಯಲ್ಲಿ ಹಾದಿ ಮಾಡಿಕೊಡಬೇಕೆಂಬ ಆಶಯವನ್ನು ಮುಂಬೈ ಪ್ರತಿರೋಧದ ಸಮಾವೇಶ ಪ್ರಕಟಿಸಿದೆ. ಸಿದ್ಧಾಂತವಷ್ಟೇ ಸಾಲದೆಂಬುದನ್ನು ಎಲ್ಲ ಹೋರಾಟಗಾರರೂ ಅರಿಯುವ ಸಮಯ ಇದಾಗಿದೆ. ಮುಂಬೈನ ಎರಡೂ ಸಮಾವೇಶಗಳು ಇದಕ್ಕೆ ಒತ್ತುಕೊಟ್ಟಿರುವುದು ಸಮಾಧಾನದ ಸಂಗತಿ.

***'ಹೊಸತು' ವಿಶೇಷ ಸಂಚಿಕೆ***

ಸಂಚಿಕೆ ಓದುಗರ ಕೈ ಸೇರುವಲ್ಲಿ ವಿಳಂಬವಾದುದನ್ನು ಗಮನಿಸಿರುತ್ತೀರಿ. 'ಸಂಚಿಕೆ ಇನ್ನೂ ತಲುಪಿಲ್ಲ' ಎಂದು ದೂರವಾಣಿ ಕರೆಗಳು ಬೇರೆ ಬೇರೆ ಕಡೆಯಿಂದ ಬರತೊಡಗಿದವು. 'ಇನ್ನೂ ಬಂದಿಲ್ಲ, ತಪ್ಪಿ ಹೋಗಿರಬಹುದೆ?' - ಎಂಬ ಆತಂಕದ ಪತ್ರಗಳೂ ಬಂದವು. ದೂರವಾಣಿ ಮೂಲಕ ಸಂಪರ್ಕಿಸಿದವರಿಗೆ ಕಾರಣ ತಿಳಿಸಲು ಸಾಧ್ಯವಾಯಿತಾದರೂ, ಎಲ್ಲ ಪತ್ರಗಳಿಗೆ ಉತ್ತರ ಬರೆಯಲಾಗಲಿಲ್ಲ. ಓದುಗರ ಕುತೂಹಲ, ಆತಂಕ, ಆಸಕ್ತಿಯ ನಾಡಿಮಿಡಿತವನ್ನು ತೋರಿಸಿಕೊಟ್ಟವು ಈ ದೂರವಾಣಿ ಕರೆಗಳು, ಪತ್ರಗಳು. ವಿಶೇಷ ಸಂಚಿಕೆ ಸುಮಾರು ೨೦೦ ಪುಟಗಳೆಂದು ಅಂದಾಜು ಮಾಡಿದ್ದೆವು. ಆದರೆ ಆಹ್ವಾನಿತ ಬರಹಗಳಿಗೆಲ್ಲ ಅವಕಾಶ ನೀಡಲೇಬೇಕಾಯಿತು. ಈ ಕಾರಣದಿಂದ ಪುಟ ಸಂಖ್ಯೆ ೨೭೨ಕ್ಕೆ ಮುಟ್ಟಿತು. ಈ ಅಧಿಕ ಪುಟಗಳು ಓದುಗರಿಗೆ ಬೋನಸ್ ಎನ್ನಬಹುದು! ಉತ್ತಮ ಗುಣಮಟ್ಟದ ಸಂಚಿಕೆ ನೀಡಿದ್ದೇವೆ ಎಂಬ ಸಾರ್ಥಕ ಭಾವನೆ ನಮ್ಮದು. ಸಂಚಿಕೆ ತಲುಪಿದ ನಂತರ ಅದೇ ರೀತಿಯ ಉತ್ಸಾಹದ ಸ್ವಾಗತ ನೀಡುವ ಮೂಲಕ ನಮ್ಮಂತೆ ಸಾರ್ಥಕ ಭಾವನೆ ನಿಮಗೂ ಉಂಟಾಗಿದೆ ಎಂದು ನಮಗನ್ನಿಸಿದೆ. ನಿಮ್ಮ ಆಸಕ್ತಿ - ಬೆಂಬಲಗಳಿಗೆ ವಂದನೆಗಳು.

'ಹೊಸತು' ಸಂದೇಶ ನಿಮ್ಮ ಇತರ ಮಿತ್ರರಿಗೂ ತಲುಪಬೇಕೆಂಬುದು ನಮ್ಮ ಆಶಯ.

**- ಸಂಪಾದಕ ಮಂಡಲಿ**

# ಜಾತಿಪದ್ಧತಿಯು ಹಿಂದೂಧರ್ಮದ ಸ್ವಭಾವಜನ್ಯ ಭಾಗವೇ?

ಡಾ॥ ಎಂ. ವಿ. ನಾಡಕರ್ಣಿ

*ಈ ಲೇಖನದ ಎರಡನೆಯ ಭಾಗ ಜನವರಿ ೨೦೦೪ರ ಸಂಚಿಕೆಯಲ್ಲಿ ಪ್ರಕಟವಾಗಿದ್ದಿತು. ಅದರ ಮುಂದುವರಿದ ಭಾಗ ಇಲ್ಲಿದೆ.*

## ಜಾತಿ ಪದ್ಧತಿ ಹುಟ್ಟಿದ್ದು ಹೇಗೆ, ಉಳಿದುಕೊಂಡಿರುವುದು ಹೇಗೆ ?

ಈವರೆಗೆ ಪ್ರತಿಪಾದಿಸಿದ ವಿಷಯಗಳೆಲ್ಲವೂ ನಿಜವಾಗಿದ್ದು, ಒಂದು ಧರ್ಮ ಹಾಗೂ ತತ್ತ್ವಜ್ಞಾನವಾಗಿ ಹಿಂದೂಧರ್ಮವು ಜನ್ಮ-ಆಧಾರಿತ ಜಾತಿ ಪದ್ಧತಿಯ ವಿರುದ್ಧವಾಗಿದ್ದಿತು, ಆಚರಣೆಯಲ್ಲೂ ಅದು ಆ ಪದ್ಧತಿಯನ್ನು ವಿರೋಧಿಸಿತು ಎಂದಾದಲ್ಲಿ, ಜನ್ಮ-ಆಧಾರಿತ ಜಾತಿ ಪದ್ಧತಿ ಹುಟ್ಟಿತಾದರೂ ಹೇಗೆ, ಇಷ್ಟು ದೀರ್ಘಕಾಲ ಉಳಿದುಕೊಂಡು ಬಂದಿರುವುದಾದರೂ ಹೇಗೆ ? ಇದಕ್ಕೆ ಸರಳವಾದ ಕಾರಣವೆಂದರೆ, ಆ ಪದ್ಧತಿಯು ನಿರ್ವಹಿಸುತ್ತಿದ್ದ ಕೆಲವು ಕ್ರಿಯೆ (function)ಗಳನ್ನು ಸಮಾಜವು ಅಮೂಲ್ಯವೆಂದು ಪರಿಗಣಿಸಿದ್ದಿತು, ಎಂಬುದಾಗಿದೆ. ಈ ಕ್ರಿಯೆಗಳು ಧರ್ಮದೊಂದಿಗೆ ಯಾವ ಸಂಬಂಧವನ್ನೂ ಹೊಂದಿರಲಿಲ್ಲ, ಅವು ಸಂಪೂರ್ಣವಾಗಿ ಐಹಿಕ ವಲಯದ್ದಾಗಿದ್ದವು. ದುರದೃಷ್ಟದ ಸಂಗತಿ ಎಂದರೆ ಜಾತಿ ಸ್ವರೂಪಗಳು ಈ ಕ್ರಿಯೆಗಳ ಉಪಯೋಗ ಗತಿಸಿದರೂ ಕಾಲ ಮೀರಿ ಉಳಿದಿವೆ. ಈ ಕ್ರಿಯೆಗಳು ಯಾವುವು ಎಂಬುದನ್ನು ಈಗ ಪರಿಗಣಿಸೋಣ, ವಿವರಿಸೋಣ.

(೧) **ಇತಿಮಿತಿಗಳ** (checks and balances) **ಪದ್ಧತಿ : ವರ್ಣ ಪದ್ಧತಿಯು ಕೇವಲ ಶ್ರಮವಿಭಜನೆ ಆಗಿರಲಿಲ್ಲ.** ಯಾವುದೇ ಒಂದು ವರ್ಣ ಅಥವಾ ವರ್ಗವು ಅಧಿಕಾರವನ್ನು ತನ್ನ ಕೈಗಳಲ್ಲೇ ಕೇಂದ್ರೀಕರಿಸಿ ಇರಿಸಿಕೊಳ್ಳುವುದನ್ನು ತಪ್ಪಿಸುವಂಥ ಇತಿಮಿತಿಗಳ ಪದ್ಧತಿಯೂ ಅದಾಗಿದ್ದಿತು. ಅದರ ಗುರಿ ಹೆಚ್ಚಾಗಿ ಅಧಿಕಾರ ಕೇಂದ್ರೀಕರಣವನ್ನು ತಪ್ಪಿಸುವುದಾಗಿದ್ದಿತೇ ಹೊರತು ಆರ್ಥಿಕ ಮಿಗುತಾಯವನ್ನು ಸ್ವಾಧೀನಪಡಿಸಿಕೊಳ್ಳುವ ಉದ್ದೇಶದ್ದಾಗಿರಲಿಲ್ಲ. ವರ್ಣ ಪದ್ಧತಿಯ ಪ್ರಕಾರ ಬ್ರಾಹ್ಮಣರು ರಾಜ್ಯಾಧಿಕಾರಕ್ಕೆ ಬಾಧ್ಯರಾಗಿರಲಿಲ್ಲ, ಅವರ ಕರ್ತವ್ಯವೆಂದರೆ ಜ್ಞಾನಾರ್ಜನೆ, ವೇದಗಳ ಸಂರಕ್ಷಣೆ ಹಾಗೂ ವೈದಿಕ ಪರಂಪರೆಯ ನಿರ್ವಹಣೆ. ಅವರು ಸಂಪತ್ತನ್ನು ಸಂಗ್ರಹಿಸಕೂಡದಾಗಿದ್ದಿತು. ಅವರು ತಮ್ಮ ಜೀವನಾಧಾರಕ್ಕೆ ಇತರ ವರ್ಣಗಳನ್ನು ಅವಲಂಬಿಸಿರಬೇಕಾಗಿದ್ದಿತು. ಧರ್ಮಶಾಸ್ತ್ರಗಳ ಪ್ರಕಾರ ಬಳುವಳಿಗಳ ಬೆನ್ನು ಹತ್ತಿ ಹೋಗಬಾರದಿದ್ದಿತು. ತನ್ನ ಜೀವನೋಪಾಯಕ್ಕೆ ಎಷ್ಟು ಬೇಕೋ ಅಷ್ಟನ್ನು ಮಾತ್ರ ಪಡೆದುಕೊಳ್ಳಬಹುದು. ಜೀವನೋಪಾಯಕ್ಕೆ ಅಗತ್ಯವಾದುದಕ್ಕಿಂತ ಹೆಚ್ಚು ಸಂಗ್ರಹಿಸುವ ಬ್ರಾಹ್ಮಣನು ಅವನತಿ ಪಡೆಯುತ್ತಾನೆ ಎಂಬ ತತ್ತ್ವದಲ್ಲಿ ನಂಬಿಗೆಯಿತ್ತು.[೩೩] ಡ್ಯೂಮಾಂಟ್ ಹೇಳುವಂತೆ, ಮತಕ್ರಿಯಾ ಸ್ಥಾನಮಾನವನ್ನು ಐಹಿಕ ಅಧಿಕಾರದಿಂದ ಸ್ಪಷ್ಟವಾಗಿಯೇ ಪ್ರತ್ಯೇಕಿಸಲಾಗಿದ್ದಿತು.

ಕ್ಷತ್ರಿಯರ, ಅದರಲ್ಲೂ ನಿರ್ದಿಷ್ಟವಾಗಿ ರಾಜರ, ಕರ್ತವ್ಯ ಕಾನೂನು ಹಾಗೂ ನ್ಯಾಯ ಪರಿಪಾಲನೆಯಾಗಿದ್ದಿತು, ಧರ್ಮ ರಕ್ಷಣೆ ಹಾಗೂ ಜನಹಿತ ರಕ್ಷಣೆಯಾಗಿದ್ದಿತು. ಇವರು ಅನಿರ್ಬಂಧಿತ ಅಧಿಕಾರಕ್ಕೆ ಬಾಧ್ಯರಾಗಿರಲಿಲ್ಲ. ಸಚಿವರೊಂದಿಗೆ ಸಮಾಲೋಚನೆ ನಡೆಸುವುದು, ಜನರ ಕಷ್ಟಕಾರ್ಪಣ್ಯಗಳನ್ನು ನಿವಾರಿಸುವುದು ಅವರ ಕರ್ತವ್ಯವಾಗಿದ್ದಿತು. ಸಚಿವ ಸಂಪುಟದಲ್ಲಿ ಶೂದ್ರರನ್ನೂ ಒಳಗೊಂಡು ಎಲ್ಲ ವರ್ಣಗಳ ಪ್ರತಿನಿಧಿಗಳಿರುತ್ತಿದ್ದರು. ಡಾ॥ ಬಿ. ಆರ್. ಅಂಬೇಡ್ಕರ್‌ರವರು ಮಹಾಭಾರತದ ಶಾಂತಿಪರ್ವವನ್ನು ಉಲ್ಲೇಖಿಸುತ್ತಾರೆ. ಅದರಲ್ಲಿ ಭೀಷ್ಮನು ಯುಧಿಷ್ಠಿರನಿಗೆ, ರಾಜ್ಯ ವ್ಯವಹಾರಗಳಲ್ಲಿ ಮಾರ್ಗದರ್ಶನ ನೀಡಲು ಸಚಿವ ಸಂಪುಟದಲ್ಲಿ ನಾಲ್ಕು ಬ್ರಾಹ್ಮಣರು, ಎಂಟು ಕ್ಷತ್ರಿಯರು, ೨೧ ವೈಶ್ಯರು ಹಾಗೂ ೩ ಶೂದ್ರರನ್ನು ಸಚಿವರನ್ನಾಗಿ ಇರಿಸಿಕೊಳ್ಳಬೇಕೆಂದು ಬುದ್ಧಿವಾದ ನೀಡುತ್ತಾನೆ[೩೪]. ವೈಶ್ಯರು ಆ ಕಾಲದಲ್ಲಿ ವ್ಯಾಪಾರಗಾರರಾಗಿರುವುದರ ಜೊತೆಗೆ ಅಧಿಕ ಸಂಖ್ಯೆಯಲ್ಲಿ ಕೃಷಿಕರೂ ಆಗಿದ್ದುದರಿಂದ ತುಲನಾತ್ಮಕವಾಗಿ ಹೆಚ್ಚು ಪ್ರಾತಿನಿಧ್ಯ ನೀಡಿದ್ದಿರಬೇಕು. ಅಷ್ಟೇ ಅಲ್ಲ, ವೈಶ್ಯರೇ ರಾಜ್ಯಕ್ಕೆ ಅತಿಹೆಚ್ಚಿನ ಆದಾಯದ ಆಕರವಾಗಿದ್ದುದರಿಂದ ಅವರಿಗೆ ಹೆಚ್ಚಿನ ಪ್ರಾತಿನಿಧ್ಯ ನೀಡಿರಬಹುದು. ಧರ್ಮಶಾಸ್ತ್ರಗಳ ಪ್ರಕಾರ, ರಾಜನು ಧರ್ಮವನ್ನು ಎತ್ತಿಹಿಡಿಯುವಲ್ಲಿ, ಜನರನ್ನೂ ಅವರ ಆಸ್ತಿಯನ್ನೂ ರಕ್ಷಿಸುವಲ್ಲಿ ಅಸಮರ್ಥನಾದಲ್ಲಿ, ಸಚಿವರುಗಳು ಜನರ ಬೆಂಬಲದೊಂದಿಗೆ ಅವನನ್ನು ತೆಗೆದುಹಾಕಲೂಬಹುದಿದ್ದಿತು. ಅಂದರೆ, ಆಗ ಪರಿಪೂರ್ಣ ಸಾಮರಸ್ಯ ಹಾಗೂ ಮೈತ್ರಿ ಯಾವತ್ತೂ ಇದ್ದಿತೆಂದೇನೂ ಅಲ್ಲ. ಆದರೆ ಅದು ಕೊನೆಯಪಕ್ಷ ಆಗಿನ ಆದರ್ಶವಾಗಿದ್ದಿತು.

(೨) **ಶ್ರಮ ವಿಭಜನೆ - ಜ್ಞಾನ ಕೌಶಲ್ಯ ಸಂಪಾದನೆಗೆ ಸುಲಭಸಾಧನ :** ಆರಂಭದಲ್ಲಿ ವರ್ಣಗಳ ನಡುವೆ ಗಣನೀಯ ಸಾಮಾಜಿಕ ಗತಿಶೀಲತೆ ಇದ್ದರೂ ಕ್ರಮೇಣ ವರ್ಣಗಳು ಆನುವಂಶಿಕವಾದವು. ಶ್ರಮವಿಭಜನೆ ಹಾಗು ವಿಶೇಷಜ್ಞತೆ ಹೆಚ್ಚಿದಂತೆ ಜಾತಿ ಪದ್ಧತಿ ವಿಕಾಸಗೊಂಡಿತು. ಆ ಕಾಲದಲ್ಲಿ ವ್ಯಾಪಾರ ಶಾಲೆಗಳಾಗಲೀ ವಿವಿಧ ತಾಂತ್ರಿಕ ವಿದ್ಯಾಶಾಲೆಗಳಾಗಲೀ ಇರದಿದ್ದಾಗ ಜ್ಞಾನ ಕೌಶಲ್ಯಗಳನ್ನು ಕುಟುಂಬದೊಳಗೇ ತಂದೆಯಿಂದ ಮಕ್ಕಳಿಗೆ ತಿಳಿಸಿಕೊಡುವುದು ಹೆಚ್ಚು ಸುಲಭವಾಗಿದ್ದಿತು. ಆನುವಂಶಿಕ ವೃತ್ತಿಗಳಲ್ಲಿ ಶಿಕ್ಷಣ ಹಾಗೂ ಕೌಶಲ್ಯ ಮನೆಯಲ್ಲೇ ಶೈಶವದಿಂದಲೇ ಪ್ರಾರಂಭವಾಗುತ್ತಿದ್ದಿತು. ಹೀಗೆ ಕುಟುಂಬಗಳು ವಿವಿಧ ಕಲೆಗಳಲ್ಲೂ ಕಸುಬುಗಳಲ್ಲೂ ತಜ್ಞತೆ ಸಾಧಿಸಿದಂತೆ ಏಳಿಗೆ ಪಡೆದವು, ದೂರ ಮಾರುಕಟ್ಟೆಗಳನ್ನೂ ಪ್ರವೇಶಿಸತೊಡಗಿದವು. ಧರ್ಮಶಾಸ್ತ್ರಗಳಲ್ಲೂ ಶಾಸನ ದಾಖಲೆಗಳಲ್ಲೂ ಕಂಡುಬರುವಂತೆ ವೃತ್ತಿಪರ ಜಾತಿಗಳು ಸಂಪದ್ಭರಿತವಾಗಿದ್ದವು ಸುಸಂಘಟಿತವಾಗಿದ್ದವು' ಎಂದು ಕಾಣೆಯವರು ಗಮನಿಸುತ್ತಾರೆ. ಈ ಸಂಘಟನೆಗಳು ಎಂಥ ಪರಿಪೂರ್ಣತೆ ಪಡೆದಿದ್ದವೆಂದರೆ, ಗಣಗಳೆಂಬ ಭಾರಿ ವೃತ್ತಿಪರ ಸಂಸ್ಥೆಗಳೂ ಸಂಘಗಳೆಂಬ ಗ್ರಾಮಮಟ್ಟದ ಸಂಸ್ಥೆಗಳೂ ರೂಪುಗೊಂಡಿದ್ದವು.[೩೫]. 'ಶೂದ್ರರು ವೃತ್ತಿ ಸಂಬಂಧಿಸಿದಂತೆ ಸಾಮಾಜಿಕ ಸ್ಥಾನಮಾನದಲ್ಲಿ ಕ್ರಮೇಣ ಏಳಿಗೆ ಸಾಧಿಸಿದರು. ಅವರು ಬ್ರಾಹ್ಮಣರಿಗೆ ವಿಶೇಷವಾಗಿ ಮೀಸಲಾದ ವೃತ್ತಿಗಳನ್ನು ಬಿಟ್ಟು ಎಲ್ಲ ವೃತ್ತಿಗಳನ್ನೂ ಅನುಸರಿಸಬಹುದಿದ್ದಿತು. ಕೆಲವು ಶೂದ್ರರು ರಾಜರುಗಳೂ ಆದರು. ಹಾಗಾಗಿ ಮನುವು ಬ್ರಾಹ್ಮಣರಿಗೆ ಶೂದ್ರನ ರಾಜ್ಯದಲ್ಲಿ ವಾಸಿಸಬೇಡಿ ಎಂದು ಸ್ಪಷ್ಟವಾಗಿ ಹೇಳುವಂತಾಯಿತು (IV. 61)', ಎಂದೂ ಕಾಣೆಯವರು ಗಮನಿಸುತ್ತಾರೆ.[೩೬]

ಸ್ವಾರಸ್ಯಕರವೆನ್ನುವಂತೆ ವೈಶ್ಯರೂ ಶೂದ್ರರೂ ವೃತ್ತಿಪರ ಸಂಸ್ಥೆಗಳಲ್ಲೂ ಗಿಲ್ಡ್‌ಗಳಲ್ಲೂ ಇಷ್ಟು ಚೆನ್ನಾಗಿ ಸಂಘಟಿತವಾಗಿದ್ದಾಗ ಬ್ರಾಹ್ಮಣರಿಗೇ ಅಂಥ ಯಾವ ಸಂಸ್ಥೆಗಳೂ ಇರಲಿಲ್ಲ. ಕಾಣೆಯವರು ಹೇಳುವಂತೆ, 'ಆರ್ಚ್‌ಬಿಷಪ್, ಬಿಷಪ್ ಮತ್ತಿತರ ಶ್ರೇಣೀಕೃತ ವ್ಯವಸ್ಥೆ ಆಂಗ್ಲಿಕನ್ ಚರ್ಚಿನಲ್ಲಿರುವಂತೆ ಬ್ರಾಹ್ಮಣರಿಗೆ ಯಾವುದೇ ಸಂಘಟಿತ ಸಂಸ್ಥೆ ಇರಲಿಲ್ಲ.'[೩೭] ಜಾತಿ ಪದ್ಧತಿಯ ಮೇಲ್ಮಟ್ಟದಲ್ಲಿದ್ದುಕೊಂಡು ಬ್ರಾಹ್ಮಣರು ಜಾತಿ ಪದ್ಧತಿಯನ್ನು ರಚಿಸಿದರು ಮತ್ತು ಅದಕ್ಕೆ ಧಾರ್ಮಿಕ ಪಾವಿತ್ರ್ಯ ನೀಡಿ ಶಾಶ್ವತಗೊಳಿಸಿದರು, ಎಂದು ಆಗಾಗ್ಗೆ ವಾದಿಸಲಾಗುತ್ತದೆ. ಆದರೆ ಅದನ್ನು ಜಾರಿಗೆ ತರಲು ಅವರ ಬಳಿ ಯಾವುದೇ ಸಂಘಟನೆ ಇರಲಿಲ್ಲ. ಒಂದು ಸಣ್ಣ ಅಲ್ಪಮತೀಯರ ಕಾರಣದಿಂದಾಗಿ ಜಾತಿಪದ್ಧತಿ ಇಷ್ಟು ಮುಂದುವರಿಯಲು ಸಾಧ್ಯವಿರಲಿಲ್ಲ. ಈ ಅಲ್ಪಮತೀಯರಿಗೆ ರಾಜ್ಯಾಧಿಕಾರವೂ ಇರಲಿಲ್ಲ, ಧನಾಧಿಕಾರವೂ ಇರಲಿಲ್ಲ. ಜಾತಿಪದ್ಧತಿ ಮುಂದುವರಿಯಿತೇಕೆಂದರೆ ಎಲ್ಲ ಜಾತಿಗಳೂ, ಅದು ತಮ್ಮ ಹಿತಕ್ಕೆ ಅನುಗುಣವಾಗಿದ್ದುದರಿಂದ, ಒಪ್ಪಿಕೊಂಡಿದ್ದವು.

(೩) **ವಿಕೇಂದ್ರೀಕೃತ ಪ್ರಜಾಪ್ರಭುತ್ವ – ವಶೀಲಿ ಗುಂಪುಗಳು :** ವರ್ಣಗಳು ಹುಟ್ಟಿನ ಮೇಲೆ ಆಧರಿಸಿ ಸ್ವಗೋತ್ರವಿವಾಹದ ಜನಾಂಗೀಯ ವೃಂದಗಳಾಗಿ ತಮ್ಮನ್ನು ಪರಿವರ್ತಿಸಿಕೊಂಡಾಗ ಅವು ತಮ್ಮ ವ್ಯವಹಾರ, ತಗಾದೆಗಳ ಬಗೆಗೆ ತೀರ್ಪು ನೀಡಲು ತಮ್ಮವೇ ಜಾತಿ ಪಂಚಾಯಿತಿಗಳನ್ನು ಬೆಳೆಸಿಕೊಂಡವು, ರಾಜನ ಮೇಲೆ ಅವಲಂಬಿಸಿಕೊಂಡಿದ್ದುದನ್ನು ಕಡಿಮೆ ಮಾಡಿಕೊಂಡವು. ಜಾತಿ ಪಂಚಾಯಿತಿಗಳು ಜಾತಿಗಳೊಳಗೇ ವಿವಾದಗಳನ್ನು ಹೆಚ್ಚು ಖರ್ಚಿಲ್ಲದೆ ಹೆಚ್ಚು ಸಮರ್ಪಕವಾಗಿ ಪರಿಹರಿಸುತ್ತಿದ್ದವು. ಅವು ಬಹುಭಾರಿ ಪ್ರಮಾಣದಲ್ಲಿ ಸಾಮಾಜಿಕ ಸ್ಥಿರತೆಯನ್ನೂ ಉಂಟುಮಾಡಿದವು. ರಾಜರುಗಳು ಬರುತ್ತಿದ್ದರು, ಹೋಗುತ್ತಿದ್ದರು, ಆದರೆ ಸಮಾಜ ಮಾತ್ರ ಎಲ್ಲ ರೀತಿಯ ಆಕ್ರಮಣ, ಯುದ್ಧ ಹಾಗೂ ರಾಜಕೀಯ ಅಸ್ಥಿರತೆಗಳಿದ್ದರೂ ಸುಸ್ಥಿರವಾಗಿಯೇ ಉಳಿದಿದ್ದಿತು. ಪಂಚಾಯಿತಿಗಳು ತಮ್ಮ ಜಾತಿ ಸದಸ್ಯರ ಸಂಕ್ಷೇಮವನ್ನು ವಿಕೇಂದ್ರೀಕೃತ ರೀತಿಯಲ್ಲಿ ನೋಡಿಕೊಳ್ಳುತ್ತಿದ್ದವು. ಹೀಗೆ ಜಾತಿಪದ್ಧತಿಯು ವಿಕೇಂದ್ರೀಕೃತ ಪ್ರಜಾಪ್ರಭುತ್ವಕ್ಕೆ ಒಂದು ಸಾಧನ ಒದಗಿಸಿದ್ದಿತು. ಈ ಸಾಧನವು ಸ್ಥಿರತೆಯನ್ನು ತಂದುಕೊಟ್ಟರೂ ಮಧ್ಯಯುಗದ ಹಿಂದೂ ಸಮಾಜವನ್ನು ಹೆಚ್ಚು ಸಂಪ್ರದಾಯಶೀಲವನ್ನಾಗಿ ಮಾಡಿದ್ದಿತು. ಪಂಚಾಯಿತಿಗಳು ಅಂತರ್‌ಜಾತೀಯ ವಿವಾಹಗಳನ್ನು ಕಟ್ಟು ನಿಟ್ಟಾಗಿ ವಿರೋಧಿಸಿದವು, ಪ್ರೇಮ ವ್ಯವಹಾರಗಳಲ್ಲಿ ಪ್ರೇಮಿಯೊಂದಿಗೆ ಪರಾರಿಯಾದವರಿಗೆ ಉಗ್ರಶಿಕ್ಷೆ ವಿಧಿಸುತ್ತಿದ್ದವು. ಅಂತರ್‌ಜಾತೀಯ ವಿವಾಹಗಳು

ಜಾತಿ – ಪಂಚಾಯಿತಿಗಳನ್ನು ದುರ್ಬಲಗೊಳಿಸುವ ಸಂಭವ ಇದ್ದುದು ಇದಕ್ಕೆ ಕಾರಣವಾಗಿದ್ದಿತು. ಜಾತಿ-ಜಾತಿಗಳ ನಡುವಿನ ವ್ಯತ್ಯಾಸವನ್ನು ಹೆಚ್ಚು ದೃಢಗೊಳಿಸಲಾಯಿತು. ಸ್ವಾತಂತ್ರ್ಯ ನಂತರ ಜಾತಿ – ಪಂಚಾಯಿತಿಗಳ ಹಿಡಿತ ಗಣನೀಯವಾಗಿ ಕುಗ್ಗಿದ್ದರೂ, ಕೆಲವು ಜಾತಿಗಳ ವಿಷಯದಲ್ಲಂತೂ ಅದು ಕಣ್ಮರೆಯಾಗಿಲ್ಲ. ಬೇರೆ ಬೇರೆ ಜಾತಿಗಳ ಪ್ರೇಮಿಗಳು ವಿವಾಹವಾಗಲಾಗದೆ ಆತ್ಮಹತ್ಯೆ ಮಾಡಿಕೊಂಡ ಸುದ್ದಿ ವರದಿಗಳನ್ನು ನಾವು ಇನ್ನೂ ಕೇಳುತ್ತೇವೆ. ಇದು ಗ್ರಾಮಾಂತರದಲ್ಲಿ, ಕೆಳ ಜಾತಿಗಳ ಹಾಗೂ ಅಸ್ಪೃಶ್ಯರ ನಡುವೆಯೂ ಸಹ, ಸಾಮಾನ್ಯವಾಗಿದೆ. ಹುಟ್ಟು, ವಿವಾಹ ಹಾಗೂ ಸಾವಿನ ಸಂದರ್ಭಗಳಲ್ಲಿ ಕುಟುಂಬಗಳು ತಮ್ಮ ಜಾತಿಯ ಸದಸ್ಯರುಗಳ ಮೇಲೆಯೇ ಅವಲಂಬಿಸಿ ಕೊಂಡಿರುವುದು ಜಾತಿ – ಪಂಚಾಯಿತಿಗಳ ಹಿಡಿತ ಮುಂದುವರಿದಿರುವುದನ್ನು ಖಚಿತಪಡಿಸಿದೆ. ಜಾತಿ – ಪಂಚಾಯಿತಿಗಳು ನೀಡುವ ಬಹಿಷ್ಕಾರ ಶಿಕ್ಷೆಯನ್ನು ಭೀಕರ ಅವಮಾನ ಹಾಗೂ ಅಪಖ್ಯಾತಿಯೆಂದೇ ಇನ್ನೂ ಪರಿಗಣಿಸ ಲಾಗುತ್ತಿದೆ. ಜಾತಿ – ಪಂಚಾಯಿತಿಗಳು ಅಥವಾ ಜಾತಿ ವಶೀಲಿ ಗುಂಪು(ಲಾಬಿ)ಗಳು ಎಂದು ಕರೆಯಲಾಗುವ ಅವುಗಳ ಹೆಚ್ಚು ಆಧುನಿಕ ಅವತಾರಗಳು, ಜಾತಿ ಗುರುತನ್ನು ಅಥವಾ ಜನಾಂಗೀಯ ಅನನ್ಯತೆಯನ್ನು (identity) ಸಂರಕ್ಷಿಸುವ ಸಾಧನಗಳಾಗಿವೆ, ರಾಜ್ಯದಿಂದ ಅಥವಾ ಹೊರಗಿನ ವಿಶಾಲ ಸಮಾಜದಿಂದ ಹೆಚ್ಚು ರಿಯಾಯಿತಿಗಳನ್ನು ಪಡೆಯುವ ಅಥವಾ ಅದಕ್ಕೆ ಹೆಚ್ಚಿನ ಕೇಳಿಕೆಗಳನ್ನು ಸಲ್ಲಿಸುವ ಸಾಧನಗಳಾಗಿವೆ. ಈ ರೂಪದಲ್ಲಿ ಇವಕ್ಕೂ ಮತಕ್ರಿಯಾ ಸ್ಥಾನಮಾನ, ಶುದ್ಧತೆ ಹಾಗೂ ಮಾಲಿನ್ಯಗಳಂಥ ಪಾರಂಪರಿಕ ಕಲ್ಪನೆಗಳಿಗೂ ಏನೇನೂ ಸಂಬಂಧವಿಲ್ಲ.

**(೪) ಪರಿಸರದ ಪಾತ್ರ :** ಜಾತಿಪದ್ಧತಿಗೆ ಪರಿಸರದ ಆಯಾಮವೂ ಒಂದಿದೆ. ಇದನ್ನು ಮಾಧವ ಗಾಡ್ಗಿಲ್‌ರು ೧೯೮೩ರಲ್ಲಿ ತೋರಿಸಿಕೊಟ್ಟಿದ್ದಾರೆ.[೩೮] ಜಾತಿಪದ್ಧತಿಯು ನೈಸರ್ಗಿಕ ಸಂಪನ್ಮೂಲಗಳನ್ನು ಮಿತಿಮೀರಿ ಬಳಸುವುದನ್ನು ತಪ್ಪಿಸುವುದರಲ್ಲೂ ಅದರಲ್ಲಿನ ಪೈಪೋಟಿಯನ್ನು ಕಡಿಮೆ ಮಾಡುವುದರಲ್ಲೂ ಪ್ರಮುಖ ಕಾರ್ಯ ನಿರ್ವಹಿಸಿತು. ಮೀನುಗಾರರಷ್ಟೇ ಮೀನು ಹಿಡಿಯಲು ಹೋಗುತ್ತಿದ್ದರು. ಅವರ ಜಾತಿ-ಪಂಚಾಯಿತಿಗಳು ಎಷ್ಟು ಮೀನು ಹಿಡಿಯ ಬಹುದು ಎಂಬುದಕ್ಕೆ ಸಂಬಂಧಿಸಿ ನಿಯಮಗಳನ್ನು ಗೊತ್ತು ಪಡಿಸಿದ್ದವು. ಬೇಟೆಗಾರ ಜಾತಿಗೆ ಸೇರಿದವರಷ್ಟೆ ಕಾಡುಗಳಲ್ಲಿ ವನ್ಯಮೃಗಗಳ ಬೇಟೆಗೆ ಹೋಗಬಹುದಿದ್ದಿತು. ರಾಜರುಗಳಷ್ಟೇ ಇದಕ್ಕೆ ಅಪವಾದವಾಗಿದ್ದರು. ಹಳ್ಳಿಗಳಿಗೆ ಅಕ್ರಮ ಪ್ರವೇಶ ಮಾಡುತ್ತಿದ್ದ ನರಭಕ್ಷಕ ಹುಲಿಗಳನ್ನು ಸಂಹರಿಸಲಷ್ಟೇ ಅಥವಾ ಆಗಾಗ್ಗೆ ವಿಹಾರಕ್ಕಾಗಿಯಷ್ಟೇ ರಾಜರುಗಳು ಬೇಟೆಯಾಡುತ್ತಿದ್ದರು. ಚಮ್ಮಾರ ಜಾತಿಯವರಷ್ಟೇ ಸತ್ತ ಪ್ರಾಣಿಗಳನ್ನೂ ಅವುಗಳ ಚರ್ಮವನ್ನೂ ಪಡೆಯುವ ಹಕ್ಕು ಹೊಂದಿದ್ದರು. ಯಾವ ಋತುಗಳಲ್ಲಿ ಮತ್ತು ಯಾವ ವನ್ಯ ಪ್ರಾಣಿಗಳನ್ನು ಎಷ್ಟು ಪ್ರಮಾಣಗಳಲ್ಲಿ ಬೇಟೆಯಾಡಬಹುದು ಎಂಬುದಕ್ಕೆ ಸಂಬಂಧಿಸಿ ಆ ಜಾತಿ-ಪಂಚಾಯಿತಿಗಳು ನಿಯಮ ಮಾಡಿದ್ದವು. ಹಾಗಾಗಿ ವನ್ಯ ಪ್ರಾಣಿಗಳ ಸಂರಕ್ಷಣೆಯಾಗುತ್ತಿದ್ದಿತು, ಅವುಗಳ ವಂಶ ನಷ್ಟವಾಗುವುದು ತಪ್ಪುತ್ತಿದ್ದಿತು. ಕೆಲವು ಕಾಡು ಪ್ರದೇಶಗಳನ್ನು ದೇವಾರಣ್ಯಗಳೆಂದು ಗೊತ್ತುಪಡಿಸಲಾಗಿದ್ದಿತು. ಅವುಗಳಲ್ಲಿ ಬೇಟೆಯಾಡುವುದೂ ಹಸುರು ಮರಗಳನ್ನು ಕಡಿಯುವುದೂ ನಿಷಿದ್ಧವಾಗಿದ್ದಿತು. ಜಾತಿಪದ್ಧತಿಯು ವಿವಾಹಗಳಿಗೆ ಸಂಬಂಧಿಸಿ ಹಲವು ರೀತಿಯ ನಿರ್ಬಂಧಗಳನ್ನು ಹಾಕುವ ಮೂಲಕ ಜನಸಂಖ್ಯೆ ಹೆಚ್ಚುವುದನ್ನೂ ಒಂದು ರೀತಿಯಲ್ಲಿ ನಿಯಂತ್ರಿಸಿದ್ದಿತು. ಇವೆಲ್ಲಕ್ಕೂ ಸಂಬಂಧಿಸಿ ಅನೇಕ ನಿದರ್ಶನಗಳನ್ನು ನೀಡಿದ ನಂತರ ಮಾಧವ ಗಾಡ್ಗಿಲ್‌ರು ಹೇಳುತ್ತಾರೆ :

''ಜಾತಿಪದ್ಧತಿಯು ಹೀಗೆ ನೈಸರ್ಗಿಕ ಸಂಪನ್ಮೂಲಗಳ ಬಳಕೆಯನ್ನು ನಿಯಂತ್ರಿಸಲು ಎರಡು ವಿಶೇಷ ಕ್ರಮಗಳನ್ನು ವಿಕಾಸಗೊಳಿಸಿದ್ದಿತು. ಒಂದೊಂದು ಜಾತಿಯೂ ಅದಕ್ಕೆ ಸಂಬಂಧಿಸಿದ ವೃತ್ತಿಯಲ್ಲಷ್ಟೆ ತೊಡಗುತ್ತಿದ್ದುದು, ವೈಶಿಷ್ಟ್ಯಗಳಿಸುತ್ತಿದ್ದುದು ಯಾವುದೇ ನಿರ್ದಿಷ್ಟ ಸಂಪನ್ಮೂಲವನ್ನು ಪ್ರತ್ಯೇಕವಾಗಿ ಅಲ್ಲದಿದ್ದರೂ ಪ್ರಧಾನವಾಗಿ ಒಂದು ನಿರ್ದಿಷ್ಟ ಜಾತಿಯಷ್ಟೆ ಬಳಸುವುದನ್ನು ಅದು ಖಚಿತಪಡಿಸಿದ್ದಿತು. ಒಂದು ಜಾತಿಯ ಆಂತರಿಕ ಪ್ರಾದೇಶಿಕತೆಯು ನಾನಾ ಭೌಗೋಳಿಕ ಪ್ರದೇಶಗಳ ನಡುವೆ ಸಂಪನ್ಮೂಲಗಳ ಬಳಕೆಯನ್ನು ಸಮಾನವಾಗಿ ಹರಡಿದ್ದಿತು.''[೩೯]

ಈ ಪರಿಸರ-ಸ್ಥಿರತೆಯ ಸ್ಥಿತಿಯನ್ನು ಧನಾತ್ಮಕವಾಗಿಯೂ ನೋಡಬಹುದು, ಋಣಾತ್ಮಕವಾಗಿಯೂ ನೋಡಬಹುದು, ಎಂದು ಗಾಡ್ಗಿಲ್ ತಿಳಿಸುತ್ತಾರೆ.

''ಮನುಷ್ಯನು - ನಿಸರ್ಗದೊಂದಿಗೆ ಸಮತೋಲದೊಂದಿಗೆ ಜೀವಿಸುವ ಅಪೇಕ್ಷಣೀಯ ಸ್ಥಿತಿಯನ್ನಾಗಿ ಅದನ್ನು ಧನಾತ್ಮಕವಾಗಿಯೂ ಕಾಣಬಹುದು. ಪರ್ಯಾಯವಾಗಿ, ಅದನ್ನು ಸ್ಥಗಿತತೆಯ ಸ್ಥಿತಿಯನ್ನಾಗಿ ಋಣಾತ್ಮಕವಾಗಿಯೂ ಕಾಣಬಹುದು. ಏಕೆಂದರೆ, ಸಂಪನ್ಮೂಲಗಳನ್ನು ಸಮತೋಲ ರೀತಿಯಲ್ಲಿ ಬಳಸಿದರೆ, ಸಾಂಸ್ಕೃತಿಕ ವಿನಿಮಯ ಹಾಗೂ ತಾಂತ್ರಿಕ ಅನ್ವೇಷಣೆಗಳಿಗೆ ಒತ್ತಡ ಇರುವುದಿಲ್ಲ. ಇದು ನಿಸ್ಸಂದೇಹವಾಗಿಯೂ ಅದದ್ದು ಹೀಗೆಯೇ. ಭಾರತೀಯ ಸಮಾಜವೂ ಬಹುಮಟ್ಟಿಗೆ ಸಮತೋಲವಾಗಿಯೇ (ಅಥವಾ ಸ್ಥಗಿತಗೊಂಡೇ!) ಇದ್ದಿತು, ಜಾತಿಪದ್ಧತಿ ಹೆಪ್ಪುಗಟ್ಟಿಕೊಂಡಿದ್ದಿತು. ಉಪಖಂಡದ ಬಹುಭಾಗಗಳಲ್ಲಿ ಕೃಷಿ ವಸಾಹತೀಕರಣ ಪೂರ್ಣಗೊಂಡ ಬುದ್ಧನ ಕಾಲದಿಂದ ಹಿಡಿದು ಬ್ರಿಟಿಷರ ಆಡಳಿತ ಪ್ರಾರಂಭವಾದ ಕಾಲದವರೆಗೆ ಸುಮಾರು ಎರಡೂವರೆ ಸಾವಿರ ವರ್ಷಗಳವರೆಗೆ ಇದು ಹೀಗಿದ್ದಿತು. ಆದರೆ ಇದರ ಮೌಲ್ಯ ತೀರ್ಮಾನ ಒತ್ತಟ್ಟಿಗಿರಲಿ, ಭಾರತೀಯ ಜಾತಿ ಪದ್ಧತಿಯ ಒಂದು ಮುಖ್ಯ ಪರಿಣಾಮವೆಂದರೆ – ಪರಿಸರದ ಈ ಸರಿಸುಮಾರು ಸ್ಥಿರಸ್ಥಿತಿಯನ್ನು ಸಾಧಿಸಿದುದು.''[೪೦]

**(೫) ಜೀವನೋಪಾಯದ ಸುಭದ್ರತೆ :** ಗತಕಾಲದ ಜಾತಿ ಪದ್ಧತಿಯ ಒಂದು ಮುಖ್ಯ ಲಕ್ಷಣವೆಂದರೆ ಉತ್ಪಾದನೆಯು ಸ್ಥಳೀಯವಾಗಿದ್ದುದು. ಅದು ಜಾತಿಗೆ ಅನುಗುಣವಾದ ಶ್ರಮವಿಭಜನೆಯನ್ನು ಆಧರಿಸಿದ್ದಿತು, ದೊಡ್ಡ ಮಾರುಕಟ್ಟೆಯ ಅಗತ್ಯಗಳಿಗಿಂತ ಹೆಚ್ಚಾಗಿ ಸ್ಥಳೀಯ ಅಗತ್ಯಗಳನ್ನು ಪೂರೈಸುತ್ತಿದ್ದಿತು. ಈ ಸ್ಥಳೀಕೃತ ಉತ್ಪಾದನೆಯ ನೆಲೆ ಕೇವಲ ಒಂದು ಹಳ್ಳಿಯಾಗಿರಲಿಲ್ಲ, ಆದರೆ ಅಕ್ಕಪಕ್ಕದ ಹಳ್ಳಿಗಳ ಒಂದು ಗುಂಪಾಗಿದ್ದಿತು, ಈ ಒಂದೊಂದು ಗುಂಪೂ ಪ್ರತಿವಾರವೂ ಒಂದು ಅಥವಾ ಹೆಚ್ಚು ಸಂತೆಗಳನ್ನು ಏರ್ಪಡಿಸುತ್ತಿದ್ದಿತು, ಅಲ್ಲಿ ಗ್ರಾಮಸ್ಥರು ಹಾಗೂ ಸಂಚಾರೀ ವ್ಯಾಪಾರಗಾರರು ಕಲೆತು ವಸ್ತುವಿನಿಮಯ ಮಾಡಿಕೊಳ್ಳುತ್ತಿದ್ದರು, ಇಲ್ಲವೇ ದುಡ್ಡುಕೊಟ್ಟು ಬೇಕಾದ ಸಾಮಾನು ಕೊಳ್ಳುತ್ತಿದ್ದರು. ಹಳ್ಳಿಗಳ ಗುಂಪು ಮೂಲ ಆವಶ್ಯಕ ವಸ್ತುಗಳ ಉತ್ಪಾದನೆಗೆ ಸಂಬಂಧಿಸಿದಂತೆ

ಸ್ವಾವಲಂಬಿಯಾಗಿದ್ದಿತು... ಎಂದು ಎಂ. ಎನ್. ಶ್ರೀನಿವಾಸ್ ಲೇಖನವೊಂದರಲ್ಲಿ ವಿವರಿಸುತ್ತಾರೆ.[೪೧] ಭಾರತದ ಹೆಚ್ಚಿನ ಭಾಗಗಳಲ್ಲಿ ಹಳ್ಳಿ ಕೈಕಸುಬುದಾರರು, ಕ್ಷೌರಿಕರು, ಬಟ್ಟೆ ಒಗೆಯುವವರು, ಕೃಷಿಕಾರ್ಮಿಕರು ಮುಂತಾದವರು ನೀಡಿದ ಸೇವೆಗೆ ಸುಗ್ಗಿಯಾದ ಕೂಡಲೇ ವಾರ್ಷಿಕವಾಗಿ ಹಣ ರೂಪದಲ್ಲೋ ವಸ್ತು ರೂಪದಲ್ಲೋ ಸಂದಾಯ ಮಾಡುವ ಪದ್ಧತಿ ವಿಕಾಸಗೊಂಡಿದ್ದಿತು. ಈ ಸಂದಾಯವು ಕೆಲಸಕ್ಕೆ ತಕ್ಕಂತೆ (piece rate) ಇರಲಿಲ್ಲ, ಆದರೆ ಕೈಕಸುಬುದಾರರ ಹಾಗೂ ಶ್ರಮಿಕರ ಮೂಲ ಅಗತ್ಯಗಳನ್ನು ಪೂರೈಸುವುದು ಭೂಮಾಲೀಕ ಕುಟುಂಬಗಳ ಕರ್ತವ್ಯ ಎಂಬ ನೀತಿಗೆ ಅನುಗುಣವಾಗಿದ್ದಿತು. ಮದುವೆಗಳಂಥ ತುರ್ತಿನ ಅಗತ್ಯಗಳ ವಿಶೇಷ ಸಂದರ್ಭ ಬಂದಾಗ ಕಾರ್ಮಿಕ ವರ್ಗಕ್ಕೆ ವಿಶೇಷ ನೆರವು ನೀಡಲಾಗುತ್ತಿದ್ದಿತು. ಈ ವ್ಯವಸ್ಥೆಗೆ ಭಾರತದ ವಿವಿಧ ಭಾಗಗಳಲ್ಲಿ ವಿವಿಧ ಹೆಸರುಗಳಿದ್ದವು... ಉತ್ತರದಲ್ಲಿ ಜಜ್ಮಾನಿ, ಮಹಾರಾಷ್ಟ್ರದಲ್ಲಿ ಬಾರಾಬಲೂತೆ, ಮದ್ರಾಸಿನಲ್ಲಿ ಮಿರಾಸಿ, ಮೈಸೂರಿನಲ್ಲಿ ಅಡದೆ, ಇತ್ಯಾದಿ. ಜಜ್ಮಾನ್‌ನ ಮತ್ತು ಅವನ ಕಮಿನ್‌ರ ನಡುವಿನ ಸಂಬಂಧ ಅಸಮಾನವಾಗಿದ್ದಿತು, ಏಕೆಂದರೆ ಕಮಿನ್‌ಗಳನ್ನು ಕೀಳು ಜಾತಿಯವರೆಂದು ಭಾವಿಸಲಾಗಿದ್ದಿತು.[೪೨] ಭೂಮಾಲೀಕ ಸಮುದಾಯಗಳ ಮತ್ತು ಪಾರಂಪರಿಕವಾಗಿ ಅಧೀನರಾದ ಸಮುದಾಯಗಳ ನಡುವೆ ನಿರಂತರ ಸಂಘರ್ಷಗಳು ಜರುಗುತ್ತಿದ್ದು ಕೆಲವು ವೇಳೆ ಅಧೀನರ ಮೇಲೆ ದುರಾಚಾರಗಳಲ್ಲಿ ಕೊನೆಗೊಳ್ಳುತ್ತಿದ್ದವು. ಜಾತಿಪದ್ಧತಿಗೆ ಯಾವುದೇ ರೀತಿಯ ಧಾರ್ಮಿಕ ಬೆಂಬಲಕ್ಕಿಂತ ಹೆಚ್ಚಾಗಿ ಪೋಷಕ-ಸೇವಕ ಸಂಬಂಧವೂ, ಅದು ಮುರಿದುಬೀಳುವುದೂ, ಇದಕ್ಕೆ ಕಾರಣವಾಗಿದ್ದಿತು. ಕೊನೆಯ ಪಕ್ಷ ಈ ವ್ಯವಸ್ಥೆಯು, ಹಿಂದಿನ ಕಾಲದಲ್ಲಿ, ಕೆಲಸ ಮಾಡುವ ಹಾಗೂ ಜೀವನೋಪಾಯದ ಹಕ್ಕನ್ನು ಮನ್ನಿಸಿದ್ದಿತು ಮತ್ತು ತನ್ಮೂಲಕ ಪೈಪೋಟಿಯನ್ನು ಹತೋಟಿಯಲ್ಲಿಟ್ಟಿದ್ದಿತು. ಈ ಪೋಷಕ-ಸೇವಕ ಸಂಬಂಧ ಅನೇಕ ಪೀಳಿಗೆಗಳ ಆಚೆಗೂ ವ್ಯಾಪಿಸಿದ್ದಿತು. ಸಲ್ಲಿಸಿದ ಸೇವೆಗೆ ಕಡಿಮೆ ಪ್ರತಿಫಲ ಕೇಳುತ್ತಾನೆಂಬ ಕಾರಣದಿಂದಾಗಿಯಷ್ಟೆ ಪೋಷಕನೊಬ್ಬ ಹೊಸ ಸೇವಕನನ್ನು ನೇಮಿಸಿಕೊಳ್ಳುವಂಥ ವ್ಯವಸ್ಥೆ, ಕೊನೆಯಪಕ್ಷ ಪಾರಂಪರಿಕ ವ್ಯವಸ್ಥೆಯಲ್ಲಿ ಇರಲಿಲ್ಲ. ಅದೇರೀತಿ ಸೇವಕನೊಬ್ಬ ತನಗೆ ಅಧಿಕ ವೇತನ ನೀಡುವನೆಂಬ ಕಾರಣದಿಂದಾಗಿ ಹೊಸ ಪೋಷಕನನ್ನು ಹುಡುಕಿಕೊಳ್ಳುವ ಪದ್ಧತಿಯೂ, ಅದರಲ್ಲೂ ಆ ಪೋಷಕನಿಗೆ ಇವನ ಸೇವಾಕಾರ್ಯ ಅತ್ಯಗತ್ಯವಾಗಿದ್ದಾಗ, ಇರಲಿಲ್ಲ. ತನ್ನ ಸೇವಕನೂ ಅವನ ಕುಟುಂಬವೂ ಉಪವಾಸ ಬೀಳದಂತೆ ನೋಡಿಕೊಳ್ಳುವುದು ಪೋಷಕನ ಕರ್ತವ್ಯವಾಗಿದ್ದಿತು. ಅನಿರೀಕ್ಷಿತವಾಗಿ ಅತಿಥಿಗಳು ಬಂದು ಆಹಾರ ಪದಾರ್ಥಗಳು ಸೀಮಿತ ಪ್ರಮಾಣದಲ್ಲಿದ್ದಾಗ, ಕುಟುಂಬದ ಯಜಮಾನನೂ ಅವನ ಕುಟುಂಬ ಸದಸ್ಯರೂ ತಮ್ಮ ಪಾಲಿನ ಆಹಾರ ಪದಾರ್ಥಗಳಲ್ಲಿ ಕಡಿತ ಮಾಡಬೇಕೇ ಹೊರತು ಸೇವಕರ ಪಾಲಿನ ಆಹಾರ ಪ್ರಮಾಣಗಳಲ್ಲಿ ಕಡಿತ ಮಾಡಬಾರದು, ಎಂದು ತುಂಬ ಅವಹೇಳನಕ್ಕೆ ಗುರಿಯಾಗಿರುವ ಆಪಸ್ತಂಬ ಧರ್ಮ ಸೂತ್ರವೇ ತಿಳಿಸುತ್ತದೆ. ಅದರ ಪ್ರಕಾರ ಸೇವಕರು ಸರಿಯಾದ ಪ್ರಮಾಣದ ಆಹಾರ ಪಡೆಯಬೇಕು. ಸೇವಕರ ಖರ್ಚಿನಲ್ಲಿ ಅತಿಥಿಗಳ ಊಟೋಪಚಾರವಾಗಬಾರದು.[೪೩]




ಈ ಪದ್ಧತಿಯು ಏನೊಂದೂ ಲೋಪದೋಷವಿಲ್ಲದ ಆದರ್ಶಯುತ ಪದ್ಧತಿಯಾಗಿದ್ದಿತೆಂದೇನೂ ಅಲ್ಲ. ಈ ರೀತಿಯ ಪೋಷಕ-ಸೇವಕ ಸಂಬಂಧದಿಂದ ಹೊಮ್ಮುವ ಎಲ್ಲ ಕುಂದುಕೊರತೆಗಳೂ ಎದ್ದುಕಾಣುತ್ತಿದ್ದವು. ಸ್ಪರ್ಧೆಯೇ ಇರುತ್ತಿರಲಿಲ್ಲ, ಉತ್ಪಾದನೆ ಕೇವಲ ಹೊಟ್ಟೆಪಾಡಿಗೆ ಸಾಲುವಷ್ಟಕ್ಕಷ್ಟೆ ಸೀಮಿತವಾಗಿದ್ದಿತು. ಆಗಾಗ್ಗೆ ಉಂಟಾಗುತ್ತಿದ್ದ ಬರಗಾಲ ಪರಿಸ್ಥಿತಿಗಳಲ್ಲಿ, ಮಧ್ಯಯುಗಾನಂತರ ಕಂಡುಬರತೊಡಗಿದ ಉನ್ನತ ರಾಜಕೀಯ ಅಸ್ಥಿರತೆಯ ಪರಿಸ್ಥಿತಿಗಳಲ್ಲಿ, ಆರ್ಥಿಕ ವಿಕಾಸಕ್ಕಿಂತ ಆಹಾರ ಸುಭದ್ರತೆಯ ಕಡೆಗೇ ಹೆಚ್ಚಿನ ಗಮನ ನೀಡಬೇಕಾಗುತ್ತಿತ್ತು. ಆದಾಗ್ಯೂ, ಈ ಪದ್ಧತಿಯ ಕೆಳಗೂ ಶ್ರಮವಿಭಜನೆ ಹಾಗೂ ವಿಶೇಷೀಕರಣದ ಫಲವಾಗಿ ಕಲೆ ಕಸುಬುಗಳು ಏಳಿಗೆ ಪಡೆದವು, ಅದರಲ್ಲೂ ವಿಶೇಷವಾಗಿ ರಾಜಕೀಯ ಆಶ್ರಯ ಪೋಷಣೆ ದೊರೆತಾಗ. ವಿಜಯನಗರದ ರಾಜರುಗಳ ಹಾಗೂ ಮೊಘಲ್ ಚಕ್ರವರ್ತಿಗಳ ಪೋಷಣೆಯ ಕೆಳಗೆ ಹೀಗೆಯೇ ಜರುಗಿತು. ಅಂಥ ಸುಭದ್ರತೆಯ ಪರಿಸ್ಥಿತಿಯಲ್ಲಿ ಜಾತಿಪದ್ಧತಿ ಉಳಿದುದರಲ್ಲಿ ಆಶ್ಚರ್ಯವೇನಿಲ್ಲ. ಮುಸ್ಲಿಮ್ ಶಾಸಕರಾಗಲೀ ಬ್ರಿಟಿಷ್ ಶಾಸಕರಾಗಲೀ ಈ ಪದ್ಧತಿಗೆ ಅಡ್ಡಬರಲಿಲ್ಲ. ಅನೇಕ ಹಿಂದೂಗಳು ಮತಾಂತರ ಗೊಂಡಿರಬಹುದು. ಆದರೆ ಇಸ್ಲಾಂ ಹಾಗೂ ಕ್ರಿಶ್ಚಿಯನ್ ಧರ್ಮಗಳೂ ಜಾತಿಪದ್ಧತಿಯನ್ನು ತಮ್ಮಲ್ಲಿ ಮೈಗೂಡಿಸಿಕೊಂಡವು. ಏಕೆಂದರೆ, ಜಾತಿಪದ್ಧತಿಯ ಜಜ್ಮಾನಿ ವ್ಯವಸ್ಥೆಯಾಗಲೀ ಇತರ ಕ್ರಿಯೆ (function)ಗಳಾಗಲೀ ಮತಧರ್ಮದೊಂದಿಗೆ ಯಾವ ಸಂಬಂಧವನ್ನು ಹೊಂದಿರಲಿಲ್ಲ.

**ಒಂದು ಪದ್ಧತಿಯಾಗಿ ಜಾತಿಯ ಪತನ...**

ಮರಣಾನಂತರ ಪ್ರಕಟವಾದ ಎಂ. ಎನ್. ಶ್ರೀನಿವಾಸರ ಪ್ರಬಂಧವೊಂದು 'An obituary on caste as a system'[೪೪] ಎಂಬ ಶೀರ್ಷಿಕೆ ಹೊಂದಿದೆ. ವಿಚಿತ್ರವೆಂದರೆ, ಜಾತಿ ಪದ್ಧತಿಯೇನೋ ನಿಧನವಾಗಿದೆ, ಆದರೆ ಜಾತಿಯ ಗುರುತು (identity)ಗಳು ಉಳಿದುಕೊಂಡೇ ಇವೆ, ಕಣ್ಮರೆಯಾಗುವ ಸೂಚನೆಗಳಿಲ್ಲ. ಜಾತಿಪದ್ಧತಿ ಸತ್ತಿದೆ. ಆದರೆ ಅದರ ಭೂತ ಉಳಿದುಕೊಂಡೇ ಇದೆ ಎಂದು ಕಂಡುಬರುತ್ತದೆ. ಶ್ರೀನಿವಾಸರ ಪ್ರಕಾರ ಜಾತಿಪದ್ಧತಿ ಎಂದರೆ ಪ್ರಧಾನವಾಗಿ ಸ್ಥಳೀಕೃತ ಸಾಮಾಜಿಕ ಉತ್ಪಾದನಾ ನೆಲೆ, ಜೀವನಾಧಾರ ಆರ್ಥಿಕತೆ ಹಾಗೂ ಜಾತಿ-ಆಧಾರಿತ ವೃತ್ತಿಗಳು. ಆದರೆ ಒಂದು ಪದ್ಧತಿಯಾಗಿ ಜಾತಿಯ ಈ ಪ್ರಬಂಧದ ಆರಂಭದಲ್ಲಿ ಪಟ್ಟಿಮಾಡಿರುವ ಎಲ್ಲ ಲಕ್ಷಣಗಳನ್ನೂ ಮತ್ತು ಈ ಹಿಂದಿನ ವಿಭಾಗದಲ್ಲಿ ಪಟ್ಟಿಮಾಡಿರುವ ಎಲ್ಲ ಕ್ರಿಯೆ (function) ಗಳನ್ನೂ ಒಳಗೊಂಡಿದೆ. ಶ್ರೀನಿವಾಸರು ಇಲ್ಲಿ ಚರ್ಚಿಸಲಾಗಿರುವ ಕೊನೆಯ ಕ್ರಿಯೆಗೆ ವಿಶಿಷ್ಟವಾಗಿ ಉಲ್ಲೇಖಿಸುತ್ತಾರೆ. ಆದರೆ ಈ ಪದ್ಧತಿಯ ರಚನೆಯನ್ನು ನಿರ್ಧರಿಸುವಾಗ ಇತರ ಕ್ರಿಯೆಗಳೂ ಕಡಿಮೆ ಮಹತ್ವದ್ದೇನಲ್ಲ. ಒಂದು ಪದ್ಧತಿಯಾಗಿ ಜಾತಿ ಇಂದು ಮುರಿದುಬಿದ್ದಿದೆ, ಏಕೆಂದರೆ, ಅದರ ಎಲ್ಲ ಕ್ರಿಯೆಗಳೂ ಮುರಿದುಬಿದ್ದಿವೆ. ಅದು ಹೊಂದಿರಬಹುದಾಗಿದ್ದಂಥ ಯಾವುದೇ ಪ್ರಸ್ತುತತೆ, ಪಾತ್ರ, ಉಪಯುಕ್ತತೆ ಹಾಗೂ ಸಮರ್ಥನೆಯನ್ನೂ ಅದು ಇಂದು ಕಳೆದುಕೊಂಡಿದೆ.

ಈ ಪದ್ಧತಿಯ ಪತನಕ್ಕೆ ನೈತಿಕ, ರಾಜಕೀಯ, ಸಾಮಾಜಿಕ ಹಾಗೂ ಯಂತ್ರತಾಂತ್ರಿಕ (technological) ಅಂಶಗಳನೇಕವು ಕಾರಣವಾಗಿವೆ. ಜಾತಿಪದ್ಧತಿಯು ಒಂದು ರೀತಿಯ ಸ್ಥಿರತೆ ಹಾಗೂ ಸುಭದ್ರತೆಯನ್ನೂ ಸಹ ನೀಡಿದ್ದರೂ, ಮಾನವೀಯತೆಯ ಹಾಗೂ ಸಾಮಾಜಿಕ ನ್ಯಾಯದ ದೃಷ್ಟಿಯಿಂದ ಅದು ತನ್ನ ಪ್ರಸ್ತುತತೆಯನ್ನು ಕಳೆದುಕೊಂಡಿತು. ಕೆಳಜಾತಿಗಳ ಮೇಲೆ ನಾನಾ ರೀತಿಯ ಅವಮಾನಕರ ಹೀನಾಯಕತೆಗಳನ್ನು ಹೊರಿಸಲಾಯಿತು, ಶಿಕ್ಷಣಕ್ಕೆ ಅವಕಾಶಗಳನ್ನು ಮುಚ್ಚಲಾಯಿತು, ಅನಪೇಕ್ಷಣೀಯ ಹಾಗೂ ಅಮಾನವೀಯ ಸ್ಥಿತಿಗೆ ತಳ್ಳಲಾಯಿತು. ಹೀಗೆ ಜಾತಿಪದ್ಧತಿಯು, ಅದರಲ್ಲೂ ವಿಶೇಷವಾಗಿ ಅದರ ತೀವ್ರ ಸ್ವರೂಪವಾದ ಅಸ್ಪೃಶ್ಯತೆಯು, ಬುದ್ಧನ ಕಾಲದಿಂದ, ಮತ್ತೆ ಮಧ್ಯಯುಗದಿಂದ, ಮತ್ತೆ ಆಧುನಿಕ ಕಾಲದಲ್ಲೂ ಸಹ, ಅಪಖ್ಯಾತಿಗೆ ಈಡಾಯಿತು, ಖಂಡನೆಗೆ ಒಳಗಾಯಿತು.

ಜಾತಿಪದ್ಧತಿಯ ಕ್ರಿಯಾತ್ಮಕ ಮಹತ್ವವೂ ಕಣ್ಮರೆಯಾಯಿತು. ಇದು ಅದರ ಪತನವನ್ನು ಇನ್ನೂ ಹೆಚ್ಚು ಅನಿವಾರ್ಯವನ್ನಾಗಿ ಮಾಡಿತು. ಆಧುನಿಕ ರಾಜ್ಯವು (State) ಹೆಚ್ಚು ಶಕ್ತಿಯುತವಾದ ಹೆಚ್ಚು ಬಲಿಷ್ಠವಾದ ಹಾಗೂ ಹೆಚ್ಚು ವ್ಯಾಪಕವಾದ ಸಂಸ್ಥೆಯಾಗಿ ಹುಟ್ಟಿಕೊಂಡುದು ಒಂದು ಪ್ರಧಾನ ಅಂಶವಾಗಿದೆ. ರಾಜ್ಯದ ವಿವಿಧ ಅಂಗಗಳಾದ ಕಾರ್ಯಾಂಗ, ನ್ಯಾಯಾಂಗ ಹಾಗೂ ಶಾಸಕಾಂಗಗಳು ಹಿಂದೆಂದೂ ಇರದಷ್ಟು ಪ್ರಬಲವಾಗಿ ಬೆಳೆದಿವೆ. ಇವು ಎಲ್ಲರ ಮೇಲೂ ಪ್ರಭಾವ ಬೀರಬಲ್ಲವಾಗಿವೆ. ಹಿಂದೂ ಧರ್ಮವು ವೈಯಕ್ತಿಕ ಕಾನೂನುಗಳನ್ನೂ ಒಳಗೊಂಡು ತನ್ನದೇ ಕಾನೂನುಗಳನ್ನು ಜಾರಿಗೊಳಿಸಬಲ್ಲಂಥ ಆಧುನಿಕ ರಾಜ್ಯ ಉದ್ಭವಿಸಿರುವುದನ್ನು ಒಪ್ಪಿಕೊಂಡಿದೆ. ನಿತ್ಯ ಜೀವನದಲ್ಲಿ ಜನರ ನಡವಳಿಕೆಯನ್ನು ನಿಯಂತ್ರಿಸುವಂಥ ಧಾರ್ಮಿಕ ಕಾನೂನುಗಳ ವಲಯ ತುಂಬ ಗಣನೀಯವಾಗಿ ಕುಗ್ಗಿದೆ. ಹಾಗಾಗಿ ಈಗ ಧಾರ್ಮಿಕ ವಿಷಯಗಳಲ್ಲಿ ವಸ್ತುತಃ ಶಾಸನಗಳಾಗಿ ಸೇವೆ ಸಲ್ಲಿಸುತ್ತಿದ್ದ ಧರ್ಮಶಾಸ್ತ್ರಗಳಿಗಾಗಲೀ, ನ್ಯಾಯಾಂಗವಾಗಿ ಕೆಲಸ ಮಾಡುತ್ತಿದ್ದ ಜಾತಿ-ಪಂಚಾಯಿತಿಗಳಿಗಾಗಲೀ ಅಗತ್ಯವೇ ಇಲ್ಲದಂತಾಗಿದೆ. ಇದೇ ಕಾರಣದಿಂದಾಗಿ ಇತಿಮಿತಿಗಳ ಹಾಗೂ ಸಮತೋಲಗಳ ಪದ್ಧತಿಯನ್ನು ಒದಗಿಸಿದ್ದ ವರ್ಣಪದ್ಧತಿಯ ಪಾತ್ರವೂ ಕಣ್ಮರೆಯಾಗಿದೆ. ಈಗ ಸಮತೋಲವನ್ನೂ ಸ್ಥಿರತೆಯನ್ನೂ ಕಾಪಾಡಲು ಶಾಸನಬದ್ಧವಾಗಿ ಕಾರ್ಯರೂಪಕ್ಕೆ ತಂದಂಥ ಹಾಗೂ

ಎಲ್ಲರೂ ಅಂಗೀಕರಿಸಿರುವಂಥ ಸಂವಿಧಾನವು ಇತಿಮಿತಿಗಳ ವ್ಯವಸ್ಥೆಯನ್ನು ಒದಗಿಸುತ್ತಿದೆ.

ಈ ವ್ಯವಹಾರದಲ್ಲಿ, ಜಾತಿಪದ್ಧತಿ ಒದಗಿಸಿದ ವಿಕೇಂದ್ರೀಕೃತ ಪ್ರಜಾಪ್ರಭುತ್ವ ವ್ಯವಸ್ಥೆಯು ಮುರಿದುಬಿದ್ದಿರುವುದರಿಂದ, ಗ್ರಾಮ ಆಧಾರಿತವಾದ ಹೊಸ ಮಾದರಿಯ ವಿಕೇಂದ್ರೀಕೃತ ಪ್ರಜಾಪ್ರಭುತ್ವವೊಂದು ಅದರ ಸ್ಥಾನ ಪಡೆದುಕೊಂಡಿದೆ. ಇದಕ್ಕೆ ಧರ್ಮದ ಪ್ರಮಾಣ ಮುದ್ರೆ ಏನೂ ಬೇಕಾಗಿಲ್ಲ, ಇದಕ್ಕೆ ಸಂವಿಧಾನದ ಹಾಗೂ ರಾಜ್ಯಾಧಿಕಾರದ ಬೆಂಬಲವಿದೆ. ಇದು ಹೆಚ್ಚು ಮುಖ್ಯ. ಪ್ರಭಾವಶಾಲಿ ಜಾತಿಗಳು ಗ್ರಾಮ ಪಂಚಾಯಿತಿಗಳನ್ನು ಕೆಲವು ಕಾಲ ಅಪಹರಿಸಲು ಯತ್ನಿಸಬಹುದು, ಆದರೆ ಅದೊಂದು ಸೋಲು ಖಚಿತವಾದ ಕದನ. ಹಿಂದುಳಿದ ವರ್ಗಗಳಿಗೂ ಅಸ್ಪೃಶ್ಯರಿಗೂ ಮತ್ತು ಮಹಿಳೆಯರಿಗೂ ಸಹ ಮೀಸಲಾತಿ ಒದಗಿಸಿರುವ ವ್ಯವಸ್ಥೆಯು ಪ್ರಭಾವೀ ಜಾತಿಗಳ ಪಾತ್ರವನ್ನು ಕ್ರಮೇಣ, ಆದರೆ ಖಂಡಿತವಾಗಿ, ಕುಗ್ಗಿಸಲಿರುವುದು. ಜಾತ್ಯತೀತ ಹಾಗೂ ಒಟ್ಟಾರೆ ಶಕ್ತಿಗಳು ಜಾತಿ ಶಕ್ತಿಗಳ ಮೇಲೆ ಹತೋಟಿ ಸಾಧಿಸಲಿರುವುವು. ಕೆಲವು ಕ್ಷೇತ್ರಗಳಲ್ಲಿ ಅವು ಇನ್ನೂ ಹತೋಟಿ ಸಾಧಿಸಲಾಗಿರದಿದ್ದರೂ ಅನತಿ ಕಾಲದಲ್ಲಿ ಹಾಗೆ ಮಾಡೇತೀರುವುವು. ಜಾತಿಪದ್ಧತಿಯ ವಿರುದ್ಧ ರಾಜಕೀಯ ಒಮ್ಮತವೂ ಪ್ರಜಾಪ್ರಭುತ್ವದಲ್ಲಿನ ವಯಸ್ಕರ ಮತದಾನ ಶಕ್ತಿಯೂ ಪ್ರಜಾಸತ್ತಾತ್ಮಕ ಹಾಗೂ ಜಾತ್ಯತೀತ ಶಕ್ತಿಗಳ ಯಶಸ್ಸನ್ನು ಖಚಿತಪಡಿಸುವುವು ಮತ್ತು ಜಾತಿಶಕ್ತಿಗಳನ್ನು ಪರಾಭವಗೊಳಿಸುವುವು.

ಜಾತಿಪದ್ಧತಿಯ ವಿರುದ್ಧ ಕ್ರಿಯೆ ಜರುಗಿಸಿದ ಮತ್ತೊಂದು ಅಂಶವೆಂದರೆ ಆಧುನಿಕ ಜಾತ್ಯತೀತ ಶಿಕ್ಷಣದ ಉಗಮ. ವಿದ್ಯಾಭ್ಯಾಸವು ಈಗ ಕುಟುಂಬ-ಆಧಾರಿತ ಆಗಿರಬೇಕಿಲ್ಲ, ಆಗಿಲ್ಲ. ಆದರೂ ಕುಟುಂಬ-ಶಿಕ್ಷಣ ಬಾಹ್ಯ ಶಿಕ್ಷಣಕ್ಕೆ ಪೂರಕವಾಗುವುದು. ವಾಣಿಜ್ಯ ಶಾಲೆಗಳು, ವೃತ್ತಿಪರ ಕಾಲೇಜುಗಳು ಹಾಗೂ ವಿವಿಧ ತಾಂತ್ರಿಕ ವಿದ್ಯಾಸಂಸ್ಥೆಗಳನ್ನೂ ಒಳಗೊಂಡಂತೆ ಎಲ್ಲ ಶಾಲಾಕಾಲೇಜುಗಳು ಅವಶ್ಯ ಶಿಕ್ಷಣ ಹಾಗೂ ಕೌಶಲ್ಯ ಒದಗಿಸುತ್ತವೆ. ಹಾಗಾಗಿ ಆನುವಂಶಿಕ ವೃತ್ತಿಯ ಆವಶ್ಯಕತೆ ಈಗ ಇಲ್ಲವಾಗಿದೆ. ಸಾಮಾಜಿಕ ಗತಿಶೀಲತೆಯು (ಅಂದರೆ ಸಮಾಜದಲ್ಲಿ ವಿವಿಧ ಜಾತಿಗಳ ನಡುವೆ ಮುಕ್ತ ಹೋಗುಬರುವಿಕೆಯು) ಇನ್ನೂ ಹೆಚ್ಚುವುದು.

ಹೊಸ ವೃತ್ತಿಗಳು ಉದಯಿಸಿ ಹಲವಾರು ಹಳೆಯ ವೃತ್ತಿಗಳು ನಶಿಸಿಹೋಗಿರುವುದೂ ವೃತ್ತಿಯಲ್ಲಿ ಆನುವಂಶಿಕ ಸೂತ್ರವನ್ನು ಅನವಶ್ಯಗೊಳಿಸಿದೆ. ನಾನಾ ರೀತಿಯ ವೃತ್ತಿಗಳು ಬೆಳೆದು ಅವುಗಳ ನಡುವಿನ ಚಲನಶೀಲತೆ ಎಷ್ಟು ಹೆಚ್ಚಿದೆಯೆಂದರೆ ವೃತ್ತಿಯಲ್ಲಿ ಆನುವಂಶಿಕ ಸೂತ್ರವು ಈಗ ಸಂಪೂರ್ಣವಾಗಿ ಹಳತಾಗಿದೆ, ಅರ್ಥಹೀನವಾಗಿದೆ. ಸಮಾಚಾರ ಯುಗವು ಹೊಸ ವೃತ್ತಿಗಳಿಗೆ ಪ್ರವೇಶ ತೆರೆದಿದೆ. ಈ ವೃತ್ತಿಗಳನ್ನು ನಾಲ್ಕು ಪಾರಂಪರಿಕ ವರ್ಣಗಳ ವಲಯದಲ್ಲಿ ವರ್ಗೀಕರಿಸುವುದು ಸಾಧ್ಯವಿಲ್ಲ. ಪಾರಂಪರಿಕ ವರ್ಣಪದ್ಧತಿಯಲ್ಲೂ ಎಲ್ಲ ಬೌದ್ಧಿಕ ಕಾರ್ಯಭಾರಗಳನ್ನೂ ಬ್ರಾಹ್ಮಣರಿಗಷ್ಟೆ ಪ್ರತ್ಯೇಕವಾಗಿ ಇರಿಸಲಾಗಿದ್ದಿತೆಂದು ವ್ಯಾಖ್ಯಾನಿಸುವುದು ತಪ್ಪು. ವೇದಗಳ ಅಧ್ಯಯನದಲ್ಲೂ ಪೌರೋಹಿತ್ಯ ಕಾರ್ಯಗಳಲ್ಲೂ ಬ್ರಾಹ್ಮಣರು ಸ್ವಲ್ಪಮಟ್ಟಿಗಿನ ಏಕಸ್ವಾಮ್ಯ ಪಡೆದಿದ್ದರೂ ಅವರು ಬೌದ್ಧಿಕ ಚಟುವಟಿಕೆಗಳ ಮೇಲೆಲ್ಲ ಏಕಸ್ವಾಮ್ಯವನ್ನೇನೂ ಹೊಂದಿರಲಿಲ್ಲ. ಈಗ ಪೌರೋಹಿತ್ಯದ ಏಕಸ್ವಾಮ್ಯವನ್ನೂ ಮುರಿದುಹಾಕಲಾಗಿದೆ. ಇದೀಗ ವಿವಿಧ ಜಾತಿಗಳು, ಬ್ರಾಹ್ಮಣ ಜಾತಿಯಿಂದ ಹೊರಗೆ, ತಮ್ಮವೇ ಪುರೋಹಿತರುಗಳನ್ನು ಏರ್ಪಡಿಸಿಕೊಳ್ಳುತ್ತಿವೆ, ತಮ್ಮವೇ ಮತಕ್ರಿಯೆಗಳನ್ನು ವಿಕಾಸಗೊಳಿಸಿಕೊಳ್ಳುತ್ತಿವೆ. ಶ್ರೀ ನಾರಾಯಣ ಗುರುಗಳೂ ಮಾತಾ ಅಮೃತಾನಂದಮಯಿಯವರೂ ಪ್ರಾರಂಭಿಸಿದ ಸಂಸ್ಥೆಗಳು ಎಲ್ಲ ಜಾತಿಗಳ ಜನರ ನಡುವಿನಿಂದಲೂ ಪುರೋಹಿತರನ್ನು ತರಬೇತುಗೊಳಿಸುತ್ತಿವೆ. ಮಹಿಳೆಯರಿಗೂ ಈ ಸೌಲಭ್ಯ ಒದಗಿಸುತ್ತಿವೆ. ಮತಕ್ರಿಯೆಗಳನ್ನೂ ಧಾರ್ಮಿಕ ಆಚರಣೆಗಳನ್ನೂ ನಡೆಸುವುದನ್ನು ಬ್ರಾಹ್ಮಣರಿಗಷ್ಟೆ ಮೀಸಲಿರಿಸಲಾಗಿದ್ದಿತು ಎಂಬುದು ತುಂಬ ಉತ್ಪ್ರೇಕ್ಷೆಯ ಮಾತು. ಏನೇ ಆಗಲಿ ಅದು ವಿಶಿಷ್ಟವಾಗಿ ಬೌದ್ಧಿಕವೇನೂ ಆಗಿರಲಿಲ್ಲ, ಏಕೆಂದರೆ ಪ್ರತಿಯೊಂದು ಕಾರ್ಯದಲ್ಲೂ– ರಾಜ್ಯ ನಿರ್ವಹಣೆ, ಯುದ್ಧ, ಕೃಷಿ, ಕಲೆ, ಕೈಕಸಬು, ಈ ಎಲ್ಲ ಕಾರ್ಯಗಳಲ್ಲೂ– ಬೌದ್ಧಿಕ ಶಕ್ತಿಯ ಪಾತ್ರ ಅಗತ್ಯವೇ ಆಗಿದ್ದಿತು. ಆಧುನಿಕ ಕಾಲದಲ್ಲಿ, ಅದರಲ್ಲೂ ಈ ಸಮಾಚಾರ ಯುಗದಲ್ಲಿ, ಇದು ಇನ್ನೂ ಹೆಚ್ಚು ವಾಸ್ತವ. ಈಗ ಕೇವಲ ಒಂದು ವಿಭಾಗದಲ್ಲಲ್ಲ, ಪ್ರತಿಯೊಂದು ವಿಭಾಗದಲ್ಲೂ ಬುದ್ಧಿಶಕ್ತಿಯ ಹಾಗೂ ಸಮಾಚಾರದ ಪಾತ್ರ ಅಗತ್ಯವಾಗಿದೆ. ಈ ಅಂಶವನ್ನು ಇಲ್ಲಿ ಏಕೆ ಇಷ್ಟು ವ್ಯಾಪಕವಾಗಿ ಹೇಳಲಾಗುತ್ತಿದೆಯೆಂದರೆ, ಇಂದಿನ ಸಮಾಚಾರ ಯುಗದ ಹೊಸ ಬೌದ್ಧಿಕ ಕಾರ್ಯಭಾರಗಳನ್ನು ಯಾಂತ್ರಿಕವಾಗಿ 'ಬ್ರಾಹ್ಮಣೀಯ' ಎಂದು ವ್ಯಾಖ್ಯಾನಿಸಲಾಗದು. ವೈದ್ಯಶಾಸ್ತ್ರದ ಬೌದ್ಧಿಕ ಅಧ್ಯಯನ ಹಾಗೂ ಸಂಶೋಧನೆ ಬ್ರಾಹ್ಮಣ ವರ್ಣಕ್ಕೆ ಉಚಿತವಾದುದು, ಆದರೆ ವೈದ್ಯಕೀಯ ಆಚರಣೆ (practice) ಶೂದ್ರ ವರ್ಣಕ್ಕೆ ಉಚಿತ, ಎಂದು ಹೇಳಲು ಸಾಧ್ಯವೆ ? ಅಧ್ಯಯನವನ್ನೂ ಆಚರಣೆಯನ್ನೂ ಪ್ರತ್ಯೇಕಿಸುವುದು ಹೇಗೆ ಸಾಧ್ಯ ?

ಹೊಸ ವೃತ್ತಿಗಳೂ ಕಸುಬುಗಳೂ ಹುಟ್ಟಿಕೊಂಡಂತೆ ಅನೇಕ ಹಳೆಯ ವೃತ್ತಿಗಳು ಕಣ್ಮರೆಯಾಗಿವೆ. ಅವುಗಳಲ್ಲಿ ಕೆಲವಂತೂ ಮನೆಗಳೊಳಕ್ಕೇ ನುಸುಳಿವೆ. ಅವಕ್ಕೆ ಇನ್ನೆಷ್ಟು ಮಾತ್ರವೂ ವಿಶೇಷೀಕೃತ ವೃತ್ತಿಗಳು ಹಾಗೂ ಜಾತಿವೃಂದಗಳು ಅವಶ್ಯವಿಲ್ಲ. ಇದಕ್ಕೆ ಮುಖ್ಯ ಕಾರಣ ತಾಂತ್ರಿಕ ಕ್ಷೇತ್ರದಲ್ಲಾಗಿರುವ ಬದಲಾವಣೆ. ಕಳೆದ ೫೦ ವರ್ಷಗಳಲ್ಲಿ ಗ್ರಾಮಾಂತರಗಳಲ್ಲೂ ಪಾಯಿಖಾನೆ ಪದ್ಧತಿಯಲ್ಲಿ ಕ್ರಾಂತಿಕಾರಿ ಬದಲಾವಣೆಯಾಗಿದೆ. ಹಾಗಾಗಿ ಮಾನವ ತ್ಯಾಜ್ಯಗಳನ್ನು ಹಿಂದೆ ಮಾಡುತ್ತಿದ್ದಂತೆ ತಲೆಯ ಮೇಲೆ ಹೊತ್ತು ಸಾಗಿಸುವ ಪದ್ಧತಿಯ ಆವಶ್ಯಕತೆ ಈಗ ಏನೇನೂ ಇಲ್ಲ. ಪಾಯಿಖಾನೆಗಳು ಈಗ ಮನೆಗಳೊಳಕ್ಕೇ ಬಂದಿವೆ. ಕುಟುಂಬದ ಸದಸ್ಯರೇ ಅವನ್ನು ಶುದ್ಧಗೊಳಿಸುತ್ತಾರೆ. ಕೊಳಕು ಹಾಗೂ ಮಾಲಿನ್ಯಕಾರಕ ಎಂದು ಪರಿಗಣಿಸಲಾಗಿದ್ದ ಕಾರ್ಯಗಳನ್ನು ಈಗ ಇನ್ನೆಷ್ಟು ಮಾತ್ರವೂ ನೇರವಾಗಿ ಕೈಗಳಿಂದ ಮಾಡಬೇಕಿಲ್ಲ, ಯಂತ್ರಗಳ ಹಾಗೂ ಯಂತ್ರೋಪಕರಣಗಳ ನೆರವಿನಿಂದ ಮಾಡುವುದು ಸಾಧ್ಯವಿದೆ. ಕೊಳಕು ಎನ್ನುವಂಥ ಕಾರ್ಯಭಾರಗಳನ್ನು ನಡೆಸುವಾಗಲೂ ಈಗ ಶುದ್ಧವಾಗಿ ಆರೋಗ್ಯಕರವಾಗಿ ಇರಬಹುದಾಗಿದೆ. ಹಾಗಾಗಿ ಕೊಳಕು ಕೆಲಸಗಳನ್ನು ಮಾಡಲು ಪ್ರತ್ಯೇಕ ಜಾತಿಗಳೇ ಇರಬೇಕು, ಆ ಜಾತಿಗಳವರನ್ನು ಪ್ರತ್ಯೇಕವಾಗಿ ಇರಿಸಬೇಕು, ಎಂಬ ವಿವೇಚನೆ ಈಗ ಸಂಪೂರ್ಣವಾಗಿ ನಷ್ಟವಾಗಿದೆ.

ಆಲ್ವಿನ್ ಟೊಫ್ಲರ್ ಎಂಬುವರು 'ದಿ ಥರ್ಡ್ ವೇವ್' (ಮೂರನೆಯ ಅಲೆ) ಎಂಬ ತಮ್ಮ ಗ್ರಂಥದಲ್ಲಿ 'ಪ್ರೊಸ್ಯುಮಿಂಗ್' ಅಥವಾ 'ಪ್ರೊಸ್ಯೂಮರ್' ಎಂಬ ಈಚೆಗಿನ ವಿದ್ಯಮಾನವನ್ನೂ ಉಲ್ಲೇಖ ಮಾಡಿದ್ದಾರೆ. ಉತ್ಪಾದನೆ (ಪ್ರೊಡಕ್ಷನ್) ಹಾಗೂ ಗ್ರಾಹಕ (ಕನ್‌ಸ್ಯೂಮರ್)ರ ನಡುವಿನ ವಿಭಜನ ರೇಖೆ ಅಳಿಸಿಹೋಗುತ್ತಿರುವುದು ಈ ಪ್ರಕಲ್ಪನೆಗೆ ದಾರಿ ಮಾಡಿಕೊಟ್ಟಿದೆ. ಈಚೀಚೆಗೆ 'ನೀವೇ ಮಾಡಿನೋಡಿ' ಕಿಟ್‌ಗಳೂ (ಸಾಮಾನಿನ ಗಂಟುಗಳು) 'ಸ್ವಯಂಸೇವಾ' ವಿಧಾನಗಳೂ ಹೆಚ್ಚು ಹೆಚ್ಚು ಪ್ರಮುಖವಾಗಿ ಬಳಕೆಗೆ ಬರುತ್ತಿರುವುದಕ್ಕೆ ಇದು ಉಲ್ಲೇಖ. ಪೀಠೋಪಕರಣದಿಂದ ಹಿಡಿದು ಕಾರುಗಳವರೆಗೆ, ಕಂಪ್ಯೂಟರ್‌ಗಳವರೆಗೆ, ಹಲವಾರು ಬಿಡಿ ಭಾಗಗಳನ್ನು ನೀಡಿ ಅವುಗಳನ್ನು ಮನೆಗಳಲ್ಲಿ ಹೇಗೆ ಜೋಡಿಸುವುದು ಅನ್ನುವುದಕ್ಕೆ ಅನುಕ್ರಮ ವಿವರಣೆ-ಬೋಧನೆಗಳನ್ನು ಒದಗಿಸಲಾಗುತ್ತದೆ. ಇದರಿಂದ ಉತ್ಪಾದಕರಿಗೆ ವೆಚ್ಚವೂ ಕಮ್ಮಿ, ಗ್ರಾಹಕರಿಗೆ ಬೆಲೆಯೂ ಕಮ್ಮಿ. ಅದಕ್ಕೂ ಹೆಚ್ಚಾಗಿ ಗ್ರಾಹಕ ತಾನೇ ಸ್ವತಃ ಮಾಡುವ, ಹೊಸತೊಂದನ್ನು ಸೃಜಿಸುವ ಪುಳಕವನ್ನು ಅನುಭವಿಸುತ್ತಾನೆ.[೪೫] ಈ ವಿದ್ಯಮಾನವು ಸರಕುಗಳ ಕ್ಷೇತ್ರಕ್ಕಷ್ಟೆ ಸೀಮಿತವಲ್ಲ. ಅದು ಸೇವಾ ಕ್ಷೇತ್ರಗಳಿಗೂ ದಾಳಿ ಇಟ್ಟಿದೆ. ಹಾಗಾಗಿ ಈಗ ನಾವು ಪ್ರತಿದಿನವೂ ಮುಖಕ್ಷೌರವನ್ನು ಸುರಕ್ಷಿತ ಕ್ಷೌರ ಕತ್ತಿಯಿಂದ (ಸೇಫ್ಟಿ ರೇಜರ್) ನಾವೇ ಮಾಡಿಕೊಳ್ಳುತ್ತೇವೆ. ಹೀಗೆ ಕ್ಷೌರಿಕನ ಕೆಲಸದ ಒಂದು ಭಾಗವನ್ನು ನಾವೇ ವಹಿಸಿಕೊಂಡಿದ್ದೇವೆ. ನಮ್ಮಲ್ಲನೇಕರು ಯಂತ್ರಗಳ ಸಹಾಯದಿಂದಲೇ ಅಥವಾ ಇಲ್ಲದೆಯೋ ನಮ್ಮ ಬಟ್ಟೆಗಳನ್ನು ನಾವೇ ಒಗೆದುಕೊಳ್ಳುತ್ತೇವೆ, ನಾವೇ ಇಸ್ತ್ರಿ ಮಾಡಿಕೊಳ್ಳುತ್ತೇವೆ. ಇವೆಲ್ಲವುಗಳ ಸಾಮಾಜಿಕ ಮಹತ್ವವೆಂದರೆ ಕೈಕಸುಬಿಗಳ ಮತ್ತೆ ಆರಾಮಕುರ್ಚಿಯ ಗ್ರಾಹಕನ ನಡುವಿನ ಹಳೆಯ ಪ್ರತ್ಯೇಕತಾ ಗೋಡೆ ಕುಸಿಯುತ್ತಿದೆ ಎಂಬುದಾಗಿದೆ. ದೈಹಿಕ ಶ್ರಮವು ಬೌದ್ಧಿಕ ಶ್ರಮದಿಂದ ಪ್ರತ್ಯೇಕಿಸುವ ಹಳೆಯ ಶ್ರಮವಿಭಜನೆ ಅರ್ಥ ಕಳೆದುಕೊಳ್ಳುತ್ತಿದೆ.

ಈ ಸಂದರ್ಭದಲ್ಲಿ, ಋಗ್ವೇದದ ೧೦ನೆಯ ಮಂಡಲದಲ್ಲಿನ ಪುರುಷ ಸೂಕ್ತಕ್ಕೆ ಅರವಿಂದ್ ಶರ್ಮರವರು ನೀಡುರುವ ವ್ಯಾಖ್ಯಾನ ಸ್ವಾರಸ್ಯಕರವಾಗಿ ತೋರುತ್ತದೆ. ಶರ್ಮರವರ ಪ್ರಕಾರ, ಪುರುಷ ಸೂಕ್ತದಲ್ಲಿನ ಉಲ್ಲೇಖವು ಸಾಮಾಜಿಕ ರಚನೆಗೇ ಆಗಬೇಕಿಲ್ಲ, ಆದರೆ ವ್ಯಕ್ತಿಯೊಬ್ಬ ತನ್ನ ದಿನನಿತ್ಯ ಜೀವನದಲ್ಲಿ ನಿರ್ವಹಿಸಬೇಕಾದ ವಿವಿಧ ಕರ್ತವ್ಯಗಳನ್ನು ಒಬ್ಬನೇ ವ್ಯಕ್ತಿಯಲ್ಲಿ ಸಂಯೋಜಿಸಿರುವುದಕ್ಕೆ ಆಗಿರಬಹುದು. ಕಲಿಕೆ; ಪ್ರಜಾಪ್ರಭುತ್ವದಲ್ಲಿರುವಂತೆ ಸಮುದಾಯದ ಹಾಗೂ ದೇಶದ ನಿರ್ವಹಣೆಯಲ್ಲಿ ಅಥವಾ ಆಡಳಿತದಲ್ಲಿ ಅವಶ್ಯಬಿದ್ದಾಗ ಮಿಲಿಟರಿ ಸೇವೆ ಒದಗಿಸುವುದನ್ನೂ ಒಳಗೊಂಡಂತೆ ನೆರವಾಗುವುದು (ಇಲ್ಲಿ ಮತದಾರನೇ ರಾಜ); ದೈಹಿಕ ಶ್ರಮವನ್ನೂ ಒಳಗೊಂಡಂತೆ ಸಮಾಜದ ಆರ್ಥಿಕ ಅಥವಾ ವೃತ್ತಿಪರ ಚಟುವಟಿಕೆಗಳಲ್ಲೂ ಸೇವಾಕಾರ್ಯಗಳಲ್ಲೂ ಭಾಗವಹಿಸುವುದು (ಇದು ಸ್ವಂತ ಪ್ರಯೋಜನಕ್ಕಷ್ಟೆ ಅಲ್ಲ ಸಮಾಜದ ಪ್ರಯೋಜನಕ್ಕೂ ಆಗುತ್ತದೆ) – ಇವೆಲ್ಲ ಈಗ ಒಬ್ಬನೇ ವ್ಯಕ್ತಿಯಲ್ಲಿ ಮಿಳನಗೊಂಡಿವೆ. ಅರವಿಂದ್ ಶರ್ಮರ ಮಾತುಗಳಲ್ಲಿ ಹೇಳುವುದಾದರೆ, 'ಇಲ್ಲಿರುವ ಮುಖ್ಯ ವಿಚಾರವೆಂದರೆ, ಈಗಿನಿಂದ, ಪ್ರತಿಯೊಬ್ಬ ವ್ಯಕ್ತಿಯೂ ಒಂದಲ್ಲ ಒಂದು ವರ್ಣದಲ್ಲಿ ಇರುವನು ಎಂಬುದರ ಬದಲು, ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ಎಲ್ಲ ವರ್ಣಗಳೂ ಇರುತ್ತವೆ ಎಂಬುದಾಗಿದೆ.'[೪೬]

ಇದೀಗ ಸಮಾಜದಲ್ಲಿ ಹೊಸ ಶಕ್ತಿಗಳ ಸಂಯೋಜನೆಯೊಂದು ಕಾರ್ಯ ಜರುಗಿಸುತ್ತಿದೆ, ಅದೇ ಜಾತಿಪದ್ಧತಿಯ ವಿನಾಶಕ್ಕೆ ಕಾರಣ, ಎಂದು ಎಂ. ಎನ್. ಶ್ರೀನಿವಾಸರು ತಮ್ಮ 'ಜಾತಿಯ ಕುರಿತ ಶ್ರದ್ಧಾಂಜಲಿ' ಎಂಬ ಲೇಖನದಲ್ಲಿ ಹೇಳಿದ್ದಾರೆ. ಈ ಶಕ್ತಿಗಳು ಜಾತಿ-ಆಧಾರಿತ ಸಾಮಾಜಿಕ ಉತ್ಪಾದನಾ ವಿಧಾನ ಮುರಿದುಬೀಳುವುದಕ್ಕೆ ದಾರಿ ಮಾಡಿಕೊಟ್ಟವು, ಅದು ತನ್ನ ಸರದಿಯಲ್ಲಿ ಜಾತಿಪದ್ಧತಿಯ ಪತನ ಉಂಟುಮಾಡಿತು. ಈ ಹೊಸ ಶಕ್ತಿಗಳೆಂದರೆ ಜಜ್ಮಾನಿ ವ್ಯವಸ್ಥೆಯ ಪತನ; ಹೆಚ್ಚು ವಿಶಾಲವಾದ ಮಾರುಕಟ್ಟೆಯ ಉದಯ; ಹಳ್ಳಿ ಆಧಾರಿತವಾದ ಜೀವನಾಧಾರಕ್ಕಷ್ಟೆ ಸೀಮಿತವಾದ ಉತ್ಪಾದನೆಯ ಅವನತಿ; ನಗರೀಕರಣ; ಎಲ್ಲಕ್ಕೂ ಮಿಗಿಲಾಗಿ ವಯಸ್ಕರ

ಮತದಾನದ ಮೇಲೆ ಆಧರಿಸಿದ ಪ್ರಜಾಪ್ರಭುತ್ವದ ಉದಯ. ಇವೆಲ್ಲವುಗಳ ಜೊತೆಗೆ, ಸಮಾನತೆ, ಆತ್ಮಗೌರವ, ಮಾನವ ಘನತೆ ಇತ್ಯಾದಿ ಹೊಸ ಮೌಲ್ಯಗಳಿಗೆ ವಿಶಾಲ ವ್ಯಾಪ್ತಿ ಮನ್ನಣೆಯೂ ಸೇರಿಕೊಂಡಿದೆ. ಗ್ರಾಮೀಣ ಕೈಕಸಬು ಆಧಾರಿತ ಉತ್ಪಾದನೆಯು ಹೇಗೆ ಕಾರ್ಖಾನೆ ಉತ್ಪಾದನೆಗೆ ಜಾಗ ಬಿಟ್ಟುಕೊಟ್ಟಿತೆಂಬುದಕ್ಕೆ ಶ್ರೀನಿವಾಸ್‌ರವರು ಅನೇಕ ನಿದರ್ಶನಗಳನ್ನು ನೀಡುತ್ತಾರೆ: ಕಾರ್ಖಾನೆಗಳಲ್ಲಿ ಖಾದ್ಯ ತೈಲವನ್ನು ಸಾಮೂಹಿಕವಾಗಿ ಉತ್ಪಾದಿಸತೊಡಗಿದುದು ಎಣ್ಣೆ ಬೀಜವನ್ನು ಗಾಣಕ್ಕೆ ಹಾಕಿ ಅರೆದು ಎಣ್ಣೆ ಉತ್ಪಾದಿಸುತ್ತಿದ್ದ ಗಾಣಿಗ ಜಾತಿಯನ್ನು ಇಲ್ಲವಾಗಿಸಿತು; ಕಾರ್ಖಾನೆಗಳಲ್ಲಿ ಅಲ್ಯುಮಿನಿಯಂ ಹಾಗೂ ಪ್ಲಾಸ್ಟಿಕ್ ಪಾತ್ರೆಗಳನ್ನು ಉತ್ಪಾದಿಸತೊಡಗಿದುದು ಹಳ್ಳಿಯ ಕುಂಬಾರ ಜಾತಿಗೆ ಮುಳುವಾಯಿತು; ನಗರಗಳಲ್ಲಿ ಅರಿವೆ ಗಿರಣಿಗಳಲ್ಲಿ ವಸ್ತ್ರ ಉತ್ಪಾದಿಸತೊಡಗಿದುದು ಹಳ್ಳಿಗಳ ನೇಕಾರರ ಜಾತಿಯನ್ನು ಅನವಶ್ಯಕ ಮಾಡಿತು; ಇತ್ಯಾದಿ, ಇತ್ಯಾದಿ. ಶ್ರೀನಿವಾಸ್‌ರವರು ಅರ್ಥಪೂರ್ಣವಾಗಿ ಗಮನಿಸುತ್ತಾರೆ: ''ಇವೆಲ್ಲವುಗಳಿಂದ ಕಲಿಯಬೇಕಾದ ನೀತಿ ಎಂದರೆ – [ಹಿಂದೆ] ಶ್ರೇಣೀಕೃತ ವ್ಯವಸ್ಥೆಯ ವಿರುದ್ಧವೂ, ತಾವು ಸರ್ವೋಚ್ಚರೆಂದು ಬ್ರಾಹ್ಮಣರು ಹಕ್ಕು ಸಾಧಿಸುತ್ತಿದ್ದುದರ ವಿರುದ್ಧವೂ ನಡೆದ ಸೈದ್ಧಾಂತಿಕ ಹೋರಾಟವು ಸಮಾನತಾವಾದಿ ಸಾಮಾಜಿಕ ವ್ಯವಸ್ಥೆಯನ್ನು ನಿರ್ಮಿಸುವುದರಲ್ಲಿ ವಿಫಲವಾಯಿತು, ಏಕೆಂದರೆ, ಸ್ಥಳೀಯ ಮಟ್ಟದಲ್ಲಿ ಮೂಲ ಅಗತ್ಯಗಳ ಉತ್ಪಾದನೆಯು ಸ್ವಭಾವತಃ ಜಾತಿಯೊಂದಿಗೆ ಬಂಧಿತವಾಗಿದ್ದಿತು.''[೪೭] ಜಾತಿಪದ್ಧತಿಗೆ ತಳಹದಿಯಾದ ಉತ್ಪಾದನಾ ವ್ಯವಸ್ಥೆ ನಷ್ಟವಾದ ಮೇಲೆ ಜಾತಿ ಪದ್ಧತಿ ಮುಂದುವರಿಯುವುದು ಸಾಧ್ಯವಿಲ್ಲ.

ಕೊನೆಯದಾಗಿ, ಮಾಧವ ಗಾಡ್ಗಿಲ್‌ರು ಜಾತಿ ಪದ್ಧತಿಯ ಪರಿಸರ ಪಾತ್ರವನ್ನು ಎತ್ತಿ ತೋರಿಸಿರುವಂಥ ಪ್ರಬಂಧದಲ್ಲಿಯೇ ಗಮನಿಸಿರುವಂತೆ, ಜಾತಿ ಪದ್ಧತಿಯು ತನ್ನ ಪರಿಸರ ಪಾತ್ರವನ್ನೂ ಪ್ರಸ್ತುತತೆಯನ್ನೂ ಕೂಡ ಕಳೆದುಕೊಂಡಿದೆ. ಸ್ಥಳೀಯ ಸಮುದಾಯಗಳ ನಿಯಂತ್ರಣದಲ್ಲಿದ್ದ ಸಂಪನ್ಮೂಲಗಳು ಗಣನೀಯವಾಗಿ ಕುಗ್ಗಿವೆ. ಅವುಗಳನ್ನು ರಾಜ್ಯವೇ ವಶಪಡಿಸಿಕೊಂಡಿರುವುದೂ, ಅವುಗಳನ್ನು ಹೆಚ್ಚು ದೊಡ್ಡ ಮಾರುಕಟ್ಟೆ ಶಕ್ತಿಗಳು ಬಳಸಿಕೊಳ್ಳುತ್ತಿರುವುದೂ, ಇದಕ್ಕೆ ಕಾರಣವಾಗಿದೆ. ''ಹೀಗೆ ಶೀಘ್ರವಾಗಿ ಕುಗ್ಗಿಹೋಗುತ್ತಿದ್ದ ತಮ್ಮ ಪರಿಸರ ಸಂಪನ್ಮೂಲ ನೆಲೆಯಿಂದ ಪ್ರತ್ಯೇಕಿಸಲ್ಪಟ್ಟ ಭಾರತೀಯ ಜಾತಿ-ವ್ಯವಸ್ಥಿತ ಸಮಾಜವು ಬಹುಶಃ ಒಂದು ನೂರು ಪೀಳಿಗೆಗಳಿಗೂ ಹೆಚ್ಚು ಕಾಲದಿಂದ ಉಳಿಸಿಕೊಂಡು ಬಂದಿದ್ದ ಪರಿಸರದ ಸ್ಥಿರ ಸ್ಥಿತಿಯಿಂದ ಒರಟು ರೀತಿಯಲ್ಲಿ ಹೊರಹಾಕಲ್ಪಟ್ಟಿತು.''[೪೮] ಜಂಟೀ-ಅರಣ್ಯ ನಿರ್ವಹಣೆಯಂಥ ಯೋಜನೆಗಳ ಕೆಳಗೆ ಸ್ಥಳೀಯ ಸಮಿತಿಗಳ ಮೂಲಕ ಸ್ಥಳೀಯ ನೈಸರ್ಗಿಕ ಸಂಪನ್ಮೂಲಗಳನ್ನು ಪುನರುಜ್ಜೀವನಗೊಳಿಸಲು ಇತ್ತೀಚೆಗೆ ಮಾಡುತ್ತಿರುವ ಯತ್ನಗಳೂ ಜಾತಿ-ಆಧಾರಿತವಾಗಿಲ್ಲ, ಆದರೆ ಜಾತ್ಯತೀತವಾಗಿವೆ. ಅಷ್ಟೇ ಅಲ್ಲ, ಉತ್ಪಾದನೆಯ ಸಾಮಾಜಿಕ ಬುನಾದಿಯೇ ಮುರಿದುಬಿದ್ದಿರುವಾಗ ಜಾತಿ-ಆಧಾರಿತ ವೃತ್ತಿಗಳು ಎಂದಾದರೂ ಹೊಸ ಬದುಕು ಪಡೆಯುವುವೇ ಎಂಬುದು ಸಂಶಯಾಸ್ಪದ.

ಹಾಗಾಗಿ ಜಾತಿಪದ್ಧತಿಯು ಹುಟ್ಟಿ ಉಳಿದುಕೊಂಡು ಬಂದುದಕ್ಕೂ ಹಿಂದುಧರ್ಮಕ್ಕೂ ನಡುವೆ ಯಾವ ಸಂಬಂಧವೂ ಇಲ್ಲ ಎಂಬುದು ಮೇಲಿನ ವಿಶ್ಲೇಷಣೆಯಿಂದ ಸ್ಪಷ್ಟವಾಗುತ್ತದೆ. ಜಾತಿಪದ್ಧತಿಯು ಕೇವಲ ಒಂದು ಸಾಮಾಜಿಕ ವಿದ್ಯಮಾನವಾಗಿದ್ದಿತು, ಅದು ಐಹಿಕ ವಲಯದ್ದೇ ಹೊರತು ಪಾರಮಾರ್ಥಿಕ ಅಥವಾ ಆಧ್ಯಾತ್ಮಿಕ ವಲಯದ್ದಲ್ಲ. ಐಹಿಕ ವಲಯದಲ್ಲಿರುವುದರಿಂದ ನಡವಳಿಕೆ ನಿಯಮಗಳೂ ಪದ್ಧತಿಯೂ ಕಾಲಕಾಲಕ್ಕೆ ಬದಲಾವಣೆಗೆ ಒಳಗಾಗುತ್ತಿರುತ್ತವೆ. ಹಿಂದೂ ಪವಿತ್ರ ಗ್ರಂಥಗಳೇ ಒಪ್ಪುವಂತೆ, ಅವು ಚಿರಕಾಲ ಇರುವಂತೆ ದೃಢಗೊಂಡವಲ್ಲ. ಮನುಸ್ಮೃತಿಯನ್ನೂ ಒಳಗೊಂಡಂತೆ ಎಲ್ಲ ಧರ್ಮಶಾಸ್ತ್ರಗಳೂ ಅದಕ್ಕೆ ನೀಡಿರುವ ಬೆಂಬಲವು, ಆ ಕಾಲದಲ್ಲಿದ್ದ ಜಾತಿ ಪದ್ಧತಿಯ ಸಾಮಾಜಿಕ ಮಹತ್ವ ಹಾಗೂ ಪಾತ್ರದ ಪರಿಣಾಮವಷ್ಟೆ ಹೊರತು ಕಾರಣವಲ್ಲ. ಧರ್ಮಶಾಸ್ತ್ರಗಳು ಸಮಾಜದಲ್ಲಿ ಆಗಲೇ ಏನಿದ್ದಿತೋ ಅದನ್ನು ಪ್ರತಿಬಿಂಬಿಸಿದವಷ್ಟೆ. ಅವು ಅದನ್ನು ತಿರಸ್ಕರಿಸುವುದಕ್ಕೂ ಅನುಮೋದನೆ ನೀಡಿದವು. ಯಾವುದೇ ಧಾರ್ಮಿಕ ನಿಯಮವೂ ಜನರ ಅಸುಖಕ್ಕೆ ಕೋಪಕ್ಕೆ ದಾರಿ ಮಾಡಿಕೊಟ್ಟಲ್ಲಿ ಅದನ್ನು ತಿರಸ್ಕರಿಸಬಹುದು ಎಂದು ಮನುಸ್ಮೃತಿಯೇ (IV. 176) ಹೇಳಿದೆ. ಜಾತಿಪದ್ಧತಿಯು ಆಧುನಿಕ ಯುಗದಲ್ಲಿ ಅನವಶ್ಯವೂ ಅಪ್ರಸ್ತುತವೂ ಆಗಿರುವಾಗ ಧರ್ಮಶಾಸ್ತ್ರಗಳು ಅದಕ್ಕೆ ಹೊಸ ಜೀವದಾನ ನೀಡುತ್ತವೆಂದು ಅಂಜುವುದಕ್ಕೆ ಯಾವ ಆಧಾರವೂ ಇಲ್ಲ. ಧರ್ಮಶಾಸ್ತ್ರಗಳಲ್ಲಿನ ಬಹುತೇಕ ಶ್ಲೋಕಗಳು, ಕೊನೆಯ ಪಕ್ಷ ಜಾತಿಪದ್ಧತಿಯನ್ನು ಬೆಂಬಲಿಸುವ ಭಾಗಗಳು, ಸ್ವತಃ ಅಪ್ರಸ್ತುತವಾಗಿವೆ. ಮತ್ತೊಂದು ಕಡೆ, ಜಾತಿ ಪದ್ಧತಿಯ ಪತನವೂ ಹಿಂದೂ ಧರ್ಮದ ಉಳಿಕೆಗೆ ಹಾಗೂ ಮುಂದುವರಿಕೆಗೆ ಯಾವ ಭೀತಿಯನ್ನೂ ಒಡ್ಡದು. ಹಿಂದೂ ಧರ್ಮವು ಸತ್ಯ ಸಾಯಿಬಾಬ, ಮಾತಾ ಅಮೃತಾನಂದಮಯಿ ಹಾಗೂ ರವಿಶಂಕರ್‌ರವರಂಥ ಧಾರ್ಮಿಕ ನಾಯಕರ ಹಾಗೂ ರಾಮಕೃಷ್ಣಮಠ, ಬ್ರಹ್ಮಕುಮಾರಿ, ಚಿನ್ಮಯ ಮಿಷನ್ ಹಾಗೂ ಇಸ್ಕಾನ್‌ಗಳಂಥ ಸಂಸ್ಥೆಗಳ ಅನೇಕ ಯತ್ನಗಳ ಫಲವಾಗಿ, ಸಂಪೂರ್ಣವಾಗಿ ಜಾತಿ-ರಹಿತ ಆಧಾರದ ಮೇಲೆ ಹೆಚ್ಚು ಹೆಚ್ಚು ಶಕ್ತಿಯುತವಾಗಿ ಏಳಿಗೆ ಪಡೆದುಕೊಂಡು ಬರುತ್ತಿದೆ. ಇದಕ್ಕೆ ಕಾರಣವೆಂದರೆ, ಹಿಂದೂಧರ್ಮದ ಮೂಲ ತತ್ವಗಳಿಗೆ ಜಾತಿಯು ಸ್ವಭಾವಜನ್ಯವಾದುದಲ್ಲವಾಗಿರುವುದು. ಹಿಂದೂಧರ್ಮವೇ ಸ್ವತಃ ಜಾತಿವಾದದ ವಿರುದ್ಧ ಮಹತ್ವ ಪೂರ್ಣ ರೀತಿಯಲ್ಲಿ ಹೋರಾಟ ನಡೆಸಿದೆ, ನಡೆಸುತ್ತ ಇದೆ. ಜಾತಿಪದ್ಧತಿಯು ಹಿಂದೂ ಧರ್ಮಕ್ಕೆ ಸ್ವಭಾವಜನ್ಯವಾಗಿದ್ದಲ್ಲಿ ಶ್ರೀ ನಾರಾಯಣ ಗುರುಗಳೂ ಮಾತಾ ಅಮೃತಾನಂದಮಯಿಯವರೂ ಹಿಂದೂಧರ್ಮದ ಚೌಕಟ್ಟಿನೊಳಗೆ ಕೆಲಸ ಮಾಡುತ್ತಲೇ ಇರಲಿಲ್ಲ.

* * *

(ಉಪಕಾರಸ್ಮರಣೆ : ಇದು ನನ್ನ ICSSR ರಾಷ್ಟ್ರೀಯ ಫೆಲೊಷಿಪ್ ಯೋಜನೆಯ ಒಂದು ಭಾಗ. ನಾನು ICSSRಗೆ, ವಿಶಿಷ್ಟವಾಗಿ ಅದರ ಅಧ್ಯಕ್ಷ ವಿ. ಆರ್. ಪಂಚಮುಖಿಯವರಿಗೆ, ಹಣಕಾಸು ನೆರವಿಗಾಗಿ ಹಾಗೂ ಉತ್ತೇಜನಕ್ಕಾಗಿ, ಕೃತಜ್ಞನಾಗಿದ್ದೇನೆ. ಕೆ. ಟಿ. ಪಾಂಡುರಂಗಿಯವರು ಕೆಲವು ಉಲ್ಲೇಖಗಳನ್ನು ಪತ್ತೆ ಹಚ್ಚುವಲ್ಲಿ ನೆರವಾಗಿದ್ದಾರೆ. ನಾನು ಇದರ ಕರಡು ರೂಪವನ್ನು ೨೯.೦೪.೨೦೦೩ರಲ್ಲಿ ಧಾರವಾಡದಲ್ಲಿ 'ಸೆಂಟರ್ ಫಾರ್ ಮಲ್ಟಿ ಡಿಸಿಪ್ಲಿನರಿ ಡೆವೆಲಪ್‌ಮೆಂಟ್ ರಿಸರ್ಚ್ ಸಂಸ್ಥೆಯಲ್ಲೂ, ೦೪.೦೯.೨೦೦೩ರಂದು ಬೆಂಗಳೂರಿನಲ್ಲಿ ಇನ್‌ಸ್ಟಿಟ್ಯೂಟ್ ಫಾರ್ ಸೋಷಲ್ ಅಂಡ್ ಇಕನಾಮಿಕ್ ಚೇಂಜ್ ಸಂಸ್ಥೆಯಲ್ಲೂ ಮಂಡಿಸಿ ದಾಗ ದೊರೆತ ಸಲಹೆಗಳಿಂದಲೂ ವ್ಯಾಖ್ಯಾನಗಳಿಂದಲೂ ಪ್ರಯೋಜನ ಪಡೆದಿದ್ದೇನೆ. ಈ ಸೆಮಿನಾರ್‌ಗಳಲ್ಲಿ ಭಾಗವಹಿಸಿದ ಎಲ್ಲರಿಗೂ ನನ್ನ ಹೃತ್ಪೂರ್ವಕ ವಂದನೆಗಳು.) ಇಂಗ್ಲೀಷ್‌ನಲ್ಲಿ ಇಕಾನಾಮಿಕ್ ಎಂಡ್ ಪಾಲಿಟಿಕಲ್ ವೀಕ್ಲಿಯ Vol. 38, No. 45 November 8, 2003 ರ ಸಂಚಿಕೆಯಲ್ಲಿ ಪ್ರಕಟವಾಗಿದೆ.

**(ಮುಗಿಯಿತು)**

**ಟಿಪ್ಪಣಿಗಳು ಹಾಗೂ ಉಲ್ಲೇಖಗಳು**

೩೨. ಈ ಚಳವಳಿಗಳ· ಕುರಿತು ನಾನು ಇನ್ನೂ ಹೆಚ್ಚು ವಿವರವಾಗಿ EPWನಲ್ಲಿ ನನ್ನ ಮುನ್ನಿನ ಪ್ರಬಂಧ 'Ethics and Relevance of Conversions...'ನಲ್ಲಿ ಚರ್ಚಿಸಿದ್ದೇನೆ. *Economic and Political Weekly* (EPW) ಜನವರಿ ೧೮, ೨೦೦೩, ಪು. ೨೨೭-೨೩೫
೩೩. ನೋಡಿ: ಪಿ. ವಿ. ಕಾಣೆ(೧೯೯೦). ಪೂ. ಗ್ರಂ. ಸಂ. ೩, ಭಾಗ೧, ಪು. ೫೩೧
೩೪. ನೋಡಿ : ವಸಂತ್ ಮೂನ್ (ಸಂ.) ೧೯೯೦. ಪೂ. ಗ್ರಂ. ಪು. ೧೧೨
೩೫. ನೋಡಿ : ಪಿ. ವಿ. ಕಾಣೆ(೧೯೯೦), ಪೂ. ಗ್ರಂ. ಸಂ. ೨, ಭಾಗ, ಪು. ೬೬-೭
೩೬. ಅದೇ ಗ್ರಂಥ. ಪು. ೧೨೧
೩೭. ಅದೇ ಗ್ರಂಥ . ಪು. ೧೧೮
೩೮. ಮಾಧವ್ ಗಾಡ್ಗಿಲ್ (೧೯೮೩) : 'The Indian Caste System as a Historical Adaptation, An Ecological perspective', *New Quest* 41, September-October ಪು. ೨೭೯-೨೮೩. ಮತ್ತು ನೋಡಿ : ಪೂರ್ಣೇಂದು ಎಸ್. ಕವೂರಿ (೨೦೦೦)'The Varna Trophic System, An Ecological Theory of Caste Formation', *EPW*, 37(12) March 23.
೩೯. ಮಾಧವ ಗಾಡ್ಗಿಲ್ (೧೯೮೩) ಪೂ. ಗ್ರಂ. ಪು. ೨೮೨
೪೦. ಅದೇ ಗ್ರಂಥ ಪು. ೨೮೨-೩
೪೧. ಎಂ. ಎನ್. ಶ್ರೀನಿವಾಸ್ (೨೦೦೩). *'An Obituary on Caste as a System'*, EPW. ಸಂ. ೩೮(೫), Feb.1, ಪು. ೪೫೫-೯; ಈ ಉದ್ಧರಣ ಪು ೪೫೫ರಲ್ಲಿದೆ.
೪೨. ಎಂ. ಎನ್. ಶ್ರೀನಿವಾಸ್ (೧೯೮೦, ಪ್ರಥಮ ಪ್ರಕಟಣೆ ೧೯೬೯) *"India : Social Structure"*, Delhi, Hindustan Publishing Corporation, ಪು. ೧೪
೪೩. ನೋಡಿ. ಪಿ. ವಿ. ಕಾಣೆ(೧೯೯೦). ಪೂ. ಗ್ರಂ. ಸಂ. ೧, ಭಾಗ೧, ಪು. ೫೭-೮
೪೪. ಎಂ. ಎನ್. ಶ್ರೀನಿವಾಸ್ (೨೦೦೩) ಪೂ. ಗ್ರಂ.
೪೫. ಅಲ್ವಿನ್ ಟೋಫ್ಲರ್ (೧೯೮೦) ಅಧ್ಯಾಯ ೨೦ 'The Rise of the Prosumer', *"The Third Wave"* ಗ್ರಂಥದಲ್ಲಿ. New York, William Morrow & Co., ಪು. ೨೮೨-೩೦೫
೪೬. ಅರವಿಂದ್ ಶರ್ಮ (೧೯೯೬) *Hinduism for Our Times*, Delhi, Oxford University Press, ಪು. ೪೬
೪೭. ಎಂ. ಎನ್. ಶ್ರೀನಿವಾಸ್ (೨೦೦೩). ಪೂ. ಗ್ರಂ. ಉದ್ಧರಣ ಪು. ೪೫೮ರಲ್ಲಿದೆ.
೪೮. ಮಾಧವ್ ಗಾಡ್ಗಿಲ್ (೧೯೮೩), ಪೂ. ಗ್ರಂ. ಪು. ೨೮೩.

ಅನುವಾದ : **ಕೆ. ಎಲ್. ಗೋಪಾಲಕೃಷ್ಣ ರಾವ್**
ಮೂಲ : **ಡಾ|| ಎಂ. ವಿ. ನಾಡಕರ್ಣಿ**
ಪರಿಜ್ಞಾನ ಬಾಲ ವಿಹಾರ (ಮಹಡಿ), ೨ನೇ ಕ್ರಾಸ್, ಐಸೆಕ್ ಪಶ್ಚಿಮ, ನಾಗರಭಾವಿ, ಬೆಂಗಳೂರು - ೭೨

ಶ್ರೇಷ್ಠ ಕಾದಂಬರಿಕಾರರಾಗಿ ರಷ್ಯಾ ದೇಶಕ್ಕೆ ಮೂರನೇ ನೊಬೆಲ್ ಬಹುಮಾನವನ್ನು ತಂದುಕೊಟ್ಟ ಕೀರ್ತಿ ಮಿಖಾಯಿಲ್ ಶೊಲೊಖೊವ್ ಅವರಿಗೆ ಸಲ್ಲುತ್ತದೆ. ಮೊದಲೆರಡು ಬಹುಮಾನಗಳನ್ನು ಕ್ರಮವಾಗಿ ಇವಾನ್ ಬುನಿನ್ (೧೯೩೩) ಹಾಗೂ ಬೋರಿಸ್ ಪಾಸ್ತರ್‌ನಾಕ್ (೧೯೫೮) ಗಳಿಸಿದ್ದಾರೆ.

೧೯೬೫ನೇ ಸಾಲಿನ ಪ್ರಶಸ್ತಿಗಾಗಿ ಚಿಲಿ ದೇಶದ ಕವಿ ಪ್ಯಾಬ್ಲೊ ನೆರೂದಾ, ಕ್ಯೂಬಾದ ನಿಕೊಲಾಸ್ ಗ್ಯೂಲೆನ್, ಅರ್ಜಂಟೈನಾದ ಕಾದಂಬರಿಕಾರ ಜೂರೆ ಲೂಯಿಸ್, ಗ್ವಾಟೆಮಾಲಾದ ಮಿಗೇಲ್ ವಂಜಲ್ ಅಸ್ತೂರಿಯಾಸ್ ಮುಂತಾದವರು ಸೇರಿದಂತೆ ಕಣದಲ್ಲಿದ್ದವರ ಸಂಖ್ಯೆ ಎಂಬತ್ತೊಂಬತ್ತು.

ಬೋರಿಸ್ ಪಾಸ್ತರ್‌ನಾಕ್ ಅವರಿಗೆ ಪ್ರಶಸ್ತಿ ಕೊಡುವುದಕ್ಕೆ ಮುಂಚೆ ಮಿಖಾಯಿಲ್ ಶೊಲೊಖೊವ್ ಅವರಿಗೆ ಕೊಡಬೇಕಿತ್ತು ಎಂದು ನೊಬೆಲ್ ಬಹುಮಾನವನ್ನು ನಿರಾಕರಿಸಿದ ಜೀನ್ ಪಾಲ್ ಸಾರ್ತ್ರ್ ಅಭಿಪ್ರಾಯಪಟ್ಟಿದ್ದಾರೆ.

ನೊಬೆಲ್ ಬಹುಮಾನದ ನಿರ್ಣಯದ ಹಿನ್ನೆಲೆ ಏನೇ ಇರಲಿ ಮಿಖಾಯಿಲ್ ಅವರಿಗೆ ಸಂದುದು ಮಾತ್ರ ಅರ್ಹತೆಯಿಂದಲೇ ಎಂಬುದು ಸಮಾಧಾನ ತರುವಂಥದ್ದು.

'And Quiet Flows the Don' ಮಿಖಾಯಿಲ್ ಅವರ ಖ್ಯಾತ ಕಾದಂಬರಿ. ಈ ಕಾದಂಬರಿಯನ್ನು ಮುಖ್ಯವಾಗಿ ಪರಿಗಣಿಸಿ ನೊಬೆಲ್ ಬಹುಮಾನವನ್ನು ನೀಡಲಾಗಿದೆ. ಸೋವಿಯತ್ ರಷ್ಯಾ ಒಂದರಲ್ಲೆ ಅವರ ಸಾಹಿತ್ಯದ ೨೦ ಲಕ್ಷ ಪ್ರತಿಗಳು ಖರ್ಚಾಗಿವೆ. ಅವರ ಅನೇಕ ಕೃತಿಗಳು ಹದಿನೇಳು ಭಾಷೆಗಳಿಗೆ ಅನುವಾದವಾಗಿವೆ. ಇದು ರಷ್ಯಾ ಹಾಗೂ ವಿಶ್ವದಲ್ಲಿ ಅವರ ಸಾಹಿತ್ಯದ ಜನಪ್ರಿಯತೆಗೆ ಸಾಕ್ಷಿಯಾಗಿದೆ.

ಮಿಖಾಯಿಲ್ ೧೯೩೨ರಲ್ಲೆ ಕಮ್ಯೂನಿಸ್ಟ್ ಪಕ್ಷದ ಸದಸ್ಯರಾಗಿದ್ದರು. ಸುಪ್ರೀಂ ಸೋವಿಯತ್ ಕಾಂಗ್ರೆಸ್‌ನ ಪ್ರತಿನಿಧಿಯಾಗಿದ್ದರು. ಸೋವಿಯತ್ ವಿಜ್ಞಾನ ಅಕಾಡೆಮಿಯ ಸದಸ್ಯರಾಗಿ ಆಯ್ಕೆಯಾಗಿದ್ದರು. ಅವರ ಸಾಹಿತ್ಯಿಕ ಹಾಗೂ ರಾಜಕೀಯ ಕೊಡುಗೆಗಾಗಿ ಅನೇಕ ಪದಕಗಳು, ಗೌರವಗಳು ಸಂದಿವೆ. ಪ್ರತಿಷ್ಠಿತ ಸ್ಟಾಲಿನ್ ಹಾಗೂ ಲೆನಿನ್ ಬಹುಮಾನಗಳೂ ಅವರ ಕೊರಳನ್ನು ಅಲಂಕರಿಸಿವೆ.

''ಕಾವ್ಯ ಸ್ವರೂಪದ 'ಡಾನ್' ಕಾದಂಬರಿಯಲ್ಲಿ ತಮ್ಮ ಕಲಾತ್ಮಕತೆ ಹಾಗೂ ಋಜುತ್ವ ಶಕ್ತಿಗಳ ಮೂಲಕ ರಷ್ಯಾ ಜನತೆಯ ಐತಿಹಾಸಿಕ ಬೆಳವಣಿಗೆಯ ಹಂತಗಳನ್ನು ಅಭಿವ್ಯಕ್ತಿಸಿರುವುದನ್ನು ಪರಿಗಣಿಸಿ ಮಿಖಾಯಿಲ್ ಅವರಿಗೆ ಬಹುಮಾನವನ್ನು ಕೊಡಲಾಗಿದೆ'' ಎಂದು ಸ್ವೀಡಿಷ್ ಅಕಾಡೆಮಿ ಅಭಿಪ್ರಾಯಪಟ್ಟಿದೆ.

೧೯೬೫ನೇ ಸಾಲಿನ ನೊಬೆಲ್ ಪ್ರಶಸ್ತಿಗೆ ಪುರಸ್ಕೃತರಾದ ಮಿಖಾಯಿಲ್ ಶೊಲೋಖೊವ್ ೧೯೦೫ ಮೇ, ೨೪ರಂದು ಈಗ ಕಾಮೆಸ್ಕಾಯ ಎಂದು ಕರೆಯುವ ಕೊಸಾಕ್ ಗ್ರಾಮದ ಕ್ರೌಥಜುಲೇನ್‌ನಲ್ಲಿ ಜನಿಸಿದರು. (cossack ಎಂಬುದು ರಷ್ಯಾ ದೇಶಕ್ಕೆ ಅಧೀನವಾದ ಒಂದು ತುರ್ಕಿ ಜನಾಂಗ). ಮಿಖಾಯಿಲ್ ಅವರ ತಾಯಿ ಕೊಸಾಕ್ ರೈತ ಮಹಿಳೆ. ಮಿಖಾಯಿಲ್ ಶಾಲೆಗೆ ಸೇರಿದನಂತರ ಅವನೊಂದಿಗೆ ವ್ಯವಹರಿಸಲು ಅನಕ್ಷರಸ್ಥೆಯಾಗಿದ್ದ ಆಕೆ ಅಕ್ಷರ ಕಲಿತಳು.

ಮಿಖಾಯಿಲ್ ಬಾಲ್ಯದಿಂದಲೇ ಬಯಲು ಪ್ರದೇಶದ ಹಾಗೂ ಉರಿವ ಸೂರ್ಯನ ಸುಡುವ ಗಾಳಿಯ, ಧೂಳಿನ ಕಣಗಳಿಂದ ತುಟಿ ಒಡೆದು ಉರಿವ ಅನುಭವಗಳನ್ನು ಪಡೆದುಕೊಂಡರು. ಕೊಸಾಕ್ ಜನಾಂಗದ ಮೀನುಗಾರರ ಸಣ್ಣ ದೋಣಿಗಳ ಸಾಲು ಸಾಲುಗಳನ್ನ ಕಂಡು ಅನುಭವಿಸಿದರು. ಈ ಎಲ್ಲವುಗಳನ್ನು ತಮ್ಮ ಮಹತ್ವದ ಕಾದಂಬರಿ ಡಾನ್‌ನಲ್ಲಿ ಹಿಡಿದು ಕೊಟ್ಟಿದ್ದಾರೆ. ಹೊಲಗಳಲ್ಲಿ ದುಡಿವ ಶ್ರಮಜೀವಿಗಳನ್ನು ಕಂಡಿದ್ದು, ಉಳುವುದನ್ನ, ಬಿತ್ತುವುದನ್ನ, ಸುಗ್ಗಿಯನ್ನ ಗಮನಿಸಿದ್ದು ಅವರ ವ್ಯಕ್ತಿತ್ವ ರೂಪುಗೊಳ್ಳುವಲ್ಲಿ ಪ್ರೇರಣೆಯಾಗಿವೆ. ದಷ್ಟಪುಷ್ಟ ಶರೀರದ ಯುವ ಮಿಖಾಯಿಲ್ ತನ್ನ ಕೊಸಾಕ್ ಸ್ನೇಹಿತರೊಂದಿಗೆ ಹಾಗೂ ಹಳ್ಳಿಯ ಹುಡುಗಿಯರೊಂದಿಗೆ ತಿಂಗಳ ಬೆಳಕಿನಲ್ಲಿ ಹಾಡಿ ನಲಿದು ಜಾನಪದ ಅನುಭವವನ್ನ ದಕ್ಕಿಸಿಕೊಂಡಿದ್ದಾರೆ.

# ನೊಬೆಲ್ ಪ್ರಶಸ್ತಿ ಪುರಸ್ಕೃತ ಮಿಖಾಯಿಲ್ ಶೊಲೊಖೊವ್



ಜ. ಹೊ. ನಾರಾಯಣಸ್ವಾಮಿ

ಮಿಖಾಯಿಲ್ ಹುಡುಗರಾಗಿದ್ದಾಗಲೇ ಸಾಹಿತ್ಯಕ್ಕೆ ಆಕರ್ಷಿತರಾದರು. ಆಗ ಅವರು ಬರೆದ ನಾಟಕಗಳನ್ನು ಸ್ಥಳೀಯ ಸಂಘಗಳ ಯುವಕರು ರಂಗವೇರಿಸಿದ್ದಾರೆ. ಅವುಗಳಲ್ಲಿ ಮಿಖಾಯಿಲ್ ಪಾತ್ರ ನಿರ್ವಹಿಸಿದ್ದಾರೆ. ೧೯೧೭ರಲ್ಲಿ ರಷ್ಯಾ ಕ್ರಾಂತಿಯಾದಾಗ ಅದರಲ್ಲಿ ಇವರೂ ಭಾಗವಹಿಸಿದ್ದಲ್ಲದೆ ಅನೇಕ ಸಂಘಗಳಲ್ಲಿಯೂ ತೊಡಗಿಸಿಕೊಂಡಿದ್ದಾರೆ.

ಉಪಾಧ್ಯಾಯರಾಗಿ ನಂತರ ೧೯೨೩ರಲ್ಲಿ ಮಾಸ್ಕೊಗೆ ಬಂದು ಕಾರ್ಮಿಕರಾಗಿ, ಗುಮಾಸ್ತರಾಗಿ ಸೇವೆ ಸಲ್ಲಿಸಿದರು. ಆ ಅನುಭವಗಳು ಅವರನ್ನು ಬರೆಯಲು ಪ್ರೇರೇಪಿಸಿದುವು. ಬರೆದ ಬರಹಗಳನ್ನು ಪತ್ರಿಕೆಗೆ ಕಳುಹಿಸಿದರು. ಮಿಖಾಯಿಲ್ ಅವರ ಮೊದಲ ಭೇಟಿಯನ್ನು ಸಂಪಾದಕರಾದ ಸಿರ್‌ಮೊನಿಚ್ ಹೀಗೆ ವರ್ಣಿಸಿದ್ದಾರೆ: ''ಏಪ್ರಿಲ್‌ನ ಒಂದು ದಿನ ಹರಿದುಹೋದ ಹ್ಯಾಟನ್ನ, ಗುಂಡಿ ಇರದ ಮೇಲ್‌ಕೋಟನ್ನ ಹಾಕಿಕೊಂಡಿದ್ದ ಹೊಣಪನೊಬ್ಬ ನಮ್ಮ ಕಛೇರಿಗೆ ಬಂದ. ಜೇಬಿನಿಂದ ಹಸ್ತಪ್ರತಿಯನ್ನು ತೆಗೆದು ಮೇಜಿನ ಮೇಲಿರಿಸಿದ. ಎಂ. ಶೊಲೋಖೊವ್ ಎಂದು ಪರಿಚಿತವಿರದ ರುಜುಮಾಡಿತ್ತು. ನಾವು ಓದಿದ ಕೂಡಲೆ ಮುದ್ರಣಕ್ಕೆ ಕಳುಹಿಸಿದೆವು. ಮರುದಿನವೇ ಗೌರವಧನವನ್ನು ನೀಡಿದೆವು.'' ಇದು ಮಿಖಾಯಿಲ್ ಅವರ ಸತ್ವಯುತ ಬರಹಕ್ಕೆ ಸಾಕ್ಷಿಯಾಗಿದೆ.

೧೯೨೪ರಲ್ಲಿ ಮಿಖಾಯಿಲ್ ತಾವು ಹುಟ್ಟಿದ ಜಿಲ್ಲೆಗೆ ಬಂದರು. ತಮಗೆ ಪರಿಚಯವಿದ್ದ ಕೊಸಾಕ್ ಜನರ ಕುರಿತು ಕಥೆಗಳನ್ನು ಬರೆದರು. ಅವು ೧೯೨೪ ರಿಂದ ೧೯೨೬ರ ಅವಧಿಯಲ್ಲಿ ಬರೆದವು. Tales From the Don ಹೆಸರಿನಲ್ಲಿ ಪ್ರಕಟವಾಗಿವೆ. ಸಂಪಾದಕರು ತಮ್ಮ ಮುನ್ನುಡಿಯಲ್ಲಿ ''ಮಿಖಾಯಿಲ್ ಅವರ ಕಥೆಗಳು ಬಯಲು ಪ್ರದೇಶದ ಜೀವಂತ ಗಿಡದ ಹೂವಿನಂತೆ ಸರಳವಾಗಿ, ಸಹಜವಾಗಿ ತುಂಬಿದ ಬಣ್ಣಗಳಿಂದ ಅರಳುತ್ತವೆ. ಅವರಿಗೆ ಗ್ರಹಿಸುವ ಶಕ್ತಿ ಗೊತ್ತು. ಯಾವುದೂ ಕಣ್ತಪ್ಪುವುದಿಲ್ಲ'' ಎಂದಿದ್ದಾರೆ.

ಕ್ರಾಂತಿಯ ನಂತರ ಕೊಸಾಕ್ ಜನಾಂಗದಲ್ಲಿ ಅಸ್ತವ್ಯಸ್ತೆ ಉಂಟಾದಂತೆ ರಷ್ಯಾದಲ್ಲಿಯೂ ಉಂಟಾಯ್ತು. ಆ ಕಾಲವನ್ನು ಕುರಿತು ಮಿಖಾಯಿಲ್ ಒಮ್ಮೆ ''ಸ್ಥಿತಿ ಹೇಗಿತ್ತು ಎಂದರೆ ಹರಿತವಾದ ನೇಗಿಲು ಭೂಮಿಯನ್ನು ಸೀಳಿ ಎರಡು ಭಾಗ ಮಾಡಿದಂತೆ'' ಎಂದು ವರ್ಣಿಸಿದ್ದಾರೆ. ಆ ದಿನಗಳ ಕಷ್ಟಕಾರ್ಪಣ್ಯಗಳನ್ನು ಕುರಿತು ಅವರು ವಾಸ್ತವ ಚಿತ್ರಣವನ್ನು ಕೊಟ್ಟಿದ್ದಾರೆ. ಅವರ ಬರವಣಿಗೆಯಲ್ಲಿ ಸ್ಥಿತಿವಂತ ವ್ಯವಸಾಯಗಾರರ ಖಂಡನೆ ಹಾಗೂ ರೈತ ಕಾರ್ಮಿಕರ ಮತ್ತು ಕೆಲಸಗಾರರ ಗರಿಗೆದರಿದ ಆಸೆ ಆಕಾಂಕ್ಷೆಗಳ ವರ್ಣನೆಗಳು ಕಂಡುಬರುತ್ತವೆ.

೧೯೨೮ರಲ್ಲಿ ಅವರ ಮೊದಲ ಮೇರು ಕೃತಿ And Quiet Flows the Don ವೃತ್ತಪತ್ರಿಕೆಯಲ್ಲಿ ಧಾರವಾಹಿಯಾಗಿ ಕಾಣಿಸಿಕೊಂಡಿತು. ಅದು ಪ್ರಕಟವಾಗುತ್ತಿದ್ದಂತೆ ಮಿಖಾಯಿಲ್ ಅವರು ರಷ್ಯಾ ಬರಹಗಾರರ ಮೊದಲ ಸಾಲಿಗೆ ಸೇರಿದರು. ೧೯೧೭-೧೯೨೨ ರಷ್ಯಾ ಇತಿಹಾಸದಲ್ಲಿ ಇಡೀ ರಷ್ಯಾ ಹಾಗೂ ಕೊಸಾಕ್ ಜನಾಂಗಕ್ಕೆ ಬಹುಪ್ರಮುಖವಾದ ಅವಧಿ. ವಾಸ್ತವಾಂಶಗಳನ್ನು ಮರೆಮಾಚದೆ ಹಾಗು ಯಾವುದನ್ನೂ ಉತ್ಪ್ರೇಕ್ಷಿಸದೆ ತನ್ನ ಕಲಾಕುಂಚದಲ್ಲಿ ವಸ್ತುಸ್ಥಿತಿಯನ್ನು ಹಿಡಿದುಕೊಟ್ಟಿದ್ದಾರೆ. ಅದರಲ್ಲಿ ಜಾಗತಿಕ ಪ್ರತಿಫಲನವನ್ನು ಕಾಣಬಹುದು. ಈ ಕೃತಿ ಮೂಲಭೂತವಾಗಿ ಜೀವನದ ಪುನರ್ ಭರವಸೆಯ ಆಶಾವಾದದ ನೆಲೆಯದ್ದು. ಡಾನ್ ನದಿಯಂತೆ ವಿಶಾಲತೆ ಹಾಗೂ ಗಾಂಭೀರ್ಯದಿಂದ ಕೂಡಿದ್ದು. ಇದೊಂದು ನಿಜ ಕಾವ್ಯ, ಸಮಕಾಲೀನ ವಿಶ್ವ ಸಾಹಿತ್ಯದ ಉತ್ತಮ ಕಲಾಕೃತಿ ಎಂಬ ಕೀರ್ತಿಗೆ ಪಾತ್ರವಾಗಿದೆ.

ಅವರ ಮತ್ತೊಂದು ಮಹತ್ವದ ಕೃತಿ Vergin Soil Upturned ೧೯೩೨ರಲ್ಲಿ ಪ್ರಕಟವಾಯ್ತು. ಮತ್ತೊಂದು ಸಂದಿಗ್ಧ ಕಾಲದ ರೈತರ ಜೀವನ ಕುರಿತದ್ದು. ರಷ್ಯಾದ ಭೂಮಿಯನ್ನು ಒಂದುಗೂಡಿಸಿ ಸಾಮೂಹಿಕ ಕೃಷಿಗೆ ಒಳಪಡಿಸಬೇಕೆಂಬ ಹಿನ್ನೆಲೆಯುಳ್ಳದ್ದು.

ಮಿಖಾಯಿಲ್ ಅವರ ಲೇಖನಿಯಲ್ಲಿ ಆರ್ಥಿಕ ಹಾಗೂ ಸಾಮಾಜಿಕ ಪರಿವರ್ತನೆಯ ಸಂದರ್ಭಗಳು ಪರಿಣಾಮಕಾರಿಯಾಗಿ ಮೂಡಿಬಂದಿವೆ. ಭೂಮಿಯ ಖಾಸಗಿ ಒಡೆತನದ ಪರ ಹಾಗೂ ವಿರೋಧದ ಎರಡು ಗುಂಪುಗಳು ಮೈದಳೆಯುವುದನ್ನ, ಸಮಾಜವಾದ ಹಾಗು ಬಂಡವಾಳಶಾಹಿ ಹಿನ್ನೆಲೆಯಲ್ಲಿ ಹಳ್ಳಿಗಳು ಒಡೆದು ಹೋಗುವುದನ್ನ, ಜನರ ಮನೋಧರ್ಮಗಳು, ಸಾಮಾಜಿಕ ಬೆಳವಣಿಗೆ ಮುಂತಾದುವುಗಳನ್ನ ಮಿಖಾಯಿಲ್ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ.

ಜರ್ಮನಿಯ ನಾಜಿಗಳ ಕ್ರೌರ್ಯವನ್ನು ಚಿತ್ರಿಸುವ ಕಥೆ School of Hate ೧೯೪೨ರಲ್ಲಿ ಪ್ರಕಟವಾಯ್ತು. ಹೋರಾಡುವುದನ್ನು ಕಲಿತಿರುವಂತೆ ದ್ವೇಷಿಸಲು ಹಾಗೂ ಪ್ರೀತಿಸಲೂ ಕಲಿತಿದ್ದೇವೆ. ಯುದ್ಧ ಭಾವನೆಗಳನ್ನು ಮೊನಚು ಮಾಡುತ್ತದೆ ಎನ್ನುವುದು ಕಥೆಯ ಹಂದರ.

ಮಿಖಾಯಿಲ್ ಅವರ ಮುಂದಿನ ಕಾದಂಬರಿಯ ತುಣುಕುಗಳು ಮೇ ೧೯೪೩ ರಿಂದ ಫೆಬ್ರವರಿ ೧೯೪೪ರ ಅವಧಿಯಲ್ಲಿ ರಷ್ಯಾದ ಖ್ಯಾತ ಪತ್ರಿಕೆ ಪ್ರಾವ್ದಾದಲ್ಲಿ ಪ್ರಕಟವಾಯ್ತು. ಅದರಲ್ಲಿ ಬರುವ ನಾಯಕ ಹೇಳುವ ''ನೋವಿನ ಹಂತ ದಾಟಿದ್ದೇನೆ, ಇನ್ನು ರಕ್ತ ನನ್ನ ಕಿವಿಗಳಲ್ಲಿ ಹರಿಯಲಾರದು. ನನ್ನ ಸೇನಾಪಡೆ ಇಳಿಮುಖವಾಗಿದ್ದು ಸಂಕಷ್ಟದಲ್ಲಿ ಸಿಲುಕಿರುವಾಗ ನಾನು ಮನೆಯಲ್ಲಿ ಏಕೆ ಇರಲಿ? ನಾನು ಹಿಂದಿರುಗಿ ಏಕೆ ಹೋಗಬಾರದು? ಇಗೋ ನಾನಿಲ್ಲಿದ್ದೇನೆ! ನಾನು ಕಿವುಡನಾದರೂ ನನ್ನ ಕಾಮ್ರೇಡ್‌ಗಳ ಜೊತೆ ಜೊತೆಯಲ್ಲಿ ಹೋರಾಡುವುದು ಸುಲಭ'' ಎನ್ನುವ ಮಾತುಗಳು ಮೈನವಿರೇಳಿಸುತ್ತವೆ. ಮಿಖಾಯಿಲ್ ಅವರ ನಾಯಕ ಪಾತ್ರಗಳು ಯುದ್ಧವನ್ನು ಅಂತ್ಯಗೊಳಿಸಿ ಸಹಜ ಜೀವನಕ್ಕೆ ಮರಳ ಬೇಕೆನ್ನುವ ಪ್ರಬಲ ಸಾಹಸಿಗರು. ದೈಹಿಕವಾಗಿ ಹಾಗೂ ನೈತಿಕವಾಗಿ ಸದೃಢರು. ಅವರು ರಾಷ್ಟ್ರಪ್ರೇಮ ಅಪ್ರತಿಮವಾದುದು. ''ಸಾವು, ಬದುಕಿನಲ್ಲಿ ನಾವು ಸಹೋದರರಾಗಿಯೆ ಇದ್ದೇವೆ'' ಎನ್ನುವುದು ಅವರ ಪಲ್ಲವಿ. ನೀತಿಯ ನೆಲೆಯಲ್ಲಿ, ನಿಶ್ಚಲ ನಿಲುವಿನಲ್ಲಿ ನಿಂತವರು.

ಎರಡನೆ ಜಾಗತಿಕ ಯುದ್ಧ ಮಿಖಾಯಿಲ್ ಅವರನ್ನು ಗಾಢವಾಗಿ ಕಲಕಿತು. ೧೯೫೭ರಲ್ಲಿ The Fate of a Man ಕಥೆಯನ್ನು ಬರೆದರು. ನಂತರ ಅದು ಚಲನಚಿತ್ರವಾಯ್ತು. ರಷ್ಯಾ ಸೈನಿಕ ಜರ್ಮನರ ಸೆರೆಯಲ್ಲಿ ಅನುಭವಿಸಿದ ಚಿತ್ರಣವನ್ನು ಅದು ಕೊಡುತ್ತದೆ. ಎಂಥ ನೋವಿನ ಸಂದರ್ಭದಲ್ಲೂ ತನ್ನ ರಾಷ್ಟ್ರಪ್ರೇಮವನ್ನು ಬಿಟ್ಟುಕೊಡದ ಆತನ ಪ್ರಬಲ ಇಚ್ಛಾಶಕ್ತಿಯನ್ನು ಅದು ಬಿಂಬಿಸುತ್ತದೆ.

ಗಾಜಿನ ಮನೆಯಲ್ಲಿ ಕುಳಿತು ಬರೆಯುವ ಬರಹಗಾರರಲ್ಲ ಮಿಖಾಯಿಲ್. ಮಣ್ಣಿನೊಂದಿಗೆ ಒಂದಾಗಿ ಮಣ್ಣಿನ ಕಣ್ಣಿಂದ ಕಂಡವರು. ಸೋವಿಯತ್ ಆಡಳಿತದ ವಕ್ತಾರರಾಗಿ ಪತ್ರಿಕೆಗಳಿಗೆ ಬರೆದರು. ಉಪನ್ಯಾಸಗಳನ್ನು ನೀಡಿದರು. ಬರಹಗಾರರ ಒಕ್ಕೂಟದಲ್ಲಿ ಸಕ್ರಿಯ ಪಾತ್ರ ವಹಿಸಿದರು. ಅವರ ಅಭಿಪ್ರಾಯ ಎಂದರೆ ಸಾರ್ವಜನಿಕ ವಲಯದಲ್ಲಿ ಶಾಸನ ವಿದ್ದಂತೆ. ''ಪ್ರತಿಯೊಬ್ಬರೂ ತಮ್ಮ ಅಂತಃಸಾಕ್ಷಿಗೆ ಅನುಗುಣವಾಗಿ ಬರೆಯುತ್ತಾರೆ. ನಮ್ಮ ಹೃದಯಗಳು ನಮ್ಮ ಪಕ್ಷಕ್ಕೆ ಹಾಗು ಪವಿತ್ರ ತಾಯ್ನಾಡಿಗೆ ಸೇರಿವೆ. ನಮ್ಮ ಕಲೆಯ ಮೂಲಕ ನಮ್ಮ ರಾಷ್ಟ್ರಸೇವೆ ಮಾಡುತ್ತೇವೆ'' ಎನ್ನುವ ಅವರ ಮಾತು ಅವರ ರಾಷ್ಟ್ರಪ್ರೇಮದ ದ್ಯೋತಕವಾಗಿದೆ. ರಾಜಕೀಯ ವ್ಯಕ್ತಿ ಹಾಗೂ ಕಲಾಕಾರ ಬೇರೆ ಬೇರೆಯಲ್ಲದ ಅನನ್ಯತೆ ಅವರಲ್ಲಿ ಎದ್ದು ಕಾಣುವ ವಿಶೇಷ ಗುಣ. ಜನರು, ಪ್ರಕೃತಿ, ಜೀವನ, ಆಶಾವಾದ ಈ ಎಲ್ಲವೂ ಅವರ ಕೃತಿಗಳಲ್ಲಿ ಸ್ವತಂತ್ರವಾಗಿ ತುಂಬಿದ ಉಸಿರಿನೊಂದಿಗೆ ಉಸಿರಾಡುತ್ತವೆ.

ಜನರಂತೆ ಪಕ್ಷವೂ ಮಿಖಾಯಿಲ್ ಅವರನ್ನು ಯುಗ ಪ್ರವರ್ತಕನೆಂದು ಕೊಂಡಾಡುತ್ತದೆ. ಮಿಖಾಯಿಲ್ ಅವರೂ ಕೂಡ ತಮ್ಮ ಆತ್ಮಾಭಿಮಾನವನ್ನು ಬಿಟ್ಟುಕೊಟ್ಟಿಲ್ಲ. ''ನೊಬೆಲ್ ಬಹುಮಾನವನ್ನು ನನಗೆ ೨೦-೩೦ ವರ್ಷ ತಡವಾಗಿ ಕೊಡಲಾಗಿದೆ. ರಷ್ಯಾ ದೇಶದಲ್ಲಿ ನೊಬೆಲ್ ಬಹುಮಾನವನ್ನು ಪಡೆದವನು ನಾನೊಬ್ಬನೆ. ಏಕೆಂದರೆ ೧೯೩೩ರಲ್ಲಿ ಬುನಿನ್‌ಗೆ ಬಂದಾಗ ಅವರು ಗಡೀಪಾರಿಗೆ ಒಳಗಾಗಿದ್ದರು. ೧೯೫೮ರಲ್ಲಿ ಬೋರಿಸ್ ಪಾಸ್ತರ್‌ನಾಕ್ ಅವರಿಗೆ ಬಂದಾಗ ಅವರು ಆಂತರಿಕ ಗಡಿಪಾರಿಗೆ ಈಡಾಗಿದ್ದರು'' ಎಂದಿದ್ದಾರೆ.

ಅದೇನೇ ಇರಲಿ ಮಿಖಾಯಿಲ್ ಅವರು ರಷ್ಯಾದ ಶ್ರೇಷ್ಠ ಬರಹಗಾರರು ಎನ್ನುವುದರಲ್ಲಿ ಎರಡು ಮಾತಿಲ್ಲ. ರಷ್ಯಾದ ಕೀರ್ತಿಯನ್ನು ತಮ್ಮ ಸಾಹಿತ್ಯದ ಮೂಲಕ ವಿಶ್ವವ್ಯಾಪಕಗೊಳಿಸಿದ ಹಿರಿಮೆ ಅವರದು.

ಅವರು ರಷ್ಯಾ ಕ್ರಾಂತಿ ಹಾಗು ರಷ್ಯಾದ ಅಂತರ್ಯುದ್ಧಗಳ ಅನೇಕ ಹಂತಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡವರು. ತಾವು ಹುಟ್ಟಿದ ಪ್ರಾಂತ್ಯದ ಏಳುಬೀಳುಗಳನ್ನ ಕಣ್ಣಾರೆ ಕಂಡವರು. ಅವರು ಅಲ್ಲಿ ಪಡೆದುಕೊಂಡ ಅನುಭವಗಳನ್ನ ತಮ್ಮ ಸಾಹಿತ್ಯದಲ್ಲಿ ಜೀವಂತಗೊಳಿಸಿದ್ದಾರೆ.''ತಮ್ಮ ಮಾತೃಭೂಮಿಯನ್ನು ಅಪವಿತ್ರಗೊಳಿಸದೆ ತಮ್ಮ ರಕ್ತದ ಕಾಲುವೆ ಹರಿಸಿ ಕಾಪಾಡಿಕೊಂಡ ಕೊಸಾಕ್ ಜನರ ಪವಿತ್ರ ಭೂಮಿಯನ್ನು ಅದರ ಪುತ್ರನಾಗಿ ಪ್ರೀತಿಯಿಂದ ಚುಂಬಿಸುತ್ತೇನೆ'' ಎನ್ನುವ ಮಿಖಾಯಿಲ್ ಅವರ ತಾಯ್ನಾಡಿನ ಹಾಗೂ ಜನರ ಮೇಲಿನ ಪ್ರೀತಿ ಅಮರವಾದುದು.

ಪ್ರಶಸ್ತಿಯನ್ನು ಸ್ವೀಕರಿಸಿ ಮಾಡಿದ ಭಾಷಣದಲ್ಲಿ ಮಿಖಾಯಿಲ್ ''ಮಾನವೀಯತೆ ಇನ್ನೂ ಗುಂಪುಗಳ ಒಡಕಿಗೆ ಒಳಗಾಗಿಲ್ಲ. ಭೂಮಿಯ ಗುರುತ್ವಾಕರ್ಷದಿಂದ ಕಳಚಿಕೊಂಡ ಗಗನ ಯಾತ್ರಿಗಳಂತೆ ಜನರು ಶೂನ್ಯದಲ್ಲಿ ತೇಲಾಡುತ್ತಿದ್ದಾರೆ. ನಾವು ಭೂಮಿಯ ಮೇಲೆ ಬದುಕುತ್ತಿದ್ದೇವೆ. ನಾವು ಅದರ ನಿಯಮಕ್ಕೆ ಬದ್ಧರು. ಪವಿತ್ರ ಗ್ರಂಥ ಹೇಳುವಂತೆ ಮುಂದಿನ ಒಳಿತಿಗಾಗಿ ದಿನನಿತ್ಯದ ಪಾಪ ಕೃತ್ಯಗಳಲ್ಲಿ, ತೊಂದರೆಗಳಲ್ಲಿ ಸಿಲುಕಿಯೂ ಭರವಸೆಯಿಂದ ಬದುಕುತ್ತಿದ್ದೇವೆ. ಪ್ರಪಂಚದ ಬಹುತೇಕ ಜನರು ಇದೇ ಭರವಸೆಯಿಂದ ಸ್ಫೂರ್ತಿಗೊಂಡಿದ್ದಾರೆ. ಅದೇ ಕಾರಣದಿಂದ ಒಡೆದುಹೋಗದೆ ಒಂದಾಗಿ ಬದುಕುತ್ತಿದ್ದಾರೆ. ತಮ್ಮ ಕೈಗಳು ಮತ್ತು ಮೆದುಳಿನಿಂದ ಎಲ್ಲವನ್ನೂ ಸೃಷ್ಟಿಸುವ

ಕಾರ್ಮಿಕರಿದ್ದಾರೆ. ಅಂಥವರ ಸೇವೆಗಾಗಿ ತಮ್ಮ ಲೇಖನಿಯನ್ನು ಬಳಸುವವರಲ್ಲಿ ನಾನೂ ಒಬ್ಬ. ನಾನೊಬ್ಬ ಸೋವಿಯತ್ ಬರಹಗಾರನಾಗಿ ಇಂಥ ಕಲೆಯಲ್ಲಿ ನನ್ನನ್ನು ಗುರುತಿಸಿಕೊಳ್ಳುತ್ತೇನೆ.

''ಒಂದು ಅನಿಶ್ಚಿತತೆಯ ಯುಗದಲ್ಲಿ ನಾವು ಬದುಕುತ್ತಿದ್ದೇವೆ. ಭೂಮಿಯ ಮೇಲಿರುವ ಯಾವ ದೇಶವೂ ಯುದ್ಧವನ್ನು ಇಚ್ಛಿಸುವುದಿಲ್ಲ. ಎರಡನೆ ಮಹಾಯುದ್ಧದ ಬೂದಿ ಬರಹಗಾರನ ಹೃದಯವನ್ನು ತಲ್ಲಣಗೊಳಿಸಲು ಸಾಕಲ್ಲವೆ ? ಮನುಕುಲವನ್ನ ಸ್ವಯಂ ನಾಶಕ್ಕೆ ಕನಿಷ್ಠಗೊಳಿಸುವವರ ಇಚ್ಛೆಯ ವಿರುದ್ಧ ಎದ್ದು ನಿಲ್ಲುವುದಕ್ಕೆ ಒಬ್ಬ ಪ್ರಾಮಾಣಿಕ ಬರಹಗಾರ ಬದ್ಧನಾಗಿಲ್ಲವೇ ?

''ಕೆಲವು ವೇಳೆ ಕಹಿ ಎನಿಸಿದರೂ ಸತ್ಯ ಹೇಳುವಲ್ಲಿ ಬರಹಗಾರ ಓದುಗರಿಗೆ ಪ್ರಾಮಾಣಿಕನಾಗಿರಬೇಕಾಗುತ್ತದೆ. ಭವಿಷ್ಯದ ಭರವಸೆಯನ್ನ ಅವರ ಹೃದಯದಲ್ಲಿ ತುಂಬಬೇಕಾಗುತ್ತದೆ. ಅವರಲ್ಲೆ ಸ್ವಯಂ ಶಕ್ತಿಯನ್ನ ಉದ್ದೀಪನಗೊಳಿಸಬೇಕಾಗುತ್ತದೆ. ಜನರ ಬುದ್ಧಿಯನ್ನ, ಧೀಶಕ್ತಿಯನ್ನ ಪ್ರಖರಗೊಳಿಸಬಲ್ಲ ಶಕ್ತಿ ಕಲೆಗಿದೆ. ಯಾರು ಕಲಾಕಾರನೆಂದು ಕರೆದುಕೊಳ್ಳುತ್ತಾನೋ ಆತ ಮನುಕುಲದ ಒಳಿತಿಗಾಗಿ ಈ ಕಾರ್ಯವನ್ನು ಮಾಡುತ್ತಾನೆ.

''ಜನರು ಉತ್ತಮ ಸ್ಥಿತಿಗೇರುವಂತೆ, ಅವರ ಮನಸ್ಸು ಪವಿತ್ರಗೊಳ್ಳುವಂತೆ ಮಾಡುವ ಶಕ್ತಿ ನನ್ನ ಕೃತಿಗಳಿಗಿರಬೇಕೆಂದು ನಾನು ಇಚ್ಛಿಸುತ್ತೇನೆ. ಅವು ತಮ್ಮ ಸಹ ಜೀವಿಗಳಲ್ಲಿ ಪ್ರೀತಿಯನ್ನು ಉಕ್ಕಿಸುವಂತಿರಬೇಕು. ಮಾನವ ಪ್ರಗತಿಗೆ, ಮನುಕುಲದ ಆದರ್ಶಕ್ಕೆ ಕ್ರಿಯಾತ್ಮಕವಾಗಿ ಹೋರಾಡುವ ಹಂಬಲ ಹೊತ್ತಿರಬೇಕು. ಅಂತಹ ಸಾಧನೆಯನ್ನು ನನ್ನ ಕೃತಿಗಳು ಅಷ್ಟಿಷ್ಟು ಮಾಡಿದ್ದರೆ ನನಗೆ ಸಂತೋಷ'' ಎಂದು ಹೇಳಿರುವುದು ಅಂದಿಗೂ, ಇಂದಿಗೂ, ಎಂದೆಂದಿಗೂ ಮನನಯೋಗ್ಯವಾಗಿವೆ.

ಹೀಗೆ ತಮ್ಮನ್ನು ಜನಾಂಗಕ್ಕೆ, ರಾಷ್ಟ್ರಕ್ಕೆ ಸಮರ್ಪಿಸಿಕೊಂಡು ಹೋರಾಡುತ್ತ ಇಡೀ ಮನುಕುಲದ ಏಳ್ಗೆಗೆ ಚಿಂತಿಸಿ ಕಲಾತ್ಮಕ ಕೃತಿಗಳನ್ನು ನೀಡಿ ವಿಶ್ವಖ್ಯಾತಿಯನ್ನು ಗಳಿಸಿದ ಮಿಖಾಯಿಲ್ ಶೊಲೊಖೊವ್ ಅವರು ೨೧.೦೨.೧೯೮೪ರಂದು ಮಾಸ್ಕೊ ನಗರದಲ್ಲಿ ತಮ್ಮ ಬದುಕಿಗೆ ವಿದಾಯ ಹೇಳಿದರು.




ಜ. ಹೊ. ನಾರಾಯಣಸ್ವಾಮಿ
ವಕೀಲರು, ''ಮಾನವ'', ೨೦೬೪/ಎ, ಉತ್ತರ ಬಡಾವಣೆ
ಹಾಸನ - ೫೭೩ ೨೦೧


# ಡೈಯಾಬಿಟಿಸ್ ಹೆಚ್ಚಾಗೇತ್ರಿ !

**ಬೆಂ**ಗಳೂರಿನಿಂದ ಬಸ್ಸು ಹಿಡಿದು ಬಾಗಲಕೋಟೆಗೆ ಹೊರಟಿದ್ದೆ. ಖಾಸಗಿ ಬಸ್ ನಿಲ್ದಾಣದಲ್ಲಿ ಪರಿಚಯದವರೊಬ್ಬರು ಭೇಟಿಯಾದರು. ಬಹಳೇ ಕಂಗಾಲಾಗಿದ್ದರು. ತೂಕ ಇಳಿದುಹೋಗಿತ್ತು. ನಾನು ನೋಡಿ ಚಕಿತನಾದೆ. ''ಏನು ಸಾಹೇಬ್ರು ಭಾಳ ಸೊರಗಿರುವಿರಿ'' ಎಂದೆ. ಅವರು ''ಹೌದ್ರಿ ನನ್ನ ಡೈಯಾಬಿಟಿಸ್ ಹೆಚ್ಚಾಗೇತ್ರಿ. ನನ್ನ ಫಿಸಿಶಿಯನ್ ಡೈಯಾಬಿಟಿಸ್ ಸಿವಿಯರ್ ಆಗಿದೆ ಎಂದು ಹೇಳಿದರು.'' ''ಡೈಯಾಬಿಟಿಸ್ ಯಾಕೆ ಹೆಚ್ಚಾಗಿದೆ'' ಎಂದೆ. ಅವರು ನಗುತ್ತ ಹೇಳಿದರು, 'ಅಲ್ರೆಪಾ, ನೀವು ನನಗ ಹೇಳಬೇಕು ಅದನ್ನು ಬಿಟ್ಟು ನನ್ನ ಕೇಳುತ್ತೀರಲ್ಲ ?' ಎಂದು ನಗಹತ್ತಿದರು.

ಇದು ನಿಜ. ನಿತ್ಯ ಇಂಥ ಘಟನೆಗಳು ನಡೆಯುತ್ತಿವೆ. ಹಲವಾರು ಜನ ಡೈಯಾಬಿಟಿಕ್ ವ್ಯಕ್ತಿಗಳು ಬಳಲುತ್ತ ಹೋಗುವರು. ಅವರು ಸೇವಿಸುವ ಗುಳಿಗೆಗಳನ್ನು ಜಾಸ್ತಿ ಮಾಡಿದರೂ ಸಕ್ಕರೆ ಪ್ರಮಾಣ ಕಡಿಮೆಯಾಗುವದಿಲ್ಲ. ಹಲವಾರು ಸಲ ಇನ್ಸುಲಿನ್ ಇಂಜೆಕ್ಷನ್ ಸೇರಿಸುತ್ತಾರೆ. ಜಾಸ್ತಿ ಪ್ರಮಾಣದಲ್ಲಿ ಇನ್ಸುಲಿನ್ ಚುಚ್ಚುತ್ತಾರೆ. ಈ ಎಲ್ಲ ಪ್ರಯತ್ನಗಳಿಗೂ ಅದು ಬಗ್ಗುವದಿಲ್ಲ. ಕೆಲವು ಬಾರಿ ಔಷಧ ಹೆಚ್ಚಾದಂತೆ ರಕ್ತದಲ್ಲಿ ಸಕ್ಕರೆ ಪ್ರಮಾಣವೂ ಏರುತ್ತದೆ. ರೋಗಿಯನ್ನು ಹಾಗೂ ವೈದ್ಯರನ್ನು ಗೊಂದಲದಲ್ಲಿ ಕೆಡಹುತ್ತದೆ.

ನಿಜವಾಗಿ ಹೇಳಬೇಕೆಂದರೆ ಡೈಯಾಬಿಟಿಸ್ ಹೆಚ್ಚಾಗುವದೆಂದರೇನು ? ಎಂಬ ವಿಷಯವೇ ನನಗೆ ತಿಳಿಯುತ್ತಿಲ್ಲ. ಮೂತ್ರಪಿಂಡ ಸೋತು ವ್ಯಕ್ತಿ ಕಂಗಾಲಾಗುವನು. ಕ್ಷಯ ರೋಗ ನಿರೋಧಕ ಶಕ್ತಿ ಕುಂದಿದಂತೆ ಹೆಚ್ಚಾಗುವದು. ಇವೆಲ್ಲ ತಿಳಿಯುತ್ತವೆ. ಡೈಯಾಬಿಟಿಸ್ ಯಾಕೆ ಹೆಚ್ಚಾಯಿತು ? ರೋಗಿಯು ಜಿಲೇಬಿ ಊಟ ಮಾಡಿದನು, ಬೇಸನ್ ಉಂಡಿ ತಿಂದನು, ಹೋಳಿಗೆ ಉಂಡನು ಎಂದು ಹೇಳಲು ಸಾಧ್ಯವೇ ಇಲ್ಲ. ವ್ಯಕ್ತಿ ಒಂದು ನೂರು ಉಂಡಿ ತಿಂದರೂ ಒಂದು ಪೆಂಟಿ ಬೆಲ್ಲ ತಿಂದರೂ ಡೈಯಾಬಿಟಿಸ್ ಹೆಚ್ಚಾಗುವದಿಲ್ಲ. ರಕ್ತ ಸೇರಿದ ಸಕ್ಕರೆ ತನ್ನಿಂದ ತಾನೇ ಕಡಿಮೆಯಾಗುತ್ತದೆ. ಆ ವ್ಯಕ್ತಿಗೆ ಡೈಯಾಬಿಟಿಸ್ ಆದ ಮೇಲೆ ಯಾವ ಮಟ್ಟಕ್ಕೆ ಅದು ಇರಬೇಕೋ ಅದಕ್ಕೆ ಮರಳಲೇ ಬೇಕು. ಒಂದೇ ಮಾತಿನಲ್ಲಿ ಹೇಳುವುದಾದರೆ ತಿನ್ನುವದರಿಂದ ಡೈಯಾಬಿಟಿಸ್ ಹೆಚ್ಚಾಗುವದಿಲ್ಲ. ಡೈಯಾಬಿಟಿಸ್ ವ್ಯಕ್ತಿಯನ್ನು ಉಪವಾಸ ಹಾಕಿದರೂ ಹೆಚ್ಚಾದ ಡೈಯಾಬಿಟಿಸ್ ಅಂದರೆ ರಕ್ತದ ಗ್ಲುಕೋಸ್ ಕೆಳಗೆ ಇಳಿಯುವದಿಲ್ಲ.

ಹಾಗಾದರೆ ಎಲ್ಲಿ ತಪ್ಪಿರಬೇಕು ? ನಾವು ಮಾಡರ್ನ್ ಉಪಚಾರದಲ್ಲಿ ನಂಬಿಕೆ ಇಟ್ಟವರು ಸ್ವಾದುಪಿಂಡದ ಮೇಲೆ ದೋಷ ಹಾಕುತ್ತೇವೆ. ಹಾಗಾದರೆ ಇನ್ಸುಲಿನ್ ಸ್ರವಿಕೆ ಬತ್ತಿ ಹೋಯಿತೆ ? ಅಥವಾ ಸ್ವಾದುಪಿಂಡ (ಪ್ಯಾಂಕ್ರಿಯಸ್) ಗ್ರಂಥಿ ಕೊಳುತು ಹೋಯಿತೆ ? ಅದಕ್ಕೆ ಏನಾದರೂ ಬಾವು ಬಂದಿದೆಯೇ ? ಡೈಯಾಬಿಟಿಸ್ ಹೆಚ್ಚಾಗಿದೆ ಅನ್ನುವ ವ್ಯಕ್ತಿಗಳನ್ನು ಸಂಪೂರ್ಣವಾಗಿ ಎಲ್ಲ ವಿಧಗಳಿಂದಲೂ ಪರೀಕ್ಷಿಸಿದರೂ ಒಂದೂ ಕೊರತೆ ಕಾಣುವದಿಲ್ಲ. ಹಾಗಾದರೆ ಈ ವ್ಯಕ್ತಿಗೆ ಏನಾಗಿದೆ ? ಡೈಯಾಬಿಟಿಸ್ ಯಾಕೆ ಹೆಚ್ಚಾಯಿತು ? ಅದು ಹಾಗಲ್ಲ. ಸ್ನಾಯುಗಳ ಹಾಗೂ ಉಳಿದ ಜೀವಕೋಶಗಳ ಮೈಮೇಲೆ ರಿಸೆಪ್ಟಾರ್ಸ್ ಎಂಬ ಮೊಗ್ಗುಗಳಿರುತ್ತವೆ. ಅವು ಡೈಯಾಬಿಟಿಸ್ ರೋಗಿಗಳಲ್ಲಿ ಮುಚ್ಚಿಕೊಂಡಿರುತ್ತವೆ. ಇದರಿಂದ ರಕ್ತದಲ್ಲಿಯ ಗ್ಲೂಕೋಸ್ ಜೀವಕೋಶಗಳನ್ನು ಸೇರುವದಿಲ್ಲ. ಉಪಯೋಗಿಸಲ್ಪಡುವದಿಲ್ಲ. ಗ್ಲುಕೋಸ್ ರಕ್ತದಲ್ಲಿ ಶೇಖರಗೊಳ್ಳುತ್ತ ಹೋಗಿ ಡೈಯಾಬಿಟಿಸ್ ಹೆಚ್ಚಾಗುವದು, ಎಂದು ಹೇಳುವವರೂ ಇದ್ದಾರೆ. ಅವರು ಹೇಳಿದ್ದನ್ನು ಕೇಳಿ ಹೌದು, ಇರಬಹುದೆಂದು ಸುಮ್ಮನೆ ಕೂಡ್ರಬಹುದು. ಆದರೆ ವಿಚಾರಿಸಿದರೆ ಇದರಲ್ಲಿ ಹುರುಳು ಇರುವದು ಸತ್ಯವೇ ಎಂಬ ಪ್ರಶ್ನೆ ಬರುವದು. ಡೈಯಾಬಿಟಿಸ್ ಹೆಚ್ಚಾದ ವ್ಯಕ್ತಿ ಅಡ್ಡಾಡುವದಿಲ್ಲವೇ ? ತನ್ನ ಕಾರ್ಯಗಳನ್ನು ತಾನೇ ಮಾಡಿಕೊಂಡು ಹೋಗುವದಿಲ್ಲವೇ ? ಎಲ್ಲವೂ ಸರಿಯಾಗಿಯೇ ನಡೆದಿರುತ್ತದೆ. ಹಾಗಾದರೆ ಇದ್ದ ಗ್ಲೂಕೋಸ್ ಉಪಯೋಗವಾಗದೇ ರಕ್ತದ ಗ್ಲೂಕೋಸ್ ಹೆಚ್ಚುವದು ಎಂದು ಹೇಳುವದರಲ್ಲಿ ಸತ್ಯವೆಲ್ಲಿದೆ ? ವ್ಯಕ್ತಿ ಯಾವದೇ ಕಾರ್ಯ ಮಾಡಲಿ ದೇಹದ ಜೀವಕಣಗಳಿಗೆ ಶಕ್ತಿ ಬೇಕು. ಶಕ್ತಿ ಬೇಕಾದರೆ ಗ್ಲೂಕೋಸ್ ಬೇಕು. ಅಂದರೆ ಡೈಯಾಬಿಟಿಸ್ ಹೆಚ್ಚಾದ ವ್ಯಕ್ತಿಯಲ್ಲಿಯೂ ಗ್ಲೂಕೋಸ್ ಉಪಯೋಗ ನಿರರ್ಗಳವಾಗಿ ನಡೆದೇ ಇರುವಾಗ ರಿಸೆಪ್ಟಾರ್ಸ್ ಎಂಬ ಗೊಂದಲವೇಕೆ ?

ಅಂದರೆ ಡೈಯಾಬಿಟಿಸ್ ಸೀರಿಯಸ್ ಆಗುವದಿಲ್ಲವೇ ? ಅಥವಾ ಡೈಯಾಬಿಟಿಸ್ ಹೆಚ್ಚಾಗುವದಿಲ್ಲವೇ ? ಯಾಕೆ ಆಗುವದಿಲ್ಲ ? ಸಾವಿರಾರು ರೋಗಿಗಳಲ್ಲಿ ಅದು ಹೆಚ್ಚಾದದ್ದು ನಿತ್ಯ ನೋಡುತ್ತೇವೆ. ಈಗ ನಾವು ತಿಳಿದಂತೆ, ತಿಳಿದು ಉಪಚರಿಸುವಂತೆ ಅದು ಪ್ಯಾಂಕ್ರಿಯಸ್‌ನ ದೋಷದಿಂದ ಇರಲು ಸಾಧ್ಯವಿಲ್ಲ. ಬಹುಶಃ ಮಿದುಳಿನ ಗೊಂದಲದಿಂದ ಡೈಯಾಬಿಟಿಸ್ ಹೆಚ್ಚಾಗಬಹುದು. ಸೀರಿಯಸ್ ಆಗಬಹುದು. ಅಂದರೆ ರಕ್ತದ ಗ್ಲೂಕೋಸ್ ಮಟ್ಟ ಏರಬಹುದು. ಇಂಥ ವ್ಯಕ್ತಿಗಳ ರೋಗ ಲಕ್ಷಣಗಳಲ್ಲಿ ಹೆಚ್ಚಾಗಿ ಮೆದುಳಿನ ಗೊಂದಲದ ಲಕ್ಷಣಗಳೇ ಇರುತ್ತವೆ. ಅವುಗಳನ್ನೇ ನಾವು ಡೈಯಾಬಿಟಿಸ್ ಹೆಚ್ಚಾದ ಲಕ್ಷಣ ಎನ್ನುತ್ತಿರಬಹುದು. ಮೆದುಳಿನಲ್ಲಿಯ ಈ ಗಡಿಬಿಡಿ, ಗೊಂದಲ, ತಳಮಳ, ಒತ್ತಡಗಳು ರಕ್ತದ ಗ್ಲೂಕೋಸ್ ಏರಿಸಲು ಶಕ್ಯವಿದೆ. ಕಾರಣ ನಮ್ಮ ಉಪಚಾರವನ್ನು ಬದಲಿಸಿ ಮೆದುಳನ್ನು ಶಾಂತಗೊಳಿಸುವ ಮದ್ದುಗಳನ್ನು ಉಪಯೋಗಿಸಿ ನೋಡಬೇಕು. ಅಂಥ ಉಪಾಯಗಳನ್ನು ಬಳಸಬೇಕು. ಬಹುಶಃ ಆಗ ಎಲ್ಲವೂ ನಿಯಂತ್ರಣದಲ್ಲಿ ಬರಬಹುದು. ಸಂಕ್ಷಿಪ್ತದಲ್ಲಿ ಹೇಳುವದಾದರೆ ಮೆದುಳಿನ ಒತ್ತಡದಿಂದ ಗ್ಲೂಕೋಸ್ ಹೆಚ್ಚಾಗಬಹುದೇ ವಿನಃ ಗ್ಲೂಕೋಸ್ ಹೆಚ್ಚಾಗಿ ಮೆದುಳನ್ನು ಗೊಂದಲದಲ್ಲಿ ನೂಕದು.

ಸದ್ಯದ ತಿಳುವಳಿಕೆ ಇದಕ್ಕೆ ವ್ಯತಿರಿಕ್ತವಾಗಿದೆ. ಕಾರಣವೇ, ನಾವು ''ಡೈಯಾಬಿಟಿಸ್ ಹೆಚ್ಚಾಗಿದೆ'' ಎಂಬ ತಪ್ಪು ಪದವನ್ನು ಬಳಸುತ್ತೇವೆ. ಗ್ಲೂಕೋಸ್ ಮಟ್ಟ ಮೆದುಳಿನ ಹಿಡಿತದಲ್ಲಿ ಇದೆಯೇ ವಿನಃ ಮೆದುಳು ಗ್ಲೂಕೋಸ್ ಮಟ್ಟದ ಅಳವಿನಲ್ಲಿ ಇರಲು ಸಾಧ್ಯವಿಲ್ಲ. ಆದ್ದರಿಂದಲೇ ರಕ್ತದ ಗ್ಲೂಕೋಸ್ ಮಟ್ಟ ಏರಿದೆ ಎಂದರೆ ಮಿದುಳಿನ ತಳಮಳ ಹೆಚ್ಚಿದೆ ಎಂದು ಅರ್ಥ. ಅದನ್ನು ನಾವು ಡೈಯಾಬಿಟಿಸ್ ಹೆಚ್ಚಾಗಿದೆ ಅನ್ನುವದು ಸರಿ ಎನಿಸದು. ಗ್ಲೂಕೋಸ್ ಮಟ್ಟ ಏರಿದೆ ಎಂದರೆ ಪ್ಯಾಂಕ್ರಿಯಸ್ ತೊಂದರೆಯಲ್ಲಿದೆ ಎಂದು ಅರ್ಥಮಾಡದೆ ಮನಸ್ಸಿನ ತಳಮಳ ಹೆಚ್ಚಿದೆ ಎಂದು ಅರ್ಥ.


ಡಾ॥ ಸ. ಜ. ನಾಗಲೋಟಿಮಠ, ಮೆಡಿಕಲ್ ಡೈರೆಕ್ಟರ್, ಬಸವೇಶ್ವರ ವಿದ್ಯಾವರ್ಧಕ ಸಂಘ, ಬಾಗಲಕೋಟೆ - ೫೮೭ ೧೦೧

# ಮಾಯಕಾರ್ತಿ ನೀನೇ ಯಲ್ಲಮ್ಮಾ

ಮಾರುತಿ ದಾಸಣ್ಣವರ

*"ಮಾಯಕಾರ್ತಿ ನೀನೇ ಯಲ್ಲಮ್ಮಾ।*
*ನಿನ ದಯವಿರಲೆಮ್ಮಾ।*
*ಉಧೋ ಉಧೋ ತಾಯಿ ಯಲ್ಲಮ್ಮಾ॥"*

ಚೌಡಕಿ, ಸುತಿ, ತಾಳಗಳ ಮೇಳದೊಂದಿಗೆ ಜೋಗಿತಿಯರ ಬಾಯಿಂದ ಸಮ್ಮೋಹಕ ಸಂಗೀತ ಲಯಬದ್ಧವಾಗಿ ಹೊರಟು ಗುಡ್ಡದ ಕಲ್ಲು ಬಂಡೆಗಳಿಗೆ ತಾಗಿ ಪ್ರತಿಧ್ವನಿಸಿ ಭಕ್ತಾದಿಗಳನ್ನೆಲ್ಲ ತನ್ನತ್ತ ಸೆಳೆಯುತ್ತಿತ್ತು. ಆ ಜೋಗಿತಿಯರ ಮೇಳದಲ್ಲಿದ್ದ 'ಚಂದ್ರಿ'ಯು ಕೈಯಲ್ಲಿ ಸಣ್ಣ ಸಣ್ಣ ತಾಳಗಳನ್ನು ಹಿಡಿದುಕೊಂಡು ಝಣ್-ಝಣ್, ಝಣಕ್, ಝಣ್ ಎಂದು ಲಯಕ್ಕನುಗುಣವಾಗಿ ಹೊಡೆಯುತ್ತಿದ್ದಳು. ಆ ತಾಳಗಳ ನಾದ ಅವಳೆದೆಯ ಬಾವಿಯ ತಳದಿಂದ ಬಂದು, ಒಂದು ರೀತಿಯ ಅಲೌಕಿಕ ನಾದ ಮಾಧುರ್ಯದ ಸುಖವನ್ನೂ, ಅದಕ್ಕಿಂತ ಹೆಚ್ಚಾಗಿ ಭಯದಿಂದ ತುಂಬಿದ ಭಕ್ತಿಯನ್ನೂ ಇಮ್ಮಡಿಗೊಳಿಸುತ್ತಿತ್ತು.

ಗುಡ್ಡದ ತುಂಬಾ ಭಕ್ತರೇ ಭಕ್ತರು; ಎಲ್ಲರ ಬಾಯಲ್ಲಿಯೂ ತಾಯಿಯ ಲೀಲೆಯೇ, ಉಧೋ, ಉಧೋ, ಉಧೋಽಽಽಽ ಉಧೋಽಽಽ ಉಧೋ. ಹಣೆಯಲ್ಲಿ ಎಲ್ಲಮ್ಮ ತಾಯಿಯ ಭಂಡಾರ, ಮೂಗಿಗೆ ನತ್ತು, ಕುತ್ತಿಗೆಯಲ್ಲಿ ಬಂಗಾರದ ಟಿಕ್ಕೆ, ಕಿವಿಯಲ್ಲಿ ಮೊನ್ನೆಯೇ ಕೊಂಡುಕೊಂಡ ರಿಂಗುಗಳು; ಮೈಗೆ ಒಪ್ಪವಾಗಿ ಹತ್ತಿಕೊಂಡ ಬಿಗಿಯಾದ ರವಿಕೆ. ಭಂಡಾರ ಬಣ್ಣದ ಸೀರೆ; ಕೈತುಂಬಾ ಹಸಿರು ಬಳೆ; ಎಡಗೈಯ ಕಿರುಬೆರಳಲ್ಲಿ ಹೊಳೆಯುವ ನಕಲಿ ಉಂಗುರ, ಕಾಲಲ್ಲಿ ಚೈನು, ಕಾಲುಂಗುರ. ಚಂದ್ರಿ ತನ್ನನ್ನು ತಾನೇ ನೋಡಿಕೊಳ್ಳುತ್ತಾ "ಈ ಎಲ್ಲಾ ಜೋಗ್ಯಾರ್‍ಗಿಂತ ನಾಽ ಚೆಂದ ಅದಽಽನಿ" ಎಂದುಕೊಂಡು ಹೆಮ್ಮೆ ಪಡುತ್ತಿದ್ದಳು.

*"ಹುಟ್ಟಿ ಬಂದಿ ಯಲ್ಲಮ್ಮನಾಗಿ*
*ನಿನ ಮದುವಿ ಮಾಡಿ ಕೊಟ್ಟಾರವ್ವ*
*ಜಮಽದಗ್ನಿಗಿ"*

ರೇಣುಕಾದೇವಿಯ ಕತೆ ಹಾಡಿನಲ್ಲಿ ಮುಂದುವರಿದಿತ್ತು. ತಮ್ಮನ್ನು ನೋಡಲು ಬಾಯ್ತೆರೆದು ನಿಂತಿದ್ದ ಭಕ್ತಾದಿಗಳನ್ನು ನೋಡುತ್ತಿರುವಂತೆಯೇ ಚಂದ್ರಿಗೆ ತನ್ನ ಗತ ಜೀವನದ ನೆನಪಾಗತೊಡಗಿತು. ಚಂದ್ರಿಯು ತಾಯಿಯ ಸನ್ನಿಧಿಗೆ ಬಂದು ಸುಮಾರು ಆರು ತಿಂಗಳಾಗಿತ್ತು. ಹಾಗೆಂದು ಅವಳ ಜೊತೆಗಾರ್ತಿ ಜೋಗಿತಿಯರು ಹೇಳುತ್ತಾರೆ; ಅವಳಿಗೆ ನೆನಪಿಲ್ಲ. ರಾತ್ರೋ ರಾತ್ರಿ ಕಾಲ್ನಡಿಗೆಯಿಂದಲೇ ಹರಿಪುರದಿಂದ ಮುನೋಳಿ, ಮುನೋಳಿಯಿಂದ ಜೋಗಳಬಾವಿ, ಅಲ್ಲಿಂದ ತಾಯಿ ಗುಡ್ಡಕ ಬಂದು ಮುತ್ತು ಕಟ್ಟಿಸಿಕೊಂಡದ್ದು! ನೆನಪಾದರೆ, " ಎಲ್ಲಾ ತಾಯಿ ಮೈಮಾ. ಅಕಿ-ಮೈಮಾನಽ ನನ್ನ ಇಲ್ಲೀತನಕಾ ಬರೂಹಂಗ ಮಾಡಿತು." ಯಲ್ಲವ್ವ ತಾಯಿಯ ಅಲೌಕಿಕ ಸಮ್ಮೋಹಕ ಬಲೆಯ ತೂತು, ತೂತುಗಳಲ್ಲಿ ಹರಕು-ಹರಕಾಗಿ ಚಂದ್ರಿಯ ಲೌಕಿಕ ಬದುಕಿನ ನೆನಪುಗಳು ಕಾಣಿಸತೊಡಗಿದವು, ಎಂದೋ, ಎಲ್ಲಿಯೋ ನೋಡಿದ ಕಪ್ಪು ಬಿಳುಪು ಸಿನೇಮಾದ ಹಾಗೆ.

ತಂದೆ ತಾಯಿ ತುಂಬಾ ಬಡವರು. ಅವರು ತನ್ನನ್ನೂ ತನ್ನ ತಮ್ಮಂದಿರನ್ನೂ ಸಾಕಲು ತುಂಬಾ ಕಷ್ಟಪಡುತ್ತಿದ್ದರು. ಅವ್ವ ಯಾರ್‍ಯಾರದೋ ಕೈ ಕಾಲು ಬಿದ್ದು ಅವರ ಮಕ್ಕಳ ಹಳೆಯ ಅಂಗಿ ಚೆಡ್ಡಿ ಇಸಕೊಂಡು ಬರುತ್ತಿದ್ದಳು. ಊಟಕ್ಕೆ ಒಮ್ಮೊಮ್ಮೆ "ಗೊಂಜಾಳ ನುಚ್ಚು" ಮಾತ್ರವೇ ಸಿಗುತ್ತಿತ್ತು. ಪರಿಸ್ಥಿತಿ ಹೀಗಿದ್ದರೂ ಪ್ರತಿ ವರುಷ ತಾಯೀ ಜಾತ್ರೆಗೆ ತಪ್ಪದೇ ಹೋಗುತ್ತಿದ್ದರು. ಅವರಿಬ್ಬರೂ ಯಲ್ಲಮ್ಮನ ಕಟ್ಟಾ ಭಕ್ತರು. ಸಾವಕಾರರ ಕೈಕಾಲು ಬಿದ್ದಾದರೂ ರೊಕ್ಕ ಇಸಗೊಂಡು ತಾಯಿ ದರುಶನಕ್ಕೆ ಬರುತ್ತಿದ್ದರು.

ಇಷ್ಟು ಬಡತನವಿದ್ದರೂ 'ಚಂದ್ರಿ'..... ಅಲ್ಲಲ್ಲ 'ಚಂದ್ರು', ತಾನಿನ್ನೂ ಆಗ ಚಂದ್ರಿಯಾಗಿರದೆ 'ಚಂದ್ರು' ಇದ್ದನೆಂಬ ನೆನಪಿನಿಂದಲೇ ಚಂದ್ರಿಗೆ ಒಂದು ಕ್ಷಣ ಗಲಿಬಿಲಿಯಾಯಿತು. ಹೌದು ಗೆಳೆಯರೊಳಗೆಲ್ಲ ಚಂದ್ರುವೇ ಹೀರೋ. ಸಾಕಷ್ಟು ದಷ್ಟಪುಷ್ಟವಾಗಿಯೂ ಇದ್ದ. ಚಂದ್ರು ಹ್ಯಾಗೋ ಆ ಕಲ್ಲಿಗೆ ಬಡದು ಈ ಕಲ್ಲಿಗೆ ಬಡದು ಪ್ರಾಯಕ್ಕೆ ಬರುತ್ತಲೆ ಅಪ್ಪ ಸಾಹುಕಾರ ಹತ್ತಿರ ರೊಕ್ಕ ತಂದು, ಮನೆಯ ಮುಂದೆ ಹಂದರ ಹಾಕಿ, ಕೊರವರ ಬ್ಯಾಂಡ್ ಪಾರ್ಟಿ ತರಿಸಿ, ಮದುವೆ ಮಾಡೇಬಿಟ್ಟ. ಮರುದಿನವೇ ಅವನ ಹೆಂಡತಿಯನ್ನು ಕರಕೊಂಡೂ ಬಂದರು. ಪ್ರಥಮ ರಾತ್ರಿ : ತಾನೂ ಗಂಡಾಗಿದ್ದರೂ ಗಂಡಸಾಗದೇ ಹೋದುದರ ನೆನಪಿನಿಂದ ಮನಸ್ಸು ಖಿನ್ನವಾಯಿತು.



*''ಉಧೋ ಉಧೋ ನೀನೇ ಯಲ್ಲಮ್ಮಾ*
*ಗಂಡ ಹೋಗಿ ಹೆಣ್ಣ ಮಾಡಿದಿ*
*ವಲ್ಲಿ ಹೋಗಿ ಸೀರಿ ಉಡಿಸಿದಿ.''*

ಜೋಗಿತಿಯರ ಪದದಲ್ಲಿ ರಂಗೇರಿತ್ತು. ಮಧ್ಯೆ ಮಧ್ಯೆ ಭಕ್ತರು ಕೂಗುತ್ತಿದ್ದರು. ಉಧೋ ಉಧೋ ಉಧೋಽಽಽ ಉಧೋಽಽಽ ಉಧೋ. ಎದೆಗೆ ಬಂದು ಹಾಯುತ್ತಿರುವಂತೆ ಇವಳ ಬಾಯಿಂದಲೂ ಸ್ಫೋಟವಾದಂತೆ ಬಂತು ಉಧೋಽಽ. ಒಳಗೆಲ್ಲೋ ತೇಕು, ಉಬ್ಬಸ, ''ಇದಽ ಉಧೋಽ ದಿಂದನಽ ನಾ ಹಿಂಗ ಜೋಗ್ಯಾ.... ಅಲ್ಲಲ್ಲ ಇದೆಲ್ಲಾ ದೇವೀ ಲೀಲಾ ತಾಯಿ ಮೈಮಾ''... ಎಂದು ನಾಲಿಗೆ ಕಚ್ಚಿಕೊಂಡಳು. ಆದರೂ ಆ ನೆನಪಿನಿಂದ ಮೇಲೆ ಬರಲು ಸಾಧ್ಯವಾಗುತ್ತಿಲ್ಲ. ''ಚಂದ್ರುಗೆ ಬಾಲ್ಯದಿಂದಲೂ ಎಲ್ಲಮ್ಮ ದೇವಿಯ ಆ ಅಕರಾಳ ವಿಕರಾಳ ಮೂರ್ತಿಯನ್ನು ನೋಡಲು ಹೆದರಿಕೆಯಾಗುತ್ತಿತ್ತು. ಆ ಹೆದರಿಕೆಯಿಂದಲೋ, ಅಥವಾ ಅವಳು ಸೂಳೆಯರನ್ನು ಬಿಡಿಸುತ್ತಾಳೆ ಎಂಬ ತಿರಸ್ಕಾರದಿಂದಲೋ ಅವನಿಗೆ ಯಲ್ಲಮ್ಮನನ್ನು ಕಂಡರೆ ಆಗುತ್ತಿರಲಿಲ್ಲ, ಅವನು ಅವಳಿಗೆ ನಮಸ್ಕರಿಸುತ್ತಲೂ ಇರಲಿಲ್ಲ. ಆಗ ಸಣ್ಣವರು ದೊಡ್ಡವರೆಲ್ಲ ''ಏಽ ತಾಯಿಗೆ ಸ್ವಾಮಿ ಮಾಡ, ಇಲ್ಲಾ ಅಂದ್ರ ನಿನ್ನ ಗಂಡಸ್ತನಾ ಕಸಗೋತಾಳ ಅಕಿ, ನೋಡೇದಿಲ್ಲೊ ಎಷ್ಟ ಮಂದಿ ಜೋಗ್ಯಾಗೋಳ ಅದಾರ ಅವರೆಲ್ಲ ನಿನ್ನಂಗಽ ಸೊಕ್ಕತನಾ ಮಾಡಿದವರಽ'' ಎಂದು ಹೆದರಿಸುತ್ತಿದ್ದರು.

ಒಮ್ಮೆ – ಚಂದ್ರು ''ಯವ್ವಾ ಆಕಿ ದೇವತ್ಯಾದರ ಸೂಳಿ ಯಾಕ ಬಿಡ ಅಂತಾಳು'' ಎಂದು ತನ್ನ ತಾಯಿಯನ್ನು ಕೇಳಿದ್ದ ಅವನ ತಾಯಿ ''ಅಯ್ಯೋ ಬಾಡ್ಯಾ, ದೇವಿಗಿ ಹಿಂಗ್ಯಾಕಂತೀಯೋ'' ಅಂದು ಸಿಟ್ಟಿಗೆದ್ದು ಒಂದು ಕೋಲು ತಗೊಂಡು ಸಿಕ್ಕಾಪಟ್ಟೆ ಹೊಡೆದಿದ್ದಳು. ಓಡಿ ಹೋಗಿ ದೇವಿ ಮುಂದೆ ಕುಳಿತು ಅಳುತ್ತ ''ಯವ್ವಾ, ತಪ್ಪಾತು. ಏನೋ ತೆಪ್ಪ ಮಾತಾಡೇತಿ ಹುಡಗ. ನಾ ನಿನ್ನ ಗುಡಿಗಿ ಬಂದು ಹುಟಗಿ ಉಡತನ, ತುಪ್ಪದ ದೀಪಾ ಹಚ್ಚತನ. ಆದರ ನಮ್ಮ ಚಂದ್ರ್ಯಾಗ ಏನೂ ಮಾಡಬ್ಯಾಡ'' ಎಂದು ಮನೆಯಲ್ಲಿದ್ದ ಯಲ್ಲಮ್ಮನ ಫೋಟೋದ ಎದುರು ಹೊರಳಾಡಿದಳು. ಅಂದಿನಿಂದ ಯಲ್ಲಮ್ಮ ಅಂತಂದರೆ ಚಂದ್ರುಗೆ ಇನ್ನೂ ಹೆದರಿಕೆಯಾಯಿತು. ''ಇಕಿ ಖರೇನಽ ಗಂಡಸ್ತನಾ ಕಸಗೋತಾಳೇನ ?'' ಚಂದ್ರು ಯಲ್ಲಮ್ಮ ಅಂದರೆ ನಡುಗುವುದಕ್ಕೇ ಆರಂಭಿಸುತ್ತಿದ್ದ.

ಆ ದಿನ ಚಂದ್ರುವಿನ ಹೆಂಡತಿ ಪ್ರಥಮ ಬಾರಿ ಬರುವವಳಿದ್ದಳು. ಅಂದೇ ಅವರಿಬ್ಬರನ್ನು 'ಖೋಲೀ'ಕ ಹಾಕುವವರಿದ್ದರು (ಪ್ರಥಮ ರಾತ್ರಿ). ಮಧ್ಯಾಹ್ನ ಊರಿನ ಅಗಸಿ ಬಾಗಿಲದೊಳಗೆ ಜನಗಳ ಗುಂಪು ಸೇರಿತ್ತು, ಚಂದ್ರು ಅದೇನೆಂಬ ಕುತೂಹಲದಿಂದ ನೋಡಲು ಹೋದ. ಜನರು ಭಾವಪರವಶರಾಗಿ 'ಉಧೋ ಉಧೋ' ಎನ್ನುತ್ತಿದ್ದರು. ಇವನಿಗೋ ಆ ಉಧೋ ಶಬ್ದ ಕೇಳಿದರೂ ಸಾಕು ಆ ಕಣ್ಣು ಕಿಸಿದುಕೊಂಡ ಯಲ್ಲಮ್ಮನೇ ಬಂದಂತಾಗಿ ನಡುಗು ಹುಟ್ಟುತ್ತಿತ್ತು. ಆ ಗುಂಪಿನಲ್ಲಿ ನೋಡಿದರೆ, ಚೌಡಾಪುರದ ಜೋಗಪ್ಪ ತಲೆ ಮೇಲೆ ದೇವಿಯ ಕೊಡ ಹೊತ್ತು ಕುಣಿಯುತ್ತಿದ್ದಾನೆ. ಉಳಿದ ಜೋಗಿತಿಯರು ಅವನ ಮೇಲೆ ಭಂಡಾರ ಒಗೆಯುತ್ತಿದ್ದಾರೆ. ಗಂಡು, ಹೆಣ್ಣಾದ ಅವನನ್ನೂ ಮತ್ತು ಹಾಗೆ ಮಾಡಿದ ದೇವಿಯ ಅಕರಾಳ ರೂಪವನ್ನೂ ನೋಡಿ ಅಲ್ಲಿಂದ ಹೋಗಲೂ ಆಗದೇ ನಿಲ್ಲಲೂ ಆಗದೆ ಮುದ್ದೆಯಾಗಿ ನಿಂತ ಚಂದ್ರುವನ್ನು ನೋಡಿದ ಆ ಜೋಗಪ್ಪ, ಬಂದು ಅವನ ತಲೆಯ ಮೇಲೇ ಕೈಯಿಟ್ಟು ''ನಿನ್ನ ಕರಕೊಂಡ ಹೋಗ್ತಾಳ ತಾಯಿ'' ಅಂದು ಮತ್ತೆ ಕುಣಿಯತೊಡಗಿದ. ಇವನಿಗೆ ಜಂಘಾಬಲವೇ ಉಡುಗಿ ಹೋದಂತಾಯಿತು. ಇನ್ನು ಅಲ್ಲಿ ನಿಲ್ಲಲು ಸಾಧ್ಯವಾಗದೇ ನಡುಗುತ್ತ ಓಡಿದಂತೆಯೇ ನಡೆಯತೊಡಗಿದ. ಗುಂಪಿನಲ್ಲಿದ್ದ ಯಾರೋ ಒಬ್ಬ ''ಹುಶ್ಯಾರೋ ಚಂದ್ರ್ಯಾ ಇಂದಽ ಹೇಂತಿ ಬರ್ತಾಳ'' ಎಂದು ಹಾಸ್ಯ ಮಾಡಿದ. ಚಂದ್ರುಗೆ ಓಡದೆಯೇ ತೇಕು ಬಂತು. ಏದುಸಿರು ಬಿಡುತ್ತ ಮನೆ ಸೇರಿದ. ಮನೆಯಲ್ಲಿ ಹೊಸ ಸೊಸೆಯನ್ನು ಬರಮಾಡಿಕೊಳ್ಳುವ ಸಿದ್ಧತೆ ನಡೆದಿತ್ತು. ಆ ಉಧೋ ಉಧೋ ಎಂಬುದು ಇವನ ಎದೆಯೊಳಗೆ ಬಾವಿ ತೋಡುತ್ತಿತ್ತು.

* * *

ರಾತ್ರಿ ಒಂದು ಗಂಟೆಯಾದರೂ ಅವನಿಗೆ ನಿದ್ರೆ ಬರಲಿಲ್ಲ. ಅವಳು ಕಾದು ಕಾದು ಮಲಗಿ ನಿದ್ರಿಸ ತೊಡಗಿದಳು. ''ಪಾಪ ಎಷ್ಟಂತ ಕಾಯ್ತಾಳು. ನನಗ್ಯಾಕ ಹಿಂಗಾತು ? ಎಷ್ಟ ಪ್ರಯತ್ನಾ ಮಾಡಿದರೂ... ಏನೂ ಆಗಽಲಿಲ್ಲ ಎಲ್ಲ ಈ ಎಲ್ಲಮ್ಮನಽ... ಉಧೋ ಉಧೋ'' ...ದೊಡ್ಡದೊಂದು ಸುತ್ತಿಗೆ ತೆಗೆದುಕೊಂಡು ಅವನ ಮರ್ಮದ ಮೇಲೆ ಹೊಡೆದಂತಾಯಿತು. ''ನಾಳಿ ಇಕಿ ನನಗ ಗಂಡಸತನ ಇಲ್ಲಂತ ಮಂದೀ ಮುಂದ ಹೇಳಿಬಿಟ್ರ ?'' ಬೆವರು ಬಂದು ತಪ ತಪ ತೊಯ್ದುಹೋದ. ಎದ್ದು ನಿಂತ. ಅಲ್ಲೇ ಎಲ್ಲಮ್ಮನ ಫೋಟೋಯಿತ್ತು 'ಗಂಡ ಹೋಗಿ ಹೆಣ್ಣ ಮಾಡ್ತಾಳ' ಎನ್ನುವ ಮಾತು ಗಟ್ಟಿಯಾಗುತ್ತಾ ಹೋದಂತೆನಿಸತೊಡಗಿತು. ಅಲ್ಲೇ ಕುಸಿದು ಕುಳಿತ. ಯಾವಾಗ ನಿದ್ರೆ ಬಂತೋ, ಕನಸಿನಲ್ಲಿ ತಾಯಿ ಯಲ್ಲಮ್ಮ ಬಂದೇಬಿಟ್ಟಳು. ''ಮಗನ, ನೀ ನನಗ ಬೇಕು'' ಅಂದಳು. ಅಂದಿನಿಂದ ದಿನವೂ ಕನಸಿನಲ್ಲಿ, ಬರುಬರುತ್ತ ಮನಸಿನಲ್ಲಿ ತುಂಬಿಕೊಳ್ಳತೊಡಗಿದಳು. ಆ ರಾತ್ರಿ ಇದ್ದ ಹೆದರಿಕೆ ಕ್ರಮೇಣ ಕಡಿಮೆಯಾಯಿತು. ಹೆಂಡತಿ ತನ್ನ ಕೊರತೆಯ ಕುರಿತು ಜನಕ್ಕೆ ಹೇಳಿದರೂ ಹೇಳಲಿ ಎಂಬ ಮನೋಸ್ಥಿತಿ ನಿರ್ಮಾಣವಾಯಿತು. ಹೀಗೆಯೇ ಮೂರು ತಿಂಗಳು ಕಳೆದರೂ ಅವಳು ಮಾತ್ರ ಯಾರಿಗೂ ಹೇಳಲಿಲ್ಲ. ಹೀಗಾಗಿ ಚಂದ್ರುವಿನ ಮಾನಸಿಕ ಲೋಕದಲ್ಲಾಗುತ್ತಿರುವ ಬದಲಾವಣೆಯ ಬಗ್ಗೆ ಯಾರಿಗೂ ತಿಳಿಯಲಿಲ್ಲ.

ಒಂದು ರಾತ್ರಿ ಅವನ ಹೆಂಡತಿಗೆ ಹೇಳಿದ. ''ನೋಡು ನಿನ್ನ ದುಃಖ ನನಗೂ ತಿಳೀತೈತಿ. ಆದರ ನನ್ನಂತೂ ಯಲ್ಲವ್ವ ತಾಯಿ ಹಿಂಗ ಮಾಡ್ಯಾಳ. ನೀ ಯಾರ ಜೋಡಿಯಾದರೂ ಏನಾದರೂ ಮಾಡ. ನಂದೇನ ತಕರಾರಿಲ್ಲ'' ಅವಳು ಮೂರು ತಿಂಗಳು ಸಹಿಸಿ ತಡೆದಿಟ್ಟುಕೊಂಡದ್ದನ್ನೆಲ್ಲ ಅಳುವಿನ ರೂಪದಲ್ಲಿ ಹೊರಗೆಡಹಿದಳು. ಬಹಳಷ್ಟು ಅತ್ತಳು. ಅವನು ಈ ಲೌಕಿಕ ಸಂಬಂಧಗಳು, ಅಳು, ನೋವು-ನಲಿವು ಗಳನ್ನೂ ಮೀರಿದ ಯಾವುದೋ ಸಮ್ಮೋಹಕ ಸ್ಥಿತಿಗೆ ತಲುಪಿದ್ದ. ನಿಧಾನವಾಗಿ ಎದ್ದು ಹೋಗಿ ಭಂಡಾರ ತಂದು ''ಅಳಬ್ಯಾಡ, ಈ ಭಂಡಾರ ಹಿಡಿ ಮಗಳ'' ಅಂದುಬಿಟ್ಟ. ಅವಳ ಅಳು ಇನ್ನೂ ಜೋರಾಯಿತು. ಅವಳ ನಿರ್ಲಿಪ್ತತೆ ಯನ್ನು ಅವಳ ಅಳು ಕಲಕಲೂ ಇಲ್ಲ; ಅವನ ಮೇಲೆ ಯಾವ ಪರಿಣಾಮವೂ ಆಗಲಿಲ್ಲ. ಅವಳು ಮರುದಿನ ಯಾವದೋ ನೆಪ ಹೇಳಿ ತವರಿಗೆ ಹೊರಟುಹೋದಳು.

ಇವನು ಮೊದಲಿನಂತೆ ಯಲ್ಲಮ್ಮನನ್ನು ನೋಡಲು ಹೆದರುತ್ತಿರಲಿಲ್ಲ. ಬದಲಾಗಿ ಹಗಲೂ ರಾತ್ರಿ ಅದನ್ನೇ ನೋಡುತ್ತ ಕುಳಿತುಕೊಳ್ಳುತ್ತಿದ್ದ. ಮನೆಯಲ್ಲಿದ್ದ ಪಡ್ಡಲಗಿ ಯನ್ನು ಜೋಗಿತಿಯರಂತೆ ಬಗಲಲ್ಲಿ ಹಿಡಿಯುತ್ತಿದ್ದ. ಜೋಗಿತಿಯರಂತೆ 'ಯಕ್ಕಯ್ಯಾ ಜೋಗಯ್ಯಾ' ಎಂದು ಗುಣುಗುಣಿಸಿಕೊಳ್ಳುತ್ತಿದ್ದ. ಮಾತು, ನಡೆ, ನುಡಿಗಳಲ್ಲಿ ಸಣ್ಣ ಸಣ್ಣ ಬದಲಾವಣೆಗಳಾಗುತ್ತಿದ್ದರೂ ಯಾರೂ ಅಷ್ಟಾಗಿ ಗಮನಿಸಲಿಲ್ಲ. ಒಮ್ಮೊಮ್ಮೆ ರಾತ್ರಿಯಿಡೀ ದೇವಿಯ ನೆನಪಿನಲ್ಲೇ ಕೂತಿರುತ್ತಿದ್ದ. ಒಂದು ರಾತ್ರಿ ಹೀಗೇ ಕುಳಿತಿರುವಾಗ ದೇವಿ ಬಂದಳು (ಅಥವಾ ಅವನಿಗೇ ಹಾಗೆನಿಸಿತು.). ''ಏಳ ಮಗನಽ'' ಎಂದಳು. ಎದ್ದ. ''ತಗೊ ಪಡ್ಡಲಗಿ'' ಎಂದಳು. ತೆಗೆದುಕೊಂಡ. ''ನಡಿ ಗುಡ್ಡಕ'' ಎಂದಳು. ನಡೆದೇಬಿಟ್ಟ.

*''ತಿರಗಽತಾಳ ಗುಡ್ಡಽದ ವಾರಿ ವಾರಿ ವಾರಿ*
*ಯಲ್ಲವ್ವ ತಿರಗಽತಾಳ ಗುಡ್ಡಽದ ವಾರಿ ವಾರಿ ವಾರಿ''*

* * *

ಆರು ತಿಂಗಳ ನಂತರ ಚಂದ್ರು ಚಂದ್ರಿಯಾಗಿ ಜೋಗಾಡುತ್ತ ತನ್ನೂರಿಗೇ ಬಂದಳು. ಚಂದ್ರು ಹೋದ ನಂತರ ಹುಡುಕಿ ಹುಡುಕಿ ''ಮಗಾ ಎಲ್ಯೋ ಸತ್ತಽ ಹ್ವಾದ'' ಎಂದು ಮರೆತುಬಿಟ್ಟಿದ್ದ ತಂದೆ-ತಾಯಿ ಚಂದ್ರುವಿನ ಚಂದ್ರಿಯ ರೂಪ ನೋಡಿ ಗೋಳೋ ಎಂದು ಅತ್ತರು. ''ನೀ ಇದನೇನ ಮಾಡಿದೇಯವ್ವಾ ಮಾಯಕಾರ್ತೀ'' ಎಂದು ತಾಯಿ ಮತ್ತಷ್ಟು ಗೋಳಾಡತೊಡಗಿದಳು. ಜನರು ''ಮಾಯಕಾರ್ತಿ ಆಟ ಯಾರಿಗೂ ತಿಳದಿಲ್ಲ ಬಿಡಽಯವ್ವಾ'' ಎಂದು ಸಮಾಧಾನಪಡಿಸಿದರು.

ಅಲ್ಲಿ ನೆರೆದವರೆಲ್ಲ ಚಂದ್ರಿಯ ಕಾಲಿಗೆ ನೀರು ಹಾಕುವುದು, ದೀರ್ಘದಂಡ ಪ್ರಣಾಮ ಮಾಡುವುದು ಮಾಡತೊಡಗಿದರು. ಆದರೆ ಯಾರೂ ನಿನಗೇನಾತು ? ಹೆಂಗಾತು ? ಹೆಂಗ ಹ್ವಾದಿ ? ಎಂದು ಕೇಳುವ ಧೈರ್ಯ ಮಾಡಲಿಲ್ಲ ಎಲ್ಲರ ಬಾಯಲ್ಲಿಯೂ ''ಎಲ್ಲಾ ಮಾಯಕಾರ್ತಿ ಆಟ !!'' ಎಂಬ ಉದ್ಗಾರವೇ.

* * *

ಚಂದ್ರಿ ಜೋಗಾಡುವಾಗ ಜೊತೆಗೆ ಮೂರು ಜನ ದೇವದಾಸಿ (ಜೋಗಿತಿ)ಯರೂ ಇರುತ್ತಿದ್ದರು. ಅವರು ಭಾರತ ಹುಣ್ಣಿಮೆಯಲ್ಲಷ್ಟೇ ಜೋಗಾಡುತ್ತಿದ್ದರು. ಉಳಿದ ಸಮಯದಲ್ಲಿ ಮುಂಬೈಗೆ ಹೋಗಿ ದಂಧೆ ಮಾಡಿ ಸಾಕಷ್ಟು ಗಳಿಸುತ್ತಿದ್ದರು. ಅವರ ಜೊತೆಗೆ ಚಂದ್ರಿಯೂ ಹೋದಳು. ಅಲ್ಲಿ ಬರುವ ಗಿರಾಕಿಗಳು ತನ್ನನ್ನೂ ನೋಡಲಿ ಎಂದು ಕಾಳಜಿಯಿಂದ ಅಲಂಕಾರ ಮಾಡಿಕೊಳ್ಳುತ್ತಿದ್ದಳು. ಗೆಳತಿ ಯರೆಲ್ಲ '' ನೀ ಭಾಳ ಚೆಂದ ಅದಿ'' ಎನ್ನುತ್ತಿದ್ದರು. ರಾತ್ರಿ ಬಂದ ಗಿರಾಕಿಗಳನ್ನು ಇವಳೂ ಬಿಡುತ್ತಿರಲಿಲ್ಲ. ಒಮ್ಮೊಮ್ಮೆ ಹೇಸಿಗೆಯೆನಿಸುತ್ತಿತ್ತು.

*''ಹಾವಿನ ಸಿಂಬಿ ಹರದಽ ಹೋತು*
*ಉಸುಕಿನ ಕೊಡ ಒಡದಽ ಹೋತು.''*

ಈ ಹಾಡು ಹಾಡುವಾಗೆಲ್ಲ ಅಪರಾಧಿ ಭಾವ ತುಂಬಿಕೊಳ್ಳುತ್ತಿತ್ತು. ಚಂದ್ರಿಗೆ ''ತನ್ನ ಪತಿವರ್ತಿ ಸತುದಿಂದನಽ ಹಾವಿನ ಸಿಂಬಿ ಮಾಡಿ ಉಸುಕಿನ ಕೊಡಾ ಮಾಡಿ ನೀರ ತರ್ತಿದ್ಳು ಯಲ್ಲವ್ವಾ. ಅಂಥಾಕಿ ಮನಸ ಒಂದೀಟಽ ಕೆಟ್ಟದ್ದಕ್ಕ ಜಮದಗ್ನಿ ಅಕಿ ರುಂಡಾ ತೆಗಿಸಿದಾ, ಅಕಿಗೆ ಕುಷ್ಠರೋಗ ಹತ್ತು : ಅಂಥಾ ಪತಿವರ್ತಿ ಇಂಥಾ ಹೊಲಸ ಕೆಲಸಾ ಮಾಡಾಕ-ಹಚ್ಚಾಳ ?'' ಎಂದೂ ಒಮ್ಮೊಮ್ಮೆ ಅನಿಸುತ್ತಿತ್ತು. ಅಲ್ಲಿರುವ ಎಲ್ಲರಿಗೂ ಅನಿಸುತ್ತಿತ್ತೋ ಏನೋ ಆದರೆ, ಯಾರೂ ಹಾಗೆ ಯೋಚಿಸುವ ಧೈರ್ಯ ಮಾಡಿರಲಿಲ್ಲ. ಯೋಚನೆ ಬಂದರೂ ''ದೇವೀ ಲೀಲಾ'' ಅಂದು ಗಲ್ಲಾ ಗಲ್ಲಾ

ಜಡಕೊಳ್ಳುತ್ತಿದ್ದರು.

ಒಮ್ಮೆ ಇದ್ದಕ್ಕಿದ್ದಂತೆ ಪೊಲೀಸರು ಸೂಳೆಗೇರಿಯ ಮೇಲೆ ದಾಳಿ ಮಾಡಿದರು. ಕೆಲವರು ಸೀದಾ ಬಂದು ಹೆಂಗಸರ ಮಲೆಕಟ್ಟಿಗೇ ಕೈ ಹಾಕಿ ಪರ್ಸ್ ಕಿತ್ತುಕೊಂಡರು. ಕೆಲವರು ಹಸಿದ ದನದ ಹಾಗೆ ಬಂದು ''ಏ ನಡಿ ವಳಗ'' ಎಂದು ಒಳಗೆಳೆದುಕೊಂಡು ಹೋಗಿ ಬೆಲ್ಟು ಹಾಕಿಕೊಳ್ಳುತ್ತಾ ಹೊರಬಂದರು. ಚಂದ್ರಿಯನ್ನು ''ನಡಿಯಾ ಭೋಸುಡಿ'' ಎಂದು ಹೊರ ದಬ್ಬಿದರು. ಅವಳಿಗೂ ಅಲ್ಲಿಯ ಬದುಕು ಸಾಕಾಗಿಹೋಗಿತ್ತು.

* * *

ಚಂದ್ರಿಯು ಗುಡ್ಡಕ್ಕೆ ಸಮೀಪವಾದ ಸುರಪುರಕ್ಕೆ ಬಂದಳು. ಭಕ್ತರು ಅಲ್ಲಿ ಒಂದು ಗುಡಿಸಲನ್ನು ಕಟ್ಟಿಕೊಟ್ಟರು. ಚಂದ್ರಿಯು ಬರುಬರುತ್ತ ಈಗ 'ಚಂದ್ರವ್ವ' ಆದಳು. ದಿನವೂ ಸ್ನಾನ ಮಾಡಿ ಜೋಗಾಡಿಕೊಂಡು ತಂದದ್ದನ್ನೇ ತಿಂದು ದೇವಿಯ ಸನ್ನಿಧಿಯಲ್ಲಿ ಮಲಗುವುದೇ ಅವಳ ಕೆಲಸವಾಯಿತು. ಸೂಳೆಗೇರಿಯಲ್ಲಿರುವಾಗ ವಿಸ್ಕಿ, ಬ್ರ್ಯಾಂಡಿ, ಸೀರುವ ಚಟ ಬೆಳೆಸಿಕೊಂಡಿದ್ದಳು. ಸಿಗರೇಟೂ ಸೇದುತ್ತಿದ್ದಳು. ಈಗ ಸಂಪಾದನೆಯ ಕಡಿತದಿಂದ ಅವೆಲ್ಲಕ್ಕೂ ಕತ್ತರಿ ಬಿದ್ದಂತಾಯಿತು.

ಮುಂದೆ ಮೈಯಲ್ಲಿ ದೇವಿ ಬರತೊಡಗಿದಳು. ಬಿಕ್ಕಿ ಜಿಕ್ಕಿ ಜಡೆಯನ್ನು ನೆಲಕ್ಕೆ ಅಪ್ಪಳಿಸಿ ನುಡಿ ಹೇಳಲು ಶುರು ಮಾಡಿದಳು. ಭಕ್ತಾದಿಗಳು ಆಕರ್ಷಿತರಾದರು. ಅವಳ ಮೇಲೆ ಜನರಿಗೆ ಭಯ, ಭಕ್ತಿ ಮೂಡತೊಡಗಿತು. ಚಂದ್ರವ್ವನ ನುಡಿ ಸುಳ್ಳಾಗುವುದೇಯಿಲ್ಲವೆಂಬ ಪ್ರತೀತಿ ಬೆಳೆಯಿತು. ಭಕ್ತರು ಬಂಡಿ, ಸ್ಕೂಟರು, ಕಾರುಗಳಲ್ಲೂ ಬರತೊಡಗಿದರು.

* * *

ಈ ಜ್ವರ ಹದಿನೈದು ದಿನಗಳಿಂದ ಕಾಡುತ್ತಿದೆ. ಕಡಿಮೆಯೇ ಆಗುತ್ತಿಲ್ಲ. ಮೊದಲು ಯಾವ ಕಾಯಿಲೆ ಬಂದರೂ ಚಂದ್ರವ್ವ ಭಂಡಾರವನ್ನೇ ನೀರಿಗೆ ಹಾಕಿಕೊಂಡು ಕುಡಿಯುತ್ತಿದ್ದಳು, ಔಷಧ ರೂಪದಲ್ಲಿ. ಈಗ ಅದರಿಂದ ಯಾವ ಪ್ರಯೋಜನವೂ ಆಗಲಿಲ್ಲ. ಒಬ್ಬ ಭಕ್ತರು ವೈದ್ಯರ ಹತ್ತಿರ ಕರೆದೊಯ್ದರು. ಅವರು ನೀಡಿದ ಔಷಧವೂ ಯಾವ ಪರಿಣಾಮವನ್ನೂ ಮಾಡಲಿಲ್ಲ. ಜ್ವರ ಹೆಚ್ಚುತ್ತಲೇ ಹೋಯಿತು. ಚಂದ್ರವ್ವ ಕೃಶಳಾಗುತ್ತಾ ಹೋದಳು. ಒಮ್ಮೆ ಬೆಂಗಳೂರು, ದಿಲ್ಲಿಗಳಿಂದ ಬಂದ ವೈದ್ಯರುಗಳ ತಂಡವೊಂದು, ಅದೇ ಊರಿನಲ್ಲಿ ಕ್ಯಾಂಪ ಹಾಕಿತು. ಕೆಲವು ಭಕ್ತರು ಚಂದ್ರವ್ವನನ್ನು ಅಲ್ಲಿಗೆ ಕರೆದೊಯ್ದು ತೋರಿಸಿದರು. ರಕ್ತ ತಪಾಸಣೆ ಮಾಡಿದ ವೈದ್ಯರು ''ಇವರಿಗೆ ಏಯ್ಡ್ಸ್ ರೋಗವಿದೆ'' ಎಂದರು. ಮೊದಲೇ ಕಡಿಮೆಯಾಗಿದ್ದ ಭಕ್ತರ ಸಂಖ್ಯೆ ಗಕ್ಕನೇ ನಿಂತೇ ಹೋಯಿತು. ನಂತರ ಚಂದ್ರವ್ವನ ಮೈಮೇಲೆ ದೇವಿಯೂ ಬರಲಿಲ್ಲ. ಚಂದ್ರವ್ವ ಸೊರಗುತ್ತ ಅಸ್ಥಿಪಂಜರವಾಗುತ್ತಿದ್ದಂತೆ, ಅವಳ ಮುಖದ ಮೇಲೆ ಗಡ್ಡ ಮೀಸೆಗಳು ಷೇವಿಂಗ್ ಇಲ್ಲದೆ ವಿಪುಲವಾಗಿ ಬೆಳೆದು ಮುಖವನ್ನು ವಿಕೃತವಾಗಿಸಿದವು.

* * *

ಒಂದು ದಿನ ಬೆಳಿಗ್ಗೆ ಚಂದ್ರವ್ವನ ಗುಡಿಸಲೊಳಗೆ ನಾಯಿಗಳು ಕಡಿದಾಡುವ ಸದ್ದು ಕೇಳಿ ಸಂಶಯ ಬಂದು ಕೆಲವರು ಒಳಗೆ ಹೋಗಿ ನೋಡಿದರೆ, ಚಂದ್ರವ್ವ ಮಲಗಿದ್ದವಳು ಮಲಗಿದಂತೆಯೇ ಹೊರಟುಹೋಗಿದ್ದಳು. ಊರಿನ ಕೆಲವರು ಭಕ್ತರು ಮತ್ತು ಕೆಲವು ಹಳೆಯ ಜೋಗಿತಿಯರು ಸೇರಿ ಚಂದ್ರವ್ವನ ಅಂತ್ಯಸಂಸ್ಕಾರದ ಏರ್ಪಾಟು ಮಾಡಿದರು. ಅಳುವವರಿಲ್ಲ ಕರೆಯುವವರಿಲ್ಲ, ಅವಳ ಊರು, ಬಂಧು, ಬಳಗದ ಕುರಿತು ಯಾರಿಗೂ ಗೊತ್ತಿರಲಿಲ್ಲ. ಹಾಗೇ ಹೊರಟಿತು ಶವಯಾತ್ರೆ, ಕೊನೆತನಕವೂ ಲೌಕಿಕ ಅಲೌಕಿಕಗಳ ತೊಡಕಿನಲ್ಲಿ ಒದ್ದಾಡಿದ ದೇಹ ಸಿದಿಗೆಯ ಮೇಲೆ ಸುಮ್ಮನೆ ಮಲಗಿತ್ತು, ಹೆಣದ ಮುಂದೆ ಜೋಗಿತಿಯರು ಚವಡಕಿ ಸುತಿಯೊಂದಿಗೆ ಹಾಡುತ್ತಿದ್ದರು.

*''ಮಾಯಕಾರ್ತಿ ನೀನೇ ಯಲ್ಲಮ್ಮಾ*
*ನಿನ ದಯವಿರಲೆಮ್ಮಾ*
*ಮಾಯಕಾರ್ತಿ ನೀನೇ ಯಲ್ಲಮ್ಮಾ''*

**ಮಾರುತಿ ದಾಸಣ್ಣವರ**
ಕನ್ನಡ ಅಧ್ಯಾಪಕರು, ಜವಾಹರ ನವೋದಯ ವಿದ್ಯಾಲಯ, ಗಾಳಿಬೀಡು
ಮಡಿಕೇರಿ ತಾಲೂಕು, ಕೊಡಗು ಜಿಲ್ಲೆ – ೫೭೧ ೨೦೧

### ಪ್ರಶಸ್ತಿಗೆ ಕೃತಿಗಳ ಆಹ್ವಾನ

ಶಿವಮೊಗ್ಗದ ಕರ್ನಾಟಕ ಸಂಘವು ೨೦೦೩ನೇ ಸಾಲಿನ ವಿವಿಧ ಪ್ರಕಾರದ ಪುಸ್ತಕ ಪ್ರಶಸ್ತಿಗಳಿಗಾಗಿ ಕೃತಿಗಳನ್ನು ಕಳಿಸಿಕೊಡಲು ಆಹ್ವಾನಿಸಿದೆ. ವಿವರಗಳಿಗೆ ಈ ಕೆಳಕಂಡ ವಿಳಾಸಕ್ಕೆ ಬರೆಯಿರಿ.

**ಶ್ರೀ ಜಯದೇವಪ್ಪ ಜೈನಕೇರಿ,**
**ಗೌರವ ಕಾರ್ಯದರ್ಶಿ, ಕರ್ನಾಟಕ ಸಂಘ,**
**ಶಿವಮೊಗ್ಗ**

# ಏಕಲವ್ಯ ಹಾಗೂ ಹದ್ದು

ವಿಶ್ವನಾಥ ಎಲ್. ವೇಮಗಲ್

**ದ್ರೋ**ಣ, ಯುದಿಷ್ಠಿರ, ಭೀಮ, ನಕುಲ, ಸಹದೇವರೆಲ್ಲರೂ ಸೊರಗಿಹೋಗಿದ್ದರು. ಯಾವುದೋ ಪಾಪ ಪ್ರಜ್ಞೆ ಅವರ ಹೆಗಲೇರಿ ಕೂತಂತಿತ್ತು. ಆದರೆ ಅದನ್ನು ಪ್ರಯತ್ನಪೂರ್ವಕವಾಗಿ ಮುಚ್ಚಿಡಲು ಯತ್ನಿಸುತ್ತಿದ್ದರು. ದ್ರೋಣರಂತೂ ನಾಲಿಗೆ ಕಳೆದುಕೊಂಡವರಂತೆ ತೆಪ್ಪಗೆ ಒಂದೆಡೆ ಕುಳಿತು ತಮ್ಮ ಕೆಲಸದ ಬಗ್ಗೆ ತಾವೇ ಅಸಹ್ಯಪಡುತ್ತಾ ಕೊರಗಿ, ತರಗೆಲೆಗಳ ಮೇಲೆ ಕೂತಿದ್ದರು. ಅನತಿದೂರದಲ್ಲಿ ಪಾರ್ಥನು ಕಲ್ಲಿನ ಮೇಲೆ ಕುಳಿತಿದ್ದ. ಮುಖವು ಕಿರುನಗೆ ಸೂಸುತ್ತಿತ್ತು. ಚಿಂತೆಯ ಹಂಗಿರದೆ ತೀರಾ ನಿರ್ಲಿಪ್ತನಾಗಿದ್ದ. ಆದರೆ ಅವನು ಕೂತಿದ್ದ ಕಲ್ಲು ನೋವಿನಿಂದ ಕರಗುತ್ತಿತ್ತು.

ದ್ರೋಣರು ಎದ್ದುನಿಂತರು. ಅವರ ಶಿಷ್ಯರು ಎದ್ದರು. ದ್ರೋಣರು ಮೌನವಾಗಿ ಆಶ್ರಮದ ಹಾದಿಯತ್ತ ಹೆಜ್ಜೆ ಹಾಕುತ್ತಿದ್ದರು. ಶಿಷ್ಯರ ಗುಂಪು ಹಿಂಬಾಲಿಸಿತು. ಅವರ ನಡಿಗೆಗೆ ತರಗೆಲೆಗಳು ತಾಳ ಹಾಕುತ್ತಿದ್ದವು. ಉಳಿದಂತೆ ಕಾಡೆಲ್ಲ ಎಂದಿನಂತೆ ಮೌನವಾಗಿತ್ತು. ಆ ಮೌನದಲ್ಲಿ ನೋವೆಲ್ಲ ಬತ್ತಲಾಗಿತ್ತು. ಗುರುಶಿಷ್ಯರ ಗುಂಪು ಕಾಡಿನಲ್ಲಿ ಕಣ್ಮರೆಯಾಯಿತು. ಏಕಲವ್ಯ ಮತ್ತು ವಯಸ್ಸಾದ ತಂದೆ ತಾಯಿ ಅವರು ಹೊರಟ ಹಾದಿಯನ್ನು ತದೇಕಚಿತ್ತದಿಂದ ಕಣ್ಣರಳಿಸಿ ನೋಡುತ್ತಿದ್ದರು.

ಕಾಡೆಲ್ಲ ಶೋಕಾಚರಣೆಯಲ್ಲಿ ತೊಡಗಿದಂತೆ ಭಾಸವಾಗುತ್ತಿತ್ತು. ಮುದುಕ, ಮುದುಕಿಯರು ಹರಕಲು ಗುಡಿಸಿಲಿನ ಜಗುಲಿಯ ಮೇಲೆ ಕುಳಿತು ಅಳುತ್ತಿದ್ದರು. ಕಣ್ಣೀರಿಂದ ಅವರ ದುಃಖ ಕಡಿಮೆಯಾದಂತೆ ತೋರುತ್ತಿರಲಿಲ್ಲ. ಅವರ ಕಣ್ಣೀರಿಂದ ಮುಖವೆಲ್ಲ ತೊಯ್ದು, ಮೂಕರಾಗಿದ್ದರು. ಅವರ ನೋವಿನಲ್ಲಿ ಬೇವು, ಮಾವು, ಹಲಸು, ಸರ್ಪಗಂಧಿ, ಹುಂಗೆ, ಗಂಧ, ಶತಾವರಿ, ಒಂದೆಲಗ, ಮಲ್ಲಿಗೆ, ಸಂಪಿಗೆ, ಗಿಳಿ, ಕೋಗಿಲೆ, ಕಾಜಾಣ, ಎಲ್ಲಾ ಮರ, ಗಿಡ, ಬಳ್ಳಿ, ಹೂ, ಪ್ರಾಣಿ-ಪಕ್ಷಿಗಳು ಪಾಲ್ಗೊಂಡಂತೆ ಕಾಣುತ್ತಿತ್ತು.

ಏಕಲವ್ಯ ತನ್ನ ವಯಸ್ಸಾದ ತಂದೆ, ತಾಯಿಯರನ್ನು ಸುಮ್ಮನಿರುವಂತೆ ಹೇಳಿದ. ಅವರು ಮಗನ ಮಾತನ್ನು ಆಲಿಸುವ ಸ್ಥಿತಿಯಲ್ಲಂತೂ ಇರಲಿಲ್ಲ. ಅವರ ಅಳು ನಿಲ್ಲದಾಗಿತ್ತು. ಏಕಲವ್ಯ ತಾನು ಅವರ ಕಣ್ಣಮುಂದಿದ್ದರೆ ನೋವು ಇಮ್ಮಡಿಗೊಳ್ಳುವುದೆಂದು ಭಾವಿಸಿ ದೂರದ ಮಣ್ಣಿನ ದಿಬ್ಬದ ಮೇಲೆ ಹೋಗಿ ಕೂತ.

ಗುರುದಕ್ಷಿಣೆಯ ಹೆಸರಿನಲ್ಲಿ, ಸ್ವಲ್ಪ ಹೊತ್ತಿನ ಹಿಂದೆ ಕಳೆದುಕೊಂಡ ತನ್ನ ಬಲಗೈ ಹೆಬ್ಬೆರಳ ಬಗ್ಗೆ ಯಾವುದೇ ಕಾಳಜಿಯಿರಲಿಲ್ಲ. ಆದರೆ ಪಾರ್ಥನ ಸಣ್ಣತನಕ್ಕೆ ದ್ರೋಣರು ಪ್ರಾಶಸ್ತ್ಯ ನೀಡಿದ ಬಗ್ಗೆ, ಹಾಗೂ ಅವರ ಅಸಹ್ಯ ಮನಸ್ಥಿತಿಯನ್ನು ಅರ್ಥಮಾಡಿಕೊಳ್ಳಲು ಯತ್ನಿಸಿದ.

ಏಕಲವ್ಯ ಶೂನ್ಯದತ್ತ ಕಣ್ಣುಬಿಟ್ಟು ಕುಳಿತಿದ್ದ. ಅವನ ಕಣ್ಣುಗಳು ಏನನ್ನೋ ಹುಡುಕುತ್ತಿತ್ತು. ಅವನ ಬಲಗೈ ಹೆಬ್ಬೆರಳು ತುಂಡರಿಸಿದ ಜಾಗದಿಂದ, ಅವನಿಗರಿವಾಗದಂತೆ ರಕ್ತ ಹನಿ ಹನಿಯಾಗಿ ತೊಟ್ಟಿಕ್ಕುತ್ತಿತ್ತು. ರಕ್ತದ ಪ್ರತಿ ಅಣುವಿನಲ್ಲೂ ಚೇತನವು ತುಳುಕುತ್ತಿತ್ತು. ಸೋರುತ್ತಿದ್ದ ಪ್ರತಿ ರಕ್ತದ ಬಿಂದುವನ್ನು ಅಲ್ಲೇ ಮೊಳೆತಿದ್ದ ಆಲದ ಗಿಡದ ಬೇರುಗಳು ತನ್ನೊಡಲಿಗೆ ಹಾಕಿಕೊಳ್ಳುತ್ತಿತ್ತು. ಪ್ರತಿ ಬಿಂದುವಿನಿಂದಲೂ ಆಲದ ಗಿಡದ ತಾಕತ್ತು ಹೆಚ್ಚುತ್ತಿತ್ತು. ಎಷ್ಟಾದರೂ ಕಾಡಿನವನ ರಕ್ತವಲ್ಲವೇ...

ಏಕಲವ್ಯ ತನ್ನೆಲ್ಲ ಯೋಚನೆಗಳನ್ನು ಕೊಡವಿಕೊಂಡು, ವಾಸ್ತವಕ್ಕೆ ಬಂದ. ಆ ಜಾಗದಿಂದ ಎದ್ದು ತಂದೆ, ತಾಯಿಯ ನೆನಪಾಗಿ ಅವರನ್ನು ಸಮಾಧಾನಪಡಿಸಲು ಹೊರಟ. ಭೂಮಿಯು ತಿರುಗಿದಂತೆಲ್ಲಾ, ದಿನಗಳು ಕಳೆದು ಹೋಗುತ್ತಿತ್ತು. ಸಣ್ಣ ಆಲದ ಮರ, ಏಕಲವ್ಯನ ರಕ್ತದಿಂದ ಕಳೆಕಟ್ಟಿದ ಆಲದ ಮರ ಬಲಿಯುತ್ತಿತ್ತು. ಬೆಳೆದಂತೆಲ್ಲ ಹೂ, ಕಾಯಿ, ಹಣ್ಣುಗಳು ಬಿಡಲಾರಂಭಿಸಿತು. ಹತ್ತಾರು ಬಿಳಿಲುಗಳು, ಮರದ ಭಾರವನ್ನು ಹೊತ್ತು ಬುಡಕ್ಕೆ ಸಹಕರಿಸಿದವು. ಪ್ರತಿಯೊಂದು ಕೊಂಬೆಯಲ್ಲೂ ಗಿಳಿ, ಕೋಗಿಲೆ, ಕಾಜಾಣ, ಹದ್ದು, ಮರಕುಟುಕ, ಕಾಗೆ, ಗುಬ್ಬಚ್ಚಿ, ಇನ್ನಿತರ ಅಸಂಖ್ಯ ಪಕ್ಷಿಗಳು ವಿಶ್ರಾಂತಿ ಪಡೆಯುತ್ತಿದ್ದವು.



ಹಾಗೆಯೇ ಅಲ್ಲಿನ ಹಣ್ಣುಗಳನ್ನು ಮನಸಾರೆ ಮೆಲ್ಲುತ್ತಿದ್ದವು. ಅಳಿಲುಗಳಿಗೆ, ಓತಿಕ್ಯಾತಗಳಿಗೆ, ಹಾವುಗಳಿಗೆ ಮರದಲ್ಲಿ ಕೊರತೆಯಿರಲಿಲ್ಲ. ಈ ಮರದಲ್ಲಿ ಬಂದು ನೆಲೆಸುವ ಪ್ರಾಣಿ, ಪಕ್ಷಿಗಳಿಗೆ ಮರದ ಎಲೆ, ಹೂವು, ಕಾಯಿ, ಹಣ್ಣು, ರೆಂಬೆ, ಬಿಳಿಲು, ಬುಡ, ಪ್ರತಿಯೊಂದೂ ಏಕಲವ್ಯನ ದುರಂತ ಕತೆಯನ್ನು ಹೇಳುತ್ತಿತ್ತು. ಈ ಮೂಲಕ ರಕ್ತದ ಋಣವನ್ನು ತೀರಿಸುತ್ತಿತ್ತು. ಹೀಗಿದ್ದ ಮರದಲ್ಲಿ ಎಲ್ಲಿಂದಲೋ ಬಂದ ಹದ್ದಿನ ಜೋಡಿ, ಗೂಡು ಕಟ್ಟಿ, ಮೊಟ್ಟೆಯನ್ನಿಟ್ಟು, ಮರಿಗಳಾಗುವುದನ್ನು ನೋಡಲು ತಹತಹಿಸುತ್ತಿತ್ತು.

ಒಂದೆರೆಡು ದಿನಗಳಲ್ಲಿ ಮೊಟ್ಟೆಯೊಡೆದು ಮರಿಗಳು ಹೊರಬಂದವು. ಹದ್ದಿನ ದಂಪತಿಗಳಿಗೋ ಖುಷಿಯೋ ಖುಷಿ. ಮರಕ್ಕೂ ಅಷ್ಟೇ ಖುಷಿ. ಹದ್ದು ತನ್ನ ಮಕ್ಕಳಿಗೆ ಆಹಾರ ತರಲು ಹೊರಟಾಗ, ಮರವು ಹದ್ದಿನ ಮರಿಗಳ ಬಗ್ಗೆ ಕಾಳಜಿ ವಹಿಸುತ್ತಿತ್ತು. ಆ ಸಂದರ್ಭದಲ್ಲಿ ತಾನು ಸಸಿಯಾಗಿದ್ದಾಗ ಕುಡಿದ ಏಕಲವ್ಯನ ರಕ್ತದ ಕತೆ, ಪಾರ್ಥನ ಪಾಪದ ಕತೆ, ದ್ರೋಣನ ಸಣ್ಣತನದ ಕತೆ - ಹೀಗೆ ಕತೆಗಳ ಮೂಲಕ ಸತ್ಯವನ್ನು ತಿಳಿಸಿ ನಿರಾಳವಾಗುತ್ತಿತ್ತು. ಹದ್ದಿನ ಮರಿಗಳು ಕಣ್ಣೀರು ಸುರಿಸುತ್ತಾ, ಲೋಚಗುಡುತ್ತಾ ಕತೆಯನ್ನು ಕೇಳುತ್ತಿದ್ದವು. ಎಷ್ಟಾದರೂ ಎಲ್ಲೋ ಒಂದೆಡೆ ಅವುಗಳಿಗೂ ಏಕಲವ್ಯನ ರಕ್ತದ ನಂಟಿತ್ತು.

ಮರದ ಆರೈಕೆ, ತಾಯಿಯ ತುತ್ತು, ಮರಿಗಳನ್ನು ಬಲಿಯುವಂತೆ ಮಾಡಿದವು. ತನ್ನೊಡಲ ಮರಿಗಳು ಹಾರುವುದನ್ನು ಕಂಡು ಮರಕ್ಕೆ ಪುಳಕವೋ ಪುಳಕ. ಒಂದು ಬಲಿತ, ಹಾರಲು ಸಶಕ್ತವಾದ ಹದ್ದಿನ ಮರಿ ಮರದ ಕಿವಿಯಂತಿದ್ದ ಬುಡದ ಬಳಿ, ಏನೋ ಪಿಸುದನಿಯಲ್ಲಿ ಹೇಳಿ ಮರವನ್ನು ಬಿಟ್ಟು ಹಾರಿತ್ತು. ಆ ಕ್ಷಣದಲ್ಲಿ ಮರ ತನ್ನೆಲ್ಲಾ ಎಲೆಗಳನ್ನು ಅಲುಗಾಡಿಸಿ ಸಂತಸ ತೋರಿತು.

ಹದ್ದು ಮರವ ಬಿಟ್ಟಾಗಿನಿಂದ ಹಾರಿ, ಹಾರಿ, ತನ್ನ ಕಸುವನ್ನು ಕಳೆದುಕೊಂಡರೂ, ಎಲ್ಲೂ ನಿಲ್ಲದಾಗಿತ್ತು. ಹೀಗೆ ಹಾರಿ ಬಹುಸಮಯದ ನಂತರ ಹಸ್ತಿನಾಪುರಕ್ಕೆ ಬಂದು ತಲುಪಿತು. ಹದ್ದಿನ ಕಂಗಳಲ್ಲಿ ಎಂತಹುದೋ ಕಾಂತಿ ಚಿಮ್ಮುತ್ತಿತ್ತು.

ಕುರುಕ್ಷೇತ್ರ ಯುದ್ಧ ಮುಗಿದು ಬಹಳಷ್ಟು ದಿನಗಳಾಗಿದ್ದವು. ಅತಿರಥ-ಮಹಾರಥರೆಲ್ಲ ಮಣ್ಣಿನಲ್ಲಿ ಮಣ್ಣಾಗಿಹೋಗಿದ್ದರು. ಅವರ ನೆನಪು ಜನರ ಮನಸ್ಸಿನಲ್ಲಿ ಮಾಸಲು ಆರಂಭಿಸಿತ್ತು. ಹಸ್ತಿನಾಪುರ ಪಾಂಡವರ ವಶವಾಗಿ ಪಾಂಡವರ ಕಾರ್ಯದ ಪ್ರತೀಕದಂತೆ ನಗರವು ಎದ್ದುಕಾಣುತ್ತಿತ್ತು. ಎಲ್ಲರ ಮುಖದಲ್ಲಿ ಮಂದಹಾಸ ಮಿನುಗುತ್ತಿತ್ತು. ಒಟ್ಟಾರೆ ಹಸ್ತಿನಾಪುರ ಸ್ವರ್ಗಕ್ಕಿಂತ ಒಂದು ಕೈ ಹೆಚ್ಚಾಗಿಯೇ ಮಿಂಚುತ್ತಿತ್ತು.

ಸಂಜೆ ಸೂರ್ಯ ದುಡಿದು, ಎರೆದು ಸೋತಿದ್ದ. ತಣ್ಣನೆಯ ಗಾಳಿ ಎಲ್ಲಡೆಯೂ ಹಾಸಿತ್ತು. ಹಕ್ಕಿಗಳೆಲ್ಲ ಚಿಲಿಪಿಲಿಗುಟ್ಟುತ್ತಾ ಗೂಡಿಗೆ ಮರಳುತ್ತಿದ್ದವು. ಪಾರ್ಥ ಮತ್ತು ದ್ರೌಪದಿ ಉದ್ಯಾನವನಕ್ಕೆ ವಾಯುವಿಹಾರಕ್ಕೆ ಬಂದರು. ಇಡೀ ಉದ್ಯಾನವನ ಇವರ ಆಗಮನದಿಂದ ಸಂಕುಲಿತಗೊಂಡಂತೆ ಭಾಸವಾಗುತ್ತಿತ್ತು. ಇಬ್ಬರೂ ಮಾತುಕತೆಯಲ್ಲಿ ಮುಳುಗಿಹೋಗಿ ನಿಧಾನವಾಗಿ ಹೆಜ್ಜೆ ಹಾಕುತ್ತ, ಆಗತಾನೆ ಹೂಗಳು ಬಿಡಲು ಪ್ರಾರಂಭಿಸಿದ್ದ ಬೇವಿನ ಮರದ ಕೆಳಗೆ ಕೂತರು. ಇಬ್ಬರೂ ಸ್ಪರ್ಶಸುಖದಲ್ಲಿ ಮೈಮರೆತು ಕಂಗಳಲ್ಲೇ ಎಲ್ಲವನ್ನೂ ಮಾತನಾಡುತ್ತಿದ್ದರು. ಅಲ್ಲೇ ಸನಿಹದ ಹೊಂಗೆಯ ಮರದ ಹೂವ ಹೊದಿಕೆಯಲ್ಲಿ ಕೂತ ಹದ್ದು ಪಾರ್ಥನ ಕಣ್ಣ ಚಲನೆಯನ್ನು ಗಮನಿಸುತ್ತಿತ್ತು. ಹದ್ದು ಒಮ್ಮೆ ತನ್ನ ದೇಹವನ್ನು ಸಡಿಲಿಸಿ ರಭಸದಿಂದ ಹಾರಿ ಪಾರ್ಥನ ಎರಡು ಕಣ್ಣುಗಳನ್ನೂ ಕುಕ್ಕಿ, ಆಳವಾದ ಗಾಯ ಮಾಡಿ ಹಾರಿಹೋಯಿತು. ದ್ರೌಪದಿಯ ತೆರೆದ ಬಾಯಿ ಮುಚ್ಚಲೇ ಇಲ್ಲ. ಅಷ್ಟರಲ್ಲಿ ಹದ್ದು ಆಗಸದಲ್ಲಿ ಸಣ್ಣದಾಗಿಹೋಗಿತ್ತು. ಗಾಳಿಯಿಂದ ಸುದ್ದಿ ತಿಳಿದ ಆಲದ ಮರ ಜೋರಾಗಿ ತನ್ನೆಲ್ಲ ದೇಹವನ್ನು ಅಲುಗಾಡಿಸಿ ನಕ್ಕಿತು.

**ವಿಶ್ವನಾಥ ಎಲ್. ವೇಮಗಲ್**
ವೇಮಗಲ್ - ೫೬೩ ೧೫೭, ಕೋಲಾರ ತಾಲೂಕು, ಜಿಲ್ಲೆ.

# ಸೃಷ್ಟಿಯ ಬಗ್ಗೆ ವಿಜ್ಞಾನ - ಮತಗಳ ಸಂಘರ್ಷ

''ವೇದಗಳಲ್ಲಿ ಏನಿಲ್ಲ ?'' ಎಂದು ಹುಬ್ಬು ಏರಿಸಿ ಮಾತನಾಡುವ ಮಂದಿ ನಮ್ಮಲ್ಲಿದ್ದಾರೆ. ಆಧುನಿಕ ಜ್ಞಾನವನ್ನು ಪ್ರಾಚೀನ ಗ್ರಂಥಗಳಿಗೆ ಆರೋಪಿಸುವುದು ಒಂದು ಮಾದರಿಯಾದರೆ, ವಿಜ್ಞಾನದ ಆವಿರ್ಭಾವಗಳನ್ನು ವಿದ್ಯಾರ್ಥಿಗಳಿಗೆ ತಿಳಿಸಿಕೊಡದಂತೆ ಹುನ್ನಾರ ನಡೆಸುವುದು ಇನ್ನೊಂದು ಮಾದರಿ. ಇದು ಎಲ್ಲ ದೇಶಗಳಲ್ಲೂ ಬೇರೆ ಬೇರೆ ಕಾಲಗಳಲ್ಲಿ ನಡೆದುಬಂದಿರುವ ಸಂಗತಿ. ಅದು ಆರೋಗ್ಯಕರವಲ್ಲವೆಂದು ಬೇರೆ ಹೇಳಬೇಕಾಗಿಲ್ಲ. ತಮ್ಮ ಧಾರ್ಮಿಕ ಗ್ರಂಥಗಳು ಶಾಶ್ವತ, ಅವುಗಳ ಬೋಧನೆ ಸಾರ್ವಕಾಲಿಕ, ಎಂದೆಲ್ಲಾ ಹೇಳುವ ಜನ ಹೊಸ ಜ್ಞಾನದಿಂದ ಅಷ್ಟೇಕೆ ವಿಚಲಿತರಾಗುತ್ತಾರೆಂಬುದೊಂದು ಕುತೂಹಲದ ವಿಷಯ. ತಮ್ಮ ಬಲಾಢ್ಯತೆಯ ಬಗ್ಗೆ ಅವರಿಗೇ ನಂಬಿಕೆ ಸಾಲದೇನೋ ಎನಿಸುತ್ತದೆ. ಇದಕ್ಕೆ ಹಲವು ನಿದರ್ಶನಗಳನ್ನು ಈ ಲೇಖನದಲ್ಲಿ ಕಾಣಬಹುದು.

**ಎಂ. ಎಸ್. ಕೇಶವರಾವ್**

ಮತಗಳ ನಡುವಿನ ಸಂಘರ್ಷಗಳು ಪ್ರಾಚೀನ ಕಾಲದಿಂದ ಪ್ರಪಂಚದ ಎಲ್ಲ ಭಾಗಗಳಲ್ಲಿ ಆಗಾಗ್ಗೆ ನಡೆಯುತ್ತಿರುವುದು ಎಲ್ಲರಿಗೂ ತಿಳಿದಿರುವ ವಿಷಯ. ಮಧ್ಯ ಮತ್ತು ಆಧುನಿಕ ಯುಗಗಳಲ್ಲಿಯೂ ಕೆಲವು ಮತದವರು ಸಣ್ಣ ಪುಟ್ಟ ವೈಮನಸ್ಯಗಳಿಂದಲೇ ಉದ್ರೇಕಿತರಾಗಿ ಸಭೆಗಳಲ್ಲಿ, ರಾಜಾಸ್ಥಾನಗಳಲ್ಲಿ, ನ್ಯಾಯಾಲಯಗಳಲ್ಲೂ ಹೋರಾಡಿದ್ದು ಉಂಟು. ಇದೊಂದು ಮೆಚ್ಚಿಕೊಳ್ಳಬಹುದಾದ ಪದ್ಧತಿ. ವೇದ, ಪುರಾಣ, ಭಗವದ್ಗೀತೆ, ಬೈಬಲ್, ಕುರಾನ್, ಇತ್ಯಾದಿ ಎಲ್ಲಾ ಮತೀಯ ಉದ್ಗ್ರಂಥಗಳು, ಎಲ್ಲಾ ಹಳೆಯ ಮಹಾಕಾವ್ಯಗಳು ಪವಿತ್ರವೆನ್ನುವ ರಣರಂಗಕ್ಕಿಂತ, ಈಚೆಗಿನ ರಾಜಕೀಯಗಳು ಧಾರಾಳವಾಗಿ ಉಪಯೋಗಿಸುವ ಬೀದಿ-ಗಲ್ಲಿಗಳಲ್ಲಿನ ಹಿಂಸಾಚಾರಗಳಿಗಿಂತ, ಈ ವಾಗ್ವಾದ ಶತಪಾಲು ಉತ್ತಮ ವಿಧಾನ.

ಸೂಕ್ಷ್ಮವಾಗಿ ಗಮನಿಸಿದರೆ ಭಿನ್ನಮತೀಯರ ನಡುವಿನ ಭಿನ್ನತೆಗಿಂತ, ಪ್ರತಿಯೊಂದು ಮತಕ್ಕೂ ವಿಜ್ಞಾನದೊಡನೆ ಇರುವ ವೈಚಾರಿಕ ವಿರೋಧಗಳು ಇನ್ನೂ ಬಹಳಷ್ಟು ಅಗಾಧವಾದವು. ಈ ಶತಮಾನದಲ್ಲಿ, ಬಹು ದೊಡ್ಡ ಪ್ರಮಾಣದಲ್ಲಿ, ಆಧುನಿಕ ಸಂವಿಧಾನಬದ್ಧ ನ್ಯಾಯಾಲಯದಲ್ಲಿ, ಮತವೊಂದಕ್ಕೂ ವಿಜ್ಞಾನಕ್ಕೂ ದೀರ್ಘ ಕಲಹ ನಡೆದದ್ದು, 'ಸ್ಕೋಪ್ಸ್ ಟ್ರಯಲ್' ಎಂದು ಪ್ರಸಿದ್ಧವಾದ ಅಮೆರಿಕನ್ ಮೊಕದ್ದಮೆಯಿಂದ ಪ್ರಾರಂಭವಾದ ಒಂದು ಸರಣಿಯಲ್ಲಿ. ಅಮೆರಿಕಾದ ಸಂಯುಕ್ತ ಸಂಸ್ಥಾನದಲ್ಲಿ ಸುಮಾರು ಎಪ್ಪತ್ತು ವರುಷಗಳು ನಡೆದ ಈ ಮೊಕದ್ದಮೆಗಳ ಪರಿಣಾಮಗಳು ಅಲ್ಲಿ ಇನ್ನೂ ಮುಂದುವರಿಯುತ್ತಿವೆ. ಭಾರತದಲ್ಲೂ ಇಂತಹ ವ್ಯಾಜ್ಯಗಳು ನಡೆಯುತ್ತಿವೆ. ಹೀಗೆ ನಡೆಸುವುದರಿಂದಲೆ ಶಾಂತಿಶೀಲ, ಪ್ರಜಾ-ತಾಂತ್ರಿಕ ಪ್ರಗತಿಯನ್ನು ಸಾಧಿಸಬಹುದಾದ್ದರಿಂದ, ಇಂತಹ ಮೊಕದ್ದಮೆಗಳ ಅಧ್ಯಯನದ ಅಗತ್ಯ ಭಾರತದಲ್ಲೂ ಇದೆ. ವಿದ್ಯಾಸಂಸ್ಥೆಗಳ ವಿಜ್ಞಾನದ (ಮತ್ತು ಇತಿಹಾಸದ) ಪಠ್ಯಪುಸ್ತಕಗಳೊಳಗಿನ ವಿಷಯಗಳಲ್ಲೂ ಮತೀಯ ಮತ್ತು ಪ್ರಸ್ತುತ ರಾಜಕೀಯದ ಪ್ರಭಾವ, ಎಷ್ಟು ದಟ್ಟವಾಗಿ, ಹೇಗೆ ಬೀಳಬಹುದು ಎನ್ನುವುದನ್ನು ಈ ಪ್ರಕರಣದಲ್ಲಿ ಕಾಣಬಹುದು.

### ಸ್ಕೋಪ್ಸ್ ಮೊಕದ್ದಮೆ

೧೯೨೫ರಲ್ಲಿ, ಟೆನೆಸಿ ರಾಜ್ಯದ ಡೇಟನ್‌ನ ಒಬ್ಬ ಸಾಧಾರಣ, ಜೀವಶಾಸ್ತ್ರದ ಉಪಾಧ್ಯಾಯ ಸ್ಕೋಪ್ಸ್‌ನ ಮೇಲೆ ರಾಜ್ಯ ಸರ್ಕಾರ ಒಂದು ಮೊಕದ್ದಮೆ ಹೂಡಿತು. ಅವನ ಮೇಲೆ ಹೊರೆಸಿದ್ದ ಆರೋಪ, ರಾಜ್ಯ ಸರ್ಕಾರದ ನಿರ್ದೇಶನಕ್ಕೆ ವಿರುದ್ಧವಾಗಿ ಶಾಲೆಯ ಮಕ್ಕಳಿಗೆ ಡಾರ್ವಿನ್ನನ ಜೀವ ವಿಕಾಸವಾದವನ್ನು ಕಲಿಸುತ್ತಿದ್ದಾನೆನ್ನುವುದು. ಈ ಆರೋಪವನ್ನು ರಾಜ್ಯ ಸರ್ಕಾರವೇ ಹೇರುವಂತೆ, ಪ್ರಯತ್ನಪೂರ್ವಕವಾಗಿ ಸರ್ಕಾರವನ್ನು ಛೇಡಿಸಿದ್ದು ಅಮೆರಿಕಾದ ನಾಗರಿಕ ಸ್ವಾತಂತ್ರ್ಯ ಸಂಘ. ರಾಜ್ಯದ ಹಲವೆಡೆಗಳಲ್ಲಿ ಶಾಲಾ ಉಪಾಧ್ಯಾಯರುಗಳ ಮೇಲೆ ಆಡಳಿತ ವರ್ಗಗಳು ಆದೇಶಿಸುತ್ತಿದ್ದ ಇಂತಹ ನಿರ್ಬಂಧಗಳು ಕಾನೂನುಬಾಹಿರವಿರಬಹುದೇ ಎಂದು ಪರೀಕ್ಷಿಸುವುದಕ್ಕೆ ಆ ಸಂಘಕ್ಕಿದ್ದ ಒಂದೇ ಒಂದು ಉಪಾಯ ಇದು. ಸ್ಕೋಪ್ಸ್‌ನ ಪಾತ್ರ ಈ ಪ್ರಕರಣದಲ್ಲಿ ಬರಿಯ ಹೆಸರಿನದಷ್ಟೆ. ಸಂವಿಧಾನ ಮತ್ತು ಕಾನೂನುಗಳಲ್ಲಿ ಬಹಳ ಪರಿಣತನೆಂದು ಖ್ಯಾತಿ ಪಡೆದಿದ್ದ ಡ್ಯಾರೊ ಎಂಬ ವಕೀಲ ವಿಕಾಸವಾದದ ಪರವಾಗಿ, ಇನ್ನೂ ಹೆಚ್ಚು ಪ್ರಸಿದ್ಧನಾಗಿದ್ದ ವಕೀಲ ಬ್ರಿಯನ್ ದೈವಸೃಷ್ಟಿಯ ಪರವಾಗಿ, ಅನೇಕ ಬೆಂಬಲಿಗರ ನೇತೃತ್ವದಲ್ಲಿ, ಮಹಾಸೇನಾನಿಗಳಂತೆ ಹೆಣಗಾಡಿದರು. ದೇಶವಿದೇಶಗಳ ಸುದ್ದಿಗಾರರು ಕೋರ್ಟಿನಲ್ಲಿ ಕಿಕ್ಕಿರಿದು, ಪುಟಗಟ್ಟಲೆ ವರದಿಗಳನ್ನು ಬರೆದು ಹಾಕಿದರು. ನೆರೆದಿದ್ದ ಜನಗಳನ್ನು ನೋಡಿ ಬೆರಗಾದ ನ್ಯಾಯಾಧೀಶರು, ಮಹಡಿಯ ನೆಲ ಕುಸಿಯಬಹುದೆಂದು ಹೆದರಿ, ಅಮೆರಿಕನ್ ನ್ಯಾಯಾಂಗದ ಚರಿತ್ರೆಯಲ್ಲಿಯೆ ಮೊದಲ ಬಾರಿಗೆ, ಕೋರ್ಟಿನ ಹೊರಾಂಗಣದಲ್ಲಿ ವಿಚಾರಣೆಯ ವ್ಯವಸ್ಥೆ ಮಾಡಿದರು. ಅಲ್ಲಿ ಕಕ್ಷಿ ಪ್ರತಿಕಕ್ಷಿಗಳಿಗೆ ಎತ್ತರದ ರಂಗಮಣೆಗಳನ್ನು ನಿರ್ಮಿಸಿಕೊಡಬೇಕಾಗಿ ಬಂದು, ವಿಚಾರಣೆ ಒಂದು 'ಸೂತ್ರ-ಬೊಂಬೆಯಾಟ' ಎನ್ನಿಸಿತೆಂದು ಪತ್ರಿಕೆಗಳು ಹಾಸ್ಯ ಮಾಡಿದವು. ಈ ವಿಚಾರಣೆ ನಡೆದು ಮುಕ್ಕಾಲು ಶತಮಾನ ಕಳೆದಿದೆ.

### ಡಾರ್ವಿನ್ನನ ವಿಕಾಸವಾದ ಮತ್ತು ಬೈಬಲ್

೧೮೫೯ರಲ್ಲಿ ಚಾರ್ಲ್ಸ್ ಡಾರ್ವಿನ್ ತನ್ನ ವಿಕಾಸವಾದದ ಸಿದ್ಧಾಂತವನ್ನು ಪ್ರಕಟಿಸಿದಾಗ ಯೂರೋಪಿನಲ್ಲಿ ಉಂಟಾದ ಭೂಕಂಪನದ ಮತ್ತೊಂದು ಅಲೆ ಇದು. ಬೈಬಲ್ಲಿನಲ್ಲಿರುವ ಅಧ್ಯಾತ್ಮಿಕ ವಿಷಯಗಳಷ್ಟೆ ಅಲ್ಲದೆ, ಪ್ರಾಕೃತಿಕ ವಿಷಯಗಳೂ ಸಹ ಅಕ್ಷರಶಃ ಸತ್ಯವೆಂದು ನಂಬಿದ್ದ ಕ್ರಿಶ್ಚಿಯನ್ನರಿಗೆ, ಡಾರ್ವಿನ್ನನ ''ವಿವಿಧ ಜೀವಿ ವರ್ಗಗಳ ಮೂಲ'' (೧೮೫೯) ಮತ್ತು ''ಮಾನವನ ವಿಕಾಸ'' (೧೮೭೧) ನಿರೀಶ್ವರವಾದಗಳಾಗಿ ಕಂಡುಬಂದವು. ''ದೇವರು ಆರು ದಿನಗಳಲ್ಲಿ ಎಲ್ಲ ಜೀವಿಗಳನ್ನು ಸೃಷ್ಟಿಸಿದ; ಮೊದಲು ಸರ್ವಪ್ರಥಮ ಪುರುಷ ಆಡಂನನ್ನು ಸೃಜಿಸಿ, ಅವನ ಎದೆಯೆಲುಬಿನಿಂದ ಈವಾಳನ್ನು ಸೃಷ್ಟಿಸಿದ. ಇವರದೇ ಸಂತತಿಯ ಜೋನಾ, ದೇವರೇ ಉಂಟುಮಾಡಿದ ಪ್ರಳಯ ಪ್ರವಾಹದಲ್ಲಿ, ಸಕಲ ಪ್ರಾಣಿಗಳ ಗಂಡೊಂದನ್ನು ಹೆಣ್ಣೊಂದನ್ನು ಮಾತ್ರ ಉಳಿಸಿಟ್ಟು, ಈಗಿನ ಪ್ರಪಂಚದ ಪ್ರಕೃತಿಯ ವೈವಿಧ್ಯತೆಗೆ ಕಾರಣನಾದ'' (ಜೆನೆಸಿಸ್). ಪ್ರಪಂಚದ ಸೃಷ್ಟಿಯ ತಾರೀಖು ಮಾತ್ರ ಬೈಬಲ್ಲಿನಲ್ಲಿಲ್ಲ! ಒಬ್ಬ ಬಿಷಪ್ ಸಂಶೋಧನೆ ಮಾಡಿ ಕ್ರಿ.ಪೂ. ೬೦೦೦ದಲ್ಲಿ ಸೃಷ್ಟಿಯಾಯಿತೆಂದಾಗ, ಮತ್ತು ಕೆಂಬ್ರಿಜ್‌ನ ಲೈಟ್‌ಫುಟ್ ಎಂಬಾತ ಇನ್ನೂ ನಿಖರ ಶೋಧನೆಯ ನಂತರ ಕ್ರಿಸ್ತಪೂರ್ವ ೪೦೦೪ನೇ ಇಸವಿಯ ಅಕ್ಟೋಬರ್ ೧೮ನೇ ದಿನದ ಬೆಳಿಗ್ಗೆ ಒಂಬತ್ತು ಗಂಟೆಗೆ ದೇವರು ಸೃಷ್ಟಿ ಪ್ರಾರಂಭಿಸಿದನೆಂದಾಗ, ಕ್ರಿಶ್ಚಿಯನ್ನರ ಯಾವ ವಿರೋಧವೂ ಇರಲಿಲ್ಲ. ಈ ಮಾಹಿತಿಯನ್ನು ಜೆನೆಸಿಸ್‌ನ ಅಡಿಟಿಪ್ಪಣಿಯಾಗಿ ಸ್ವೀಕರಿಸಿಯೂಬಿಟ್ಟರು.

ಆದರೆ ಕ್ರಮೇಣ ಬಹಳಷ್ಟು ವಿಷಯಗಳಲ್ಲಿ ಆಧುನಿಕ, ವಿಶಾಲ ಮನೋಭಾವವನ್ನು ಅಳವಡಿಸಿಕೊಂಡಿದ್ದ ಅಮೆರಿಕಾದ ಉತ್ತರದ ಸಂಸ್ಥಾನಗಳಲ್ಲಿ, ವಿಕಾಸವಾದಕ್ಕೆ ಆಕ್ಷೇಪಣೆ

ಕಡಿಮೆಯಾಗತೊಡಗಿತ್ತು. ದಕ್ಷಿಣ ರಾಜ್ಯಗಳಲ್ಲಿ, ಇನ್ನೂ ಹೆಚ್ಚಾಗಿ ಪ್ರಾಟೆಸ್ಟೆಂಟ್ ಹಳೆಯ ಚರ್ಚುಗಳವರಲ್ಲಿ, ವಿಕಾಸವಾದ ಸೈತಾನನ ಕಿಡುಗೇಡಿವಾದವೆನ್ನುವ ನಂಬಿಕೆ ಬಲವಾಗಿತ್ತು. ಹೀಗಾಗಿ ದಕ್ಷಿಣದ ೩೭ ರಾಜ್ಯಗಳ ಶಾಲೆಗಳಲ್ಲಿ, ಜೀವಶಾಸ್ತ್ರದ ಅಂಗವಾಗಿ ವಿಕಾಸವಾದವನ್ನು ಕಲಿಸುವುದಕ್ಕೆ ತಂದೆತಾಯಿಯರ ಒಪ್ಪಿಗೆ ಇಲ್ಲದಿದ್ದುದರಿಂದ, ಅದನ್ನು ಕಲಿಸಲಾಗುತ್ತಿರಲಿಲ್ಲ. ಇಂತಹ ರೂಢಿವಾದಿಗಳ ಪ್ರತಿಪಾದನೆ ಎಂತಹ ಮಟ್ಟದ್ದಾಗಿತ್ತೆಂದರೆ, 'ಪೈ (π)ನ ಮೌಲ್ಯ ೩.೧೪೧೫೯ರಷ್ಟು ಅಲ್ಲ; ಕೇವಲ ೩.೦' ಎಂದು ಒಂದು ಶಾಲೆಯಲ್ಲಿ ಕಲಿಸುತ್ತಿದ್ದರು. ಇದಕ್ಕೆ ಅಲ್ಲಿ ಕೊಡುತ್ತಿದ್ದ ಕಾರಣ, 'ಮಹಾಮೇಧಾವಿ ಸಾಲೊಮನ್ನನ ಮದ್ಯಪಾತ್ರೆಯ ಸುತ್ತಳತೆ ಅದರ ಅಡ್ಡಳತೆಯ ಮೂರರಷ್ಟಿತ್ತು' ಎಂದು ಬೈಬಲ್ಲಿನಲ್ಲಿ ನಮೂದಿಸಲ್ಪಟ್ಟಿರುವ ಒಂದು ವಾಕ್ಯ.

ಇಪ್ಪತ್ತನೆಯ ಶತಮಾನದ ಕೊನೆಯ ಮೂರು ದಶಕಗಳಲ್ಲಿ, ಫಂಡಮೆಂಟಲಿಸಂ (ಅರ್ಥಾತ್ ಮತಮೂಲಗ್ರಂಥ ಪ್ರಾಮಾಣ್ಯವಾದ; ಅಥವಾ, ಸರಳವಾಗಿ, ಸಂಪ್ರದಾಯ ವಾದ) ಎನ್ನುವ ಪದ ಕ್ಯಾನ್ಸರ್ ಎನ್ನುವ ಪದದಂತೆಯೆ, ಪ್ರಪಂಚದಾದ್ಯಂತ ರಾಕ್ಷಸನಂತೆ ತೀವ್ರವಾಗಿ ಬೆಳೆದು ಆವರಿಸುತ್ತಿದೆ. ಆದರೆ ಈ ಪದದ ವ್ಯುತ್ಪತ್ತಿಯಾದದ್ದು, ಅಮೆರಿಕಾದ ಪ್ರಾಟೆಸ್ಟಂಟ್ ಚರ್ಚುಗಳ ಪ್ರಗತಿ ವಿರೋಧ ಕೂಟಗಳಲ್ಲಿ, ೧೯೧೮ರಲ್ಲಿ, ಬ್ಯಾಪ್ಟಿಸ್ಟ್ ಚರ್ಚಿನ ರೈಲೆ ಎಂಬಾತ ವಿಶ್ವ ಕ್ರಿಶ್ಚಿಯನ್ ಸಂಪ್ರದಾಯವಾದಿ ಸಂಘವನ್ನು ಸ್ಥಾಪಿಸಿ, ೬೦೦೦ ಕಟ್ಟರ ಕ್ರಿಶ್ಚಿಯನ್ನರ ಸಭೆ ಸೇರಿಸಿ, 'ಸೈತಾನನ ಅಸತ್ಯಗಳಿಂದಲೆ ಹುಟ್ಟಿಕೊಂಡ ಆಧುನಿಕತೆ'ಯ ವಿರುದ್ಧ ಹೋರಾಟಕ್ಕೆ ಸಿದ್ಧವಾದ ಒಂದು ದಳವನ್ನು ಹುಟ್ಟುಹಾಕಿದ. ಪ್ರಪಂಚದಲ್ಲೆಲ್ಲ ಕಿಚ್ಚು ಹಚ್ಚುತ್ತಿರುವ 'ಸಂಪ್ರದಾಯವಾದ'ದ ಉಗಮವಾದದ್ದು ಹೀಗೆ, ಅಮೆರಿಕದಲ್ಲಿ. ಇವರು ಬೈಬಲ್ ಅನ್ನು 'ಪರಮ ಗ್ರಂಥ', 'ಅನನ್ಯ ಗ್ರಂಥ' ಎಂದು ಘೋಷಿಸಿ, ಅದರೊಳಗಣ ಮಾತುಗಳು ಅಕ್ಷರಶಃ ಸತ್ಯವೆಂದು ಹುಯಿಲೆಬ್ಬಿಸಿದರು. ಹೀಗೆ 'ಮತಗ್ರಂಥದ ಮಾತುಗಳನ್ನೆಲ್ಲ ವಿಚಾರ ಮಾಡದೆ ಪಾಲಿಸುವುದು ಜೀವನದ ಪರಮ ಗುರಿ' ಎನ್ನುವ ಪರಿಭಾಷೆಗೆ ಅನ್ವರ್ಥರಾಗಿರುವವರೆಲ್ಲ 'ಫಂಡಮೆಂಟಲಿಸ್ಟ್' ಎನ್ನಿಸಿಕೊಳ್ಳುವುದಕ್ಕೆ ಹಿಂಜರಿಯ ಬಾರದು, ಅವರು ಪ್ರಪಂಚದಲ್ಲಿ ಎಲ್ಲಿದ್ದರೂ ಸರಿಯೆ. 'ಬೈಬಲ್ ಪ್ರಾಮಾಣ್ಯವಾದ'ವಾಗಿ ನಾಮಾಂಕಿತವಾದ ಈ 'ಮತಗ್ರಂಥ ಪ್ರಾಮಾಣ್ಯವಾದ'ದ ಚಟುವಟಿಕೆಗಳು, 'ವೇದ ಪ್ರಾಮಾಣ್ಯವಾದ'ವಾಗಿಯೂ, 'ಕುರಾನ್ ಪ್ರಾಮಾಣ್ಯವಾದ'ವಾಗಿಯೂ ಎಷ್ಟೋ ಹಿಂದಿನಿಂದಲೂ ಉಗ್ರ ಆಚರಣೆಯಲ್ಲಿದ್ದದ್ದು ಈಚೆಗೆ ಎಲ್ಲರ ಗಮನಕ್ಕೆ ಬಂದಿದೆ.

ಇಲ್ಲಿ ಒಂದು ವಿಚಿತ್ರವೆಂದರೆ, ರೋಮನ್ ಕ್ಯಾಥೊಲಿಕ್ ಚರ್ಚಿನವರು, ಅಂದರೆ ಪೋಪನ ಅನುವರ್ತಿಗಳು, ವಿಕಾಸವಾದಕ್ಕೆ ವಿರೋಧ ಮಾಡದಿದ್ದುದು. ವಿಕಾಸವಾದದ ಆಧುನಿಕತೆಯನ್ನು ಅತಿಯಾಗಿ ವಿರೋಧಿಸಿದವರು ಪ್ರಾಟೆಸ್ಟೆಂಟರು; ಇವರು ಹಿಂದೆ, ಹದಿನಾರನೆಯ ಶತಮಾನದಲ್ಲಿ, ರೋಮನ್ ಕ್ಯಾಥೊಲಿಕ್‌ರನ್ನು 'ಆಧುನಿಕತೆಯನ್ನು ಸಹಿಸಲಾರದ ಹಳೆಯ ಸಂಪ್ರದಾಯಸ್ಥರು' ಎಂದು ದೂಷಿಸಿ ಹೊರಬಂದ ಆಗ್ರಹಿಗಳು (ಎಂದರೆ ಪ್ರಾಟೆಸ್ಟೆಂಟರು). ಹೀಗೆ ಹಳೆಯ ಮತಗಳಿಂದ ಬೇರ್ಪಟ್ಟ ಹೊಸ ಜಾತಿಗಳವರು ಹಿಂದಿನವರಿಗಿಂತ ಹೆಚ್ಚು ಉಗ್ರ ಸಂಪ್ರದಾಯಸ್ಥರಾಗಿರುವ ನಿದರ್ಶನಗಳು ಸಾಕಷ್ಟು ಸಿಕ್ಕುತ್ತವೆ. ಕ್ಯಾಥೊಲಿಕ್ ಮತ, ಹಿಂದೆ 'ಭೂಮಿಯ ಸುತ್ತ ಸೂರ್ಯ ಸುತ್ತುವುದಿಲ್ಲ' ಎಂದ ಗೆಲಿಲಿಯೋನನ್ನು ಶಿಕ್ಷೆಗೆ ಗುರಿ ಮಾಡಿ ತಾನೇ ನಗೆಪಾಟಲಾಗಿದ್ದುದನ್ನು ಮತ್ತು ಇಂತಹ ಇತರ ನಾಚಿಕೆ ಗೇಡಿನ ಪ್ರಸಂಗಗಳನ್ನು ನೆನೆಸಿಕೊಂಡು, ಈಗ ವಿಕಾಸವಾದದ ಮಾತನ್ನೆತ್ತದೆ, ಭಗವಂತನ ಸೃಷ್ಟಿಯ ರಹಸ್ಯಗಳು ಏನೇನಿರಬಹುದೊ ಎಂದು ಸುಮ್ಮನಾಗಿಬಿಟ್ಟಿತು.




ಈ ಮೊಕದ್ದಮೆಯಲ್ಲಿ, ವಿಕಾಸವಾದದ ಮತ್ತು ದೈವಸೃಷ್ಟಿಯ ಪರವಾಗಿಯೂ, ಎದುರಾಗಿಯೂ, ಹಾರಿದ ಚಕಮಕಿ ಮಾತುಗಳು ಈ ಚರ್ಚೆಗಳ ಬಿರುಸಿನ ಮಟ್ಟ ಎಷ್ಟು ತೀವ್ರವಾಗಿತ್ತೆಂದು ಸ್ಪಷ್ಟಪಡಿಸುತ್ತವೆ :

'ರೈಲು, ನೌಕೆ, ಟೆಲಿಫೋನ್, ರೇಡಿಯೊ, ಏರೊಪ್ಲೇನು ಇವುಗಳ ನವಯುಗದಲ್ಲಿ ಪ್ರಾಚೀನ ಕಾಲದ ಮತೀಯ ಮೂಢನಂಬಿಕೆಗಳ ಪ್ರಾಬಲ್ಯ ಇಷ್ಟು ಹೆಚ್ಚಾಗಿ ಏಕಿದೆ ?'

'ಅವೈಜ್ಞಾನಿಕತೆ ಕ್ಯಾನ್ಸರಿಗಿಂತ ಹೆಚ್ಚು ಅಪಾಯಕಾರಿ.'

'ಜನಸಂಖ್ಯೆಯ ಶೇ. ಎರಡು ಮಾತ್ರ ಇರುವ ಈ ವಿಜ್ಞಾನಿಗಳು ಉಳಿದ ಶೇ. ೯೭-೯೮ ಜನಗಳ ಹಣ ಪೋಲು ಮಾಡಿ, ಅವರಿಗೇ ವಿಜ್ಞಾನ ಕಲಿಸುವ ಅಗತ್ಯವೆಲ್ಲಿದೆ ?'

'ವಿಜ್ಞಾನದಲ್ಲಿ ಏನನ್ನು ಕಲಿಸಬೇಕು, ಏನನ್ನು ಬಿಡಬೇಕು ಎಂದು ನಿರ್ಧರಿಸುವುದಕ್ಕೆ ಈ ಅಂಗಡಿಕಾರರು, ಹೊಟೆಲ್‌ನವರು, ನೆಲ ಉತ್ತುವವರು, ಮಠದ ಸ್ವಾಮಿಗಳು ಇಂತಹವರಿಗೆ ಏನು ಅಧಿಕಾರ ?'

'ದೇಶ ಮುಂದುವರಿಯುವುದಕ್ಕಾಗಿ ಇರುವ ವಿದ್ಯಾವ್ಯವಸ್ಥೆಯನ್ನು, ಈ ಹಳೆಯ ಮತೀಯ ಕಟ್ಟರವಾದಿಗಳು, ಈ ವಿಜ್ಞಾನದ ಹೆಸರು ಕೇಳದ ಈ ಜನ, ಏಕೆ ಕೆಡಿಸಬೇಕು ?'

'ಈ ವಿಕಾಸವಾದವು ವಿಜ್ಞಾನವೆಂಬ ಹೆಸರಿನಲ್ಲಿ ಹರಡುತ್ತಿರುವುದರಿಂದ ಅಪರಾಧಗಳು ಹೆಚ್ಚುತ್ತಿವೆ. ನೀತಿ ಕೆಡುತ್ತಿದೆ. ದೇವರಲ್ಲಿ ನಂಬಿಕೆ ಹೋಗುತ್ತಿದೆ. ಹೀಗೆ ನಾಸ್ತಿಕತೆ ಬೆಳೆದು, ಕಮ್ಯೂನಿಸಂ ನಮ್ಮನ್ನು ನುಂಗುವವರೆಗೂ ನಾವು ಕಾಯಬಾರದು.'

'ದೇವರ ಮಹಾಮಹಿಮೆಯನ್ನು ಅಲ್ಲಗಳೆಯುವ ಧೈರ್ಯ ಇವರಿಗೆ ಸೈತಾನನಿಂದಲೆ ಬಂದಿರುವುದು ಸಾಧ್ಯ.'

ಸ್ಕೋಪ್ಸ್ ತನ್ನ ಮೊಕದ್ದಮೆಯನ್ನು, ರಾಜ್ಯ ಸಂಹಿತೆಯ ಪ್ರಕಾರ ಕಳೆದುಕೊಂಡ. ಅವನು ನೂರು ಡಾಲರ್ ದಂಡ ತೆರುವ ಶಿಕ್ಷೆಯನ್ನೂ ಪಡೆದ. ಆದರೆ ಜನತೆಯ ಮನಸ್ಸಿನಲ್ಲಿ, ವಿಕಾಸವಾದ ಒಂದು ವೈಜ್ಞಾನಿಕ ಸತ್ಯವಿರಬೇಕೆಂಬ ಅಭಿಪ್ರಾಯ ಬೇರುಬಿಟ್ಟಿತು. ಸಂಪ್ರದಾಯವಾದಿಗಳು ಶಿಥಿಲಗೊಂಡ ಬೈಬಲ್ ಜ್ಞಾನವನ್ನು ಜನಗಳಲ್ಲಿ ಹೆಚ್ಚಿಸುವುದಕ್ಕೆ ಬಹಳ ಪರಿಶ್ರಮ ತೆಗೆದುಕೊಳ್ಳಲಾರಂಭಿಸಿದರು. ಈ ಮೊಕದ್ದಮೆಗೆ 'ಕೋತಿ ಕೇಸು' ಎಂದು ಹೆಸರಿಟ್ಟು ಅವಹೇಳನ ಮಾಡಿದರು. 'ದೇವನನ್ನು ಈ ವಿಶ್ವದಿಂದ ಹೊರಗೋಡಿಸುವ ಪ್ರಯತ್ನ ವಿಫಲ' ಎಂದು ಅಣಕವಾಡಿದರು. ಕೆಲವು ದಕ್ಷಿಣ ರಾಜ್ಯಗಳು ಈ ಗೆಲುವಿನ ಭರವಸೆಯಲ್ಲಿ ತಮ್ಮಲ್ಲಿಯೂ ಹೊಸ ಹೊಸ ನಿರ್ಬಂಧಗಳನ್ನು ವಿಜ್ಞಾನದ ಕಲಿಕೆಯ ಮೇಲೆ ಹೇರಿದವು. ಕೆಲವರು ಜೀವಶಾಸ್ತ್ರವನ್ನು ಪೂರ್ಣವಾಗಿ ತೆಗೆದುಹಾಕಿದರು. ಟೆನಿಸಿಯ ರಾಜ್ಯ ವಿಧಾನಸಭೆಯಲ್ಲಿ ಒಬ್ಬ ವಿಧಾಯಕ, ಸಭೆಗೆ ಒಂದು ಕೋತಿಯನ್ನು ಹಿಡಿದುತಂದು 'ನಿಮ್ಮ ಅಪ್ಪ' ಎಂದು ಎಲ್ಲರಿಗೂ ಪರಿಚಯ ಮಾಡಿಕೊಡುವ ಲೇವಡಿ ಮಾಡಿದ.

೧೯೬೭ರಲ್ಲಿ ಟೆನಿಸಿಯಲ್ಲಿಯ ಇನ್ನೊಂದು ಶಾಲೆಯಲ್ಲಿ, ವಿಕಾಸವಾದ ಹೇಳಿಕೊಟ್ಟನೆಂಬ ಅಪರಾಧಕ್ಕೆ ಶಿಕ್ಷೆಯಾಗಿ ಒಬ್ಬ ಉಪಾಧ್ಯಾಯನನ್ನು ಕೆಲಸದಿಂದ ವಜಾ ಮಾಡಿದರು. ಅರಕಾನ್ಸಾಸ್‌ನ ಸಣ್ಣ ಊರು ಲಿಟಲ್‌ರಾಕ್‌ನಲ್ಲಿ ಒಬ್ಬ ದಿಟ್ಟ ಉಪಾಧ್ಯಾಯಿನಿ ಕೋರ್ಟಿನಲ್ಲಿ ವಾದಮಾಡಿ ಸ್ಥಳೀಯ ನ್ಯಾಯಾಧೀಶರಿಂದ ವಿಕಾಸವಾದದ ಬಗ್ಗೆ ಚರ್ಚೆ ಮಾಡುವ ಅಧಿಕಾರ ಪಡೆದುಕೊಂಡಳು. ಕಡೆಗೆ ೧೯೬೮ರಲ್ಲಿ ಈ ವಿಷಯ ಸುಪ್ರೀಂಕೋರ್ಟಿನಲ್ಲಿ ಮೊಕದ್ದಮೆಯಾಗಿ ಬರುವಷ್ಟು ಸಫಲತೆ ಪಡೆಯಿತು. ವಿಕಾಸವಾದವನ್ನು ಪಠ್ಯಕ್ರಮದಿಂದ ತೆಗೆದುಹಾಕಿರೆಂದು ಉಪಾಧ್ಯಾಯರನ್ನು ನಿರ್ಬಂಧಿಸುವುದು ಸಂವಿಧಾನ ವಿರೋಧವೆಂದು ಸುಪ್ರೀಂಕೋರ್ಟು ತೀರ್ಪು ಕೊಟ್ಟಿತು.

ಇಷ್ಟಾದರೂ ವಿಕಾಸವಾದದ ಪೂರ್ಣಜ್ಞಾನವನ್ನು ಎಲ್ಲೆಡೆ ಕಲಿಸುವಂತಾಗಲಿಲ್ಲ. ಕಟ್ಟರ ಕ್ರಿಶ್ಚಿಯನ್ ಮತೀಯರ ಪ್ರಾಬಲ್ಯ ಕಡಿಮೆಯಾಗಲಿಲ್ಲ. ಬೈಬಲ್‌ನ ಜ್ಞಾನ, ವಿಕಾಸವಾದದ ಜ್ಞಾನಕ್ಕಿಂತ ಬಹಳ ಉತ್ಕೃಷ್ಟ ವಾದುದೆಂದು ಅವರು ಬಹಳ ಕಡೆ ಮತ್ತೆ ಮತ್ತೆ ಸಾರುತ್ತಲೇ ಇದ್ದರು. ಈ ಉದ್ದೇಶದ ಸಾಧನೆಗೆ ಅವರು ಉಪಯೋಗಿಸಿದ ಯುಕ್ತಿಗಳು ಮತ್ತು ಚಾಕಚಕ್ಯತೆ ಮೆಚ್ಚುವಂತಹವೇ.

**ವಿಜ್ಞಾನಕ್ಕೆದುರಾಗಿ ಮತ್ತೊಂದು ಹಾದಿ**

ರಷ್ಯಾ ಸ್ಪೂಟ್ನಿಕ್ ಅನ್ನು ಹಾರಿಸಿ ಬಾಹ್ಯಾಕಾಶದ ದ್ವಂದ್ವ ಸ್ಪರ್ಧೆಯಲ್ಲಿ ಅಮೆರಿಕಾವನ್ನು ಹಿಮ್ಮೆಟ್ಟಿಸಿದಾಗ ತಮ್ಮಲ್ಲಿ ವಿಜ್ಞಾನಕ್ಕೆ ಮನ್ನಣೆ ಕಡಿಮೆಯಾಗುತ್ತಿರುವುದೇ ತಮ್ಮ ಸೋಲಿಗೆ ಕಾರಣವೆನ್ನುವ ಭಯ ಕಾಡ ತೊಡಗಿತು. ಮಿಕ್ಕ ವಿಜ್ಞಾನಗಳೊಂದಿಗೆ ಜೀವ ವಿಜ್ಞಾನವೂ ಮುಖ್ಯ ವಿಷಯವಾಯಿತು. ಜೀವಶಾಸ್ತ್ರ ಮತ್ತು ಸಮಾಜಶಾಸ್ತ್ರ ಎನ್ನುವ ಹೊಸ ಹೆಸರುಗಳ

ಅಡಿಯಲ್ಲಿ ವಿಕಾಸವಾದವೂ ತಲೆಯೆತ್ತಿ ನಿಂತಿತು. ಹಳೆಯ ಪ್ರಾಣಿಶಾಸ್ತ್ರದ ಪಾಠಗಳಲ್ಲಿದ್ದ ಹಾಗೆ, ಬರಿದೆ ಉರು ಹೊಡೆಯುವ ಮಾಹಿತಿಗಳಷ್ಟೆ ಅಲ್ಲದೆ, ಲೈಂಗಿಕ ಜ್ಞಾನ, ಪ್ರಜನನ ವಿವರಗಳು, ಹಾಗೆಯೇ, ಸಾವಿರಾರು ವಿವರಗಳನ್ನು ಕೆಲವೇ ಮೂಲಕಾರಣಗಳ ಜ್ಞಾನದಿಂದ ಒಂದುಗೂಡಿಸಿ ನೋಡುವ, ಕಲಿಯುವ ಪದ್ಧತಿಗಳು ಬೆಳೆದುಬಂದವು. ವಿಜ್ಞಾನ ಬರಿಯ ಮಾಹಿತಿ ಜ್ಞಾನವಾಗದೆ, ಅನೇಕ ದೊಡ್ಡ ಸಮಸ್ಯೆಗಳನ್ನು ಪರಿಹರಿಸುವ ಸಾಧನವೂ ಆಗುವುದೆಂದು ರಾಷ್ಟ್ರೀಯ ವಿಜ್ಞಾನ ನೀತಿಗಳು ಸಾರತೊಡಗಿದವು.

ಹೀಗೆ ವಿಜ್ಞಾನದ ಕೈಮೇಲಾದರೂ ಬೈಬಲ್‌ವಾದಿಗಳಿಗೆ ಅದನ್ನು ಎದುರಿಸುವುದು ಕಷ್ಟವೆನಿಸಲಿಲ್ಲ. ಅಮೆರಿಕಾದ ಮಹಾಶಕ್ತಿ ಘಟಕಗಳಲ್ಲಿ ವಾಣಿಜ್ಯವೂ (ಅದರಲ್ಲೂ ಮಾರುಕಟ್ಟೆಯೂ) ಒಂದೆಂದು ತರ್ಕಿಸಿಕೊಂಡ ದಕ್ಷಿಣ ರಾಜ್ಯಗಳಲ್ಲಿನ ತಂದೆ-ತಾಯಿಯರು, ಪುಸ್ತಕೋದ್ಯಮಿಗಳನ್ನು ಹೆದರಿಸಿ ಹೊಸ ವಿಷಯಗಳ, ಹೊಸಬಗೆಯ ಶಾಲಾ ಪಠ್ಯಪುಸ್ತಕಗಳು ಪ್ರಕಟವಾಗದಂತೆ ತಡೆಹಿಡಿದರು. ಈ ಸದವಕಾಶವನ್ನುಪಯೋಗಿಸಿಕೊಂಡು ರಾಷ್ಟ್ರೀಯ ವಿಜ್ಞಾನ ಪರಿಷತ್‌ನಿಂದ ಪ್ರೇರಿತವಾದ ಕೆಂಬ್ರಿಜ್ ವಿದ್ಯಾಲಯ, 'ಉಪಾಧ್ಯಾಯರುಗಳಿಗೆ ಗೈಡ್' ಎನ್ನುವ ರೂಪದಲ್ಲಿ ತಾನೆ ಹೊಸ ಪಠ್ಯಕ್ರಮವೊಂದನ್ನು ರಚಿಸಿ, ಪುಸ್ತಕ, ಚಿತ್ರಪ್ರದರ್ಶನ, ಟೇಪ್ ಮತ್ತು ಕ್ಯಾಸೆಟ್‌ಗಳಲ್ಲಿ ಉಪನ್ಯಾಸಮಾಲೆಗಳು, ವೈಜ್ಞಾನಿಕ ಬರಹಗಳು, ಲ್ಯಾಬೊರೇಟರಿ ಪ್ರದರ್ಶನಗಳು, ನಾಟಕರಂಗ ಪ್ರಯೋಗಗಳು ಇಂತಹವುಗಳಲ್ಲಿ ಎಲ್ಲರ ಆಸಕ್ತಿಯನ್ನು ಬೆಳೆಸಿತು. ಜೊತೆಗೆ ಪ್ರಾಣಿಗಳ ಚಲನೆ, ನಡೆವಳಿಕೆ, ಆದಿಮಾನವನ ಜೀವನ, ವಿವಿಧ ದೇಶಗಳ ಬುಡಕಟ್ಟು ಜನಾಂಗಗಳ ನಡೆ, ನುಡಿ, ಚರಿತ್ರೆಗಳ ಮೂಲಕ ಜನಗಳ ಮನೋಭಾವವನ್ನು ವಿಶಾಲಪಡಿಸಿ, ಮತೀಯ ಸಂಕುಚಿತ ಸಂಪ್ರದಾಯಗಳ ಪೊಳ್ಳನ್ನು ಬಿಚ್ಚಿ ತೋರಿಸಿತು. ಮಕ್ಕಳುಗಳಲ್ಲಿ ಬೆಳೆಯುತ್ತಿದ್ದ ವಿಜ್ಞಾನದತ್ತಣದ ಒಲವನ್ನು ಅರಿತುಕೊಂಡ ಚರ್ಚುಗಳು, ಸಂಪ್ರದಾಯಸ್ಥರಾಗಿದ್ದ ತಾಯಿತಂದೆಯರಲ್ಲಿ ಭಯವನ್ನು ಬಿತ್ತಿದವು : 'ನಿಮ್ಮ ಮಕ್ಕಳು ನೀತಿಗೆಡಬೇಕೆ ? ಮಕ್ಕಳು ತಂದೆತಾಯಿಯರಲ್ಲಿ, ಗುರುಹಿರಿಯರಲ್ಲಿ, ನಮ್ಮ ಪೂರ್ವಿಕರಲ್ಲಿ ಗೌರವ, ನಂಬಿಕೆಗಳನ್ನು ಕಳೆದುಕೊಳ್ಳಬೇಕೆ ?... ಶಾಲೆಗಳಲ್ಲಿ ಪೋಲಿ ಚಿತ್ರಗಳನ್ನು ನೋಡಬೇಕೆ ?... ಎಸ್ಕಿಮೊಗಳ, ಪ್ರಾಣಿಗಳ ಸ್ವಚ್ಛಂದ ಜೀವನದ ಬಗ್ಗೆ ಯಾರು ತಾನೆ ಏಕೆ ತಿಳಿದು ಕೆಡಬೇಕು ? ಮನಷ್ಯರೂ ಪ್ರಾಣಿಗಳಂತೆ ಆಗಬೇಕೇನು ?'

ವಿಜ್ಞಾನದ ಪ್ರಭಾವಕ್ಕೆ ಸಿಲುಕಿ, ಚರ್ಚಿನಿಂದ ಹೊರಗೆ ಹೋಗುತ್ತಿರುವ ಶಾಲಾಮಕ್ಕಳನ್ನು ಮತ್ತೆ ಚರ್ಚಿನೊಳಗೆ ತಂದುಕೊಳ್ಳುವ ಪ್ರಯಾಸದಲ್ಲಿದ್ದ ಚರ್ಚುಗಳು, ಬೈಬಲ್ ಅನ್ನು ಶಾಲೆಗಳಲ್ಲಿ ಕಲಿಸುವಂತಾಗಬೇಕೆಂದು ರಾಜ್ಯಗಳನ್ನು ಒತ್ತಾಯಿಸಿದವು. ಆದರೆ ಅಮೆರಿಕಾದ ಸಂವಿಧಾನದ ಮೊದಲ ತಿದ್ದುಪಡಿಯ ಅಡಿಯಲ್ಲಿ ಇದು ಸಾಧ್ಯವಿರಲಿಲ್ಲ. ಈ ತಿದ್ದುಪಡಿ ಹೇಳುವುದಿಷ್ಟೆ: 'ವಿಧಾನ ಸಭೆಗಳಾವವೂ, ಯಾವುದೇ ಒಂದು ಮತವನ್ನು ಅಥವಾ ಮತಾನುಷ್ಠಾನವನ್ನು ಗೌರವಿಸುವುದಕ್ಕಾಗಲಿ, ಮತದ ಆಚರಣೆಗಳನ್ನು ತಡೆಗಟ್ಟುವುದಕ್ಕಾಗಲಿ, ವಾಕ್ ಸ್ವಾತಂತ್ರ್ಯವನ್ನು ಮತ್ತು ಪತ್ರಿಕಾ ಮಾಧ್ಯಮಗಳ ಸ್ವಾತಂತ್ರ್ಯಗಳನ್ನು ಮೊಟಕು ಮಾಡುವುದಕ್ಕಾಗಲಿ ಯಾವ ಕಾನೂನನ್ನೂ ಮಾಡಬಾರದು.'

ಈ ವಿಧಿಯ ಅಂಗವಾಗಿ ಯಾವ ಸಾರ್ವಜನಿಕ ಸಭೆಯಲ್ಲೂ, ಕಡೆಗೆ ಶಾಲೆಗಳಲ್ಲಿಯೂ ಯಾವ ದೇವತಾ ಪ್ರಾರ್ಥನೆಯನ್ನು ಮಾಡುವ ಹಾಗಿಲ್ಲ; ಇನ್ನು ಬೈಬಲ್ ಕಲಿಸುವುದೆಲ್ಲಿ ಬಂತು ? ಈ ಸಂದಿಗ್ಧ ಸ್ಥಿತಿಯಲ್ಲಿ ಚರ್ಚುಗಳು ಹೊಸತೊಂದು ಯುಕ್ತಿಯನ್ನು ಹುಡುಕಿಟ್ಟುಕೊಂಡವು; ಮಿಕ್ಕ ದೇಶಗಳ ಸಂಪ್ರದಾಯಸ್ಥರೂ ಇದೇ ಯುಕ್ತಿಯನ್ನು ಈಗ ಬಳಸುತ್ತಿರುವುದನ್ನು ನಾವು ಕಾಣಬಹುದು.

**ಕ್ರಿಶ್ಚಿಯನ್ ವಿಜ್ಞಾನದ ಕಲ್ಪನೆ**

ಬೈಬಲ್‌ನಿಂದ ಕೆಲವು ವಿಷಯಗಳನ್ನು ಆಯ್ದು, ಅವು ಹಿಂದೆಯೆ ತಿಳಿದಿದ್ದ ವೈಜ್ಞಾನಿಕ ಸಿದ್ಧಾಂತವೆಂದೊ, ಪ್ರಮಾಣವೆಂದೊ ಪ್ರತಿಪಾದಿಸುವುದೇ ಈ ಯುಕ್ತಿ. ಬೈಬಲ್ಲಿನ ಜೆನೆಸಿಸ್ ಅಧ್ಯಾಯದ ವಿಷಯಗಳಿಗೆ ಸೃಷ್ಟಿವಾದ ಎಂದು ಹೆಸರಿಟ್ಟು ಅದನ್ನು ವಿಕಾಸವಾದಕ್ಕೆ ಪರ್ಯಾಯವಾಗಿ ಕಲಿಸಬೇಕೆಂದು ಚರ್ಚುಗಳು ಒಂದು ಚಳುವಳಿ ಪ್ರಾರಂಭಿಸಿದವು. 'ಸೃಷ್ಟಿಶಾಸ್ತ್ರ ಸಂಶೋಧನಾ ಸಂಸ್ಥೆ' ಎಂದು ಹೆಸರಿಟ್ಟು ಕ್ರಿಶ್ಚಿಯನ್ ಧರ್ಮದಲ್ಲಿ ಆಸ್ಥೆಯಿದ್ದ, ಹೆಸರುಮಾಡಿದ್ದ ಪ್ರೊಫೆಸರುಗಳನ್ನು ಸಂಶೋಧಕ ವಿಜ್ಞಾನಿ ಹುದ್ದೆಗಳಿಗೆ ನೇಮಕ ಮಾಡಿದವು. ರಾಷ್ಟ್ರೀಯ ವಿಜ್ಞಾನ ಸಂಸ್ಥೆಯ ಕೃಪಣ ಬಂಡವಾಳಕ್ಕೆದುರಾಗಿ ಧನವಂತ ಚರ್ಚುಗಳು, ಮಠಗಳು ಪೈಪೋಟಿ ನಡೆಸಿದವು. ಕ್ರಿಶ್ಚಿಯನ್ ಸೈನ್ಸ್ ಎಂಬ ಹೆಸರಿನಲ್ಲಿ ಸಂಶೋಧನಾಗಾರಗಳು, ಪತ್ರಿಕೆಗಳು, ಸುದ್ದಿಮಾಧ್ಯಮಗಳು ಹುಟ್ಟಿಕೊಂಡು ಭೌತಿಕ, ರಸಾಯನ, ಜೀವವಿಜ್ಞಾನಗಳೊಡನೆ ದೈವಸೃಷ್ಟಿವಾದ, ಅಧ್ಯಾತ್ಮಿಕವಾದ ಇವುಗಳ ಕಲಬೆರಕೆ ಮಾಡಿ, ಕ್ರಿಶ್ಚಿಯನ್ ಧರ್ಮ ಮತ್ತು ಬೈಬಲ್‌ನ ಪ್ರತಿಷ್ಠೆಯನ್ನು ಹೆಚ್ಚಿಸಿದವು. ಮತಪ್ರಸಾರ ಕೇಂದ್ರಗಳನ್ನು ಶತಮಾನಗಳಿಂದ ಪುಷ್ಟಿಗೊಳಿಸಿಕೊಂಡಿದ್ದ ಚರ್ಚುಗಳು ಮತ್ತು ಮಠಗಳು ವಿಜ್ಞಾನವನ್ನು ತಮ್ಮ ಕೈಗೊಂಬೆಯನ್ನಾಗಿ ಮಾಡಿಟ್ಟುಕೊಳ್ಳಲು ಪ್ರಯತ್ನಿಸಿದವು. ವೈಜ್ಞಾನಿಕ ಮನೋಭಾವವಿಲ್ಲದಿದ್ದರೂ, ಹೆಸರು, ಪ್ರತಿಷ್ಠೆ, ಐಶ್ವರ್ಯಗಳಿಗಾಗಿ ವಿಜ್ಞಾನವನ್ನು ವೃತ್ತಿಯಾಗಿ ಇಟ್ಟುಕೊಂಡಿದ್ದವರನೇಕರು, ಬೈಬಲ್ಲು 'ಸತ್ಯಗಳ ಗಣಿ'ಯೆಂದು, ಸಂಶೋಧನೆ ಮಾಡಿದಷ್ಟೂ ಆಧುನಿಕ ಜೀವನಕ್ಕೆ ನೆರವಾಗುವ ಜ್ಞಾನವನ್ನು ತುಂಬಿಕೊಡುವುದೆಂದು ಭರವಸೆ ಕೊಟ್ಟರು.

ಹೀಗೆ ಬೈಬಲ್ಲಿನಲ್ಲಿನ ಸೃಷ್ಟಿಕಥನವನ್ನು ವಿಜ್ಞಾನದ ಪಠ್ಯಪುಸ್ತಕಗಳಲ್ಲಿ ಮರಸಿಡುವ ಸಂಚು ಪ್ರಾರಂಭವಾಯಿತು. ವಿಕಾಸವಾದದ ಸರಣಿಯಲ್ಲಿ ಅಲ್ಲಲ್ಲಿ ಬಿಟ್ಟುಹೋಗಿರುವ ಕೊಂಡಿಗಳನ್ನು ಹಿರಿದುಮಾಡಿ, ಆ ವಾದ ಇನ್ನೂ ಒಂದು ಪ್ರಮೇಯ ಮಾತ್ರವೇ ಎಂದು ಎಲ್ಲೆಡೆಯೂ ಪ್ರಚಾರ ಮಾಡಿ, ದೈವಸೃಷ್ಟಿವಾದವೂ ಅಂತಹುದೆ ಒಂದು ಪ್ರಮೇಯವೆಂದು ತರ್ಕಮಾಡಿ, ಇವುಗಳ ತುಲನೆ ಎಲ್ಲಾ ಪುಸ್ತಕಗಳಲ್ಲೂ ಇರಬೇಕೆಂದು ಒಪ್ಪಿಸಿಯಾಯಿತು. ಸುಪ್ರೀಂಕೋರ್ಟಿನ ಆದೇಶ ಇಲ್ಲಿ ನಿರರ್ಥಕವಾಯಿತು. ಸೃಷ್ಟಿವಾದಿಗಳು ಈ ವಿಜಯದಿಂದ ಉತ್ತೇಜಿತರಾಗಿ, ಅನೇಕ ಸಂಘ ಸಮಾಜಗಳು, ಸಾಂಸ್ಕೃತಿಕ ಕೇಂದ್ರಗಳು, ಕ್ರಿಶ್ಚಿಯನ್ ಕಾಲೇಜುಗಳು, ಮ್ಯೂಸಿಯಮ್‌ಗಳು, ಲೈಬ್ರರಿಗಳು, ಮತವಿಜ್ಞಾನ ಸಮನ್ವಯ ಸಂಸ್ಥೆಗಳು, ಹಲವಾರು ಪತ್ರಿಕೆಗಳು, ಪುಸ್ತಗಳು, ಪ್ರಕಾಶನಗಳು ವಿಶ್ವವಿದ್ಯಾಲಯಗಳಲ್ಲಿ ಪ್ರೊಫೆಸರ್ ಹುದ್ದೆಗಳು, ಡಾಕ್ಟರೇಟ್ ವಿದ್ಯಾರ್ಥಿ ವೇತನಗಳು ಇತ್ಯಾದಿಗಳೆಲ್ಲ ಮತ ಪ್ರಚಾರ ಸಾಧಕಗಳಾಗಿ ಮತ್ತು ಮಾಧ್ಯಮಗಳಾಗಿ, ಮತೀಯ ಧನಸಂಗ್ರಹಕಾರರ ಮತ್ತು ಮಠಾಧಿಪತಿಗಳ ಆಶ್ರಯದಲ್ಲಿ ಪ್ರತಿಷ್ಠಿತವಾದವು. ಇವುಗಳಲ್ಲಿ ಅನೇಕವು ಇಂದಿಗೂ ಸಂಭ್ರಮದಿಂದ ವಿಜೃಂಭಿಸುತ್ತಿವೆ. ಇವುಗಳಲ್ಲಿನ ಅನೇಕ ಹಿರಿಯ, ಮಾನ್ಯ, ಸೃಷ್ಟಿವಾದಿ ವಿಜ್ಞಾನಿಗಳು, ನವಸಂಶೋಧಕ ಯುವ ವಿಜ್ಞಾನಿ ವರ್ಗಕ್ಕೆ ಬಿಡಿಸಲಾಗದ ಕಗ್ಗಂಟುಗಳಾಗಿ ಉಳಿದಿದ್ದಾರೆ.

ಇಷ್ಟಾದರೂ, ಜನಸಾಮಾನ್ಯರ ಮೇಲೆ ವಿಜ್ಞಾನದ ಪ್ರಭಾವ ಹೆಚ್ಚಾಗುತ್ತ ಹೋಯಿತು; ಮತೀಯರ ಹಿಡಿತ ಕಡಿಮೆಯಾಗುತ್ತ ಬಂದಿತು. ಇದರಿಂದ ಹತಾಶರಾದ ಮತೀಯರು ಹುಚ್ಚು ಸಾಹಸಗಳನ್ನು ಪ್ರಾರಂಭಿಸಿದರು. ೧೯೭೪ರಲ್ಲಿ ವರ್ಜಿನಿಯಾದ ಒಂದು ಬಡವರ್ಗದ ಸಮಾಜದಲ್ಲಿ, ಈ ಮತೀಯ ಸಂಸ್ಥೆಗಳು ಒಂದ ವಿಷಮ ಸನ್ನಿವೇಶವನ್ನು ಹುಟ್ಟುಹಾಕಿದವು. ಆಧುನಿಕ ಜೀವಶಾಸ್ತ್ರ, ಸಮಾಜಶಾಸ್ತ್ರಗಳನ್ನು ಕಲಿಸುವುದನ್ನು ವಿರೋಧಿಸಿ, 'ಈ ಪೋಲಿವಿದ್ಯೆ, ಈ ಮತಖಂಡನ ವಿದ್ಯೆ, ನಾಸ್ತಿಕ ವಿದ್ಯೆ ನಮ್ಮ ಮಕ್ಕಳಿಗೆ ಬೇಡ' ಎಂದು ಮಕ್ಕಳ ತಂದೆತಾಯಿಯರು ಬೀದಿಗಳಲ್ಲಿ ಘೋಷಿಸುತ್ತ ಆಂದೋಳನ ಪ್ರಾರಂಭಿಸಿದರು. ಮುಷ್ಕರ, ಚಳುವಳಿ, ಹೊಡೆದಾಟ, ಗೋಲಿಬಾರಿ, ಒಂದೆರಡು ಶಾಲಾ ಕಟ್ಟಡಗಳಲ್ಲಿ ಬಾಂಬ್ ಸ್ಫೋಟ, ಇಂತಹ ಅನಾಹುತಗಳೂ ನಡೆದವು. ನಡೆದುದೆಲ್ಲ ಶ್ರಮಜೀವಿಗಳ ಪರಿಸರದಲ್ಲೆ; ಶ್ರೀಮಂತರ ರಸ್ತೆಗಳಲ್ಲಲ್ಲ; ಚರ್ಚುಗಳ ದಿವ್ಯ ಭವ್ಯ ಆವರಣಗಳಲ್ಲಲ್ಲ. ವಿಜ್ಞಾನದ ಪರಿಚಯವಿಲ್ಲದ, ಕಾಲೇಜಿನ ಮೆಟ್ಟಲು ಹತ್ತದ ಪುರುಷರು, ಶಾಲೆಗಳಿಂದಲೂ ದೂರವಿದ್ದ ಮಹಿಳೆಯರು, ತಮ್ಮ ಮಕ್ಕಳ ಭವಿಷ್ಯದ ಕಾಳಜಿಯಿಂದಲೆ ಈ ಕಷ್ಟನೋವುಗಳನ್ನು ಅನುಭವಿಸಿದರು. ಈ ರಾಜಕೀಯ ಪರಿಸ್ಥಿತಿಯ ಲಾಭವನ್ನು ಪಡೆದ ಟೆನೆಸಿಯ ವಿಧಾನಸಭೆ, ೬೯-೧೫ ವೋಟುಗಳಿಂದ ಜೆನಿಸಿಸ್ ಅಧ್ಯಾಯವನ್ನು ಜೀವ ವಿಜ್ಞಾನದ ಕೋರ್ಸಿನಲ್ಲಿ ಒಂದು ಪರಾಮರ್ಶನ ಗ್ರಂಥವನ್ನಾಗಿ ಉಪಯೋಗಿಸಬೇಕೆಂದು ಅಂಗೀಕರಿಸಿತು; ಸೆನೆಟ್ ಸಹ ೨೮-೧ ವೋಟುಗಳಿಂದ ಅನುಮೋದಿಸಿತು. ವಿಜ್ಞಾನದ ಉಪಾಧ್ಯಾಯರುಗಳು ಜೆನಿಸಿಸ್ ಅನ್ನು ಹೆಸರಿಗಷ್ಟೆ ಉಲ್ಲೇಖಿಸಿದಾಗ, ಟೆನೆಸಿ ಮತ್ತು ಜಾರ್ಜಿಯ ರಾಜ್ಯಗಳು ವಿಕಾಸವಾದ ಮತ್ತು ಸೃಷ್ಟಿವಾದಗಳ ಪಾಠಗಳಿಗೆ ಸಮಕಾಲಾವಕಾಶದ ನಿಯಮವನ್ನು ೧೫೯-೩೦ ಮತ್ತು ೪೬-೭ ವೋಟುಗಳಿಂದ ಹೇರಿದವು.

ಅಮೆರಿಕಾದ ಸುಪ್ರೀಂಕೋರ್ಟು ತನ್ನ ಮುಂದೆ ಬಂದ ದೂರುಗಳಲ್ಲೆಲ್ಲ, ಹೀಗೆ ಮತೀಯ ಸಂಬಂಧಿತ ವಿದ್ಯೆಯನ್ನು ಶಾಲೆಗಳಲ್ಲಿ ಕಲಿಸುವುದು ಸಂವಿಧಾನ ವಿರುದ್ಧವೆಂದು ಮತ್ತೆ ಮತ್ತೆ ತೀರ್ಪು ಕೊಡುತ್ತಲೇ ಬಂತು. ಆದರೆ ಕೆಲವು ದಕ್ಷಿಣದ ರಾಜ್ಯಗಳು ಕಾನೂನಿನ ಛಿದ್ರಗಳಲ್ಲಿ ನುಸುಳಿಕೊಂಡು ತಮ್ಮ ಇಷ್ಟಾರ್ಥಗಳನ್ನೆ ಸಾಧಿಸುತ್ತಿದ್ದವು.

ಇತ್ತೀಚೆಗೆ, ೧೯೯೪ರಲ್ಲಿ ಪೆಲೋಜ಼ ಎನ್ನುವ ಒಬ್ಬ ಶಾಲಾ ಶಿಕ್ಷಕ, ಸುಪ್ರೀಂಕೋರ್ಟಿಗೆ ಹೊಸ ತರಹೆಯ ಸವಾಲು ಹಾಕಿದ. ವಿಕಾಸವಾದ ಕಲಿಸುವಂತೆ ಶಾಲೆ ಆದೇಶಿಸಿರುವುದು ತನ್ನ ಸ್ವಂತ ಮತಧರ್ಮ ಪಾಲಿಸಿಕೊಳ್ಳುವುದಕ್ಕೆ ಅಡಚಣೆಯಾಗಿರುವುದರಿಂದ, ತನಗೆ 'ಸಂವಿಧಾನದ ಮೊದಲ ತಿದ್ದುಪಡಿ' ಕೊಟ್ಟಿರುವ ಸ್ವಾತಂತ್ರ್ಯಕ್ಕೆ ಧಕ್ಕೆಯಾಗುತ್ತಿದೆಯೆಂದು ಅವನು ವಾದಿಸಿದ. ಸಂವಿಧಾನದ ಇದೇ ಅಂಶದಿಂದ ದೈವಸೃಷ್ಟಿವಾದವನ್ನು ನಿರಾಕರಿಸುತ್ತಿದ್ದ ಸುಪ್ರೀಂಕೋರ್ಟಿಗೆ ಈ ವಾದ 'ಗುರುವಿಗೆ ಕೊಟ್ಟ ತಿರುಮಂತ್ರ' ಆಯಿತು. ಈ ಆಘಾತದಿಂದ

ಎಚ್ಚತ್ತ ಆ ಉಚ್ಚತಮ ನ್ಯಾಯಾಲಯ ಮುಂದೆಂದೂ ಇಂತಹ ಮತೀಯವಾದಗಳು ವಿಜ್ಞಾನವನ್ನು ಕಡೆಗಣಿಸದಂತೆ ತೀರ್ಪು ಕೊಟ್ಟಿತು. ಹೀಗಾಗಿ ಈಗ ಸಂಯುಕ್ತ ಸಂಸ್ಥಾನಗಳ ಯಾವ ರಾಜ್ಯದಲ್ಲೂ ಯಾವ ಸಾರ್ವಜನಿಕ ವಿದ್ಯಾ ಸಂಸ್ಥೆಯಲ್ಲೂ ಎಂತಹ ಮತಪಾಠಗಳೂ ದೇವಸ್ತುತಿಗಳೂ ಬೈಬಲ್ ವಿಜ್ಞಾನದ ಬೋಧನೆಗಳೂ ನಡೆಯುತ್ತಿಲ್ಲ. ಆದರೆ ಚರ್ಚುಗಳು, ಮಠಗಳು, ಕ್ರಿಶ್ಚಿಯನ್ ವಿಜ್ಞಾನ ಸಂಸ್ಥೆಗಳು, ಬೈಬಲ್ ಸಂಶೋಧನಾ ಶಾಲೆಗಳು, ಪತ್ರಿಕೆಗಳು ಇಂತಹವುಗಳೆಲ್ಲ ತಮ್ಮ ಕಾರ್ಯಕಲಾಪಗಳನ್ನು ಅದ್ದೂರಿಯಾಗಿ ನಡೆಸುತ್ತಿವೆ. ಮತ್ತೆ ಯಾವ ಕಾನೂನಿನ ಹುಳುಕನ್ನು ಶೋಧಿಸಿಕೊಂಡು ಮತ್ತೆ ಯಾವಾಗ ನ್ಯಾಯಾಲಯದ ಮೆಟ್ಟಿಲು ಹತ್ತುವರೋ ಹೇಳಲಾಗುವುದಿಲ್ಲ.

**ಆಧುನಿಕ ಜೀವವಿಜ್ಞಾನದ ಪ್ರಭಾವ**

ಸಾವಿರಾರು ವರ್ಷಗಳಿಂದ ಮಾನವನನ್ನು ಕಾಡುತ್ತಿರುವ, ಅತಿಸಹಜ, ಅತಿಮುಖ್ಯ ಮೂಲಪ್ರಶ್ನೆಗಳು ಇವು : ಸೃಷ್ಟಿ, ಪ್ರಕೃತಿ (ಮುಖ್ಯವಾಗಿ ಸಸ್ಯ ಮತ್ತು ಪ್ರಾಣಿಗಳಲ್ಲಿನ ವೈವಿಧ್ಯತೆಗಳು), ಹುಟ್ಟು, ಸಾವು, ನೋವು, ನಡತೆ, ಕಾಮ, ಪ್ರೀತಿ, ಕೇಡಿಗತನ, ಮನಸ್ಸು, ಬುದ್ಧಿ, ಜ್ಞಾನದಾಹ, ಪ್ರಾಣಿದಯೆ, ಪರೋಪಕಾರ ಇತ್ಯಾದಿಗಳಿಗೆ ಕಾರಣಗಳು; ಅವುಗಳ ಪರಸ್ಪರ ಸಂಬಂಧಗಳು ಮತ್ತು ಅಂತರಗಳು. ಪ್ರತಿ ಮತಧರ್ಮವೂ ಈ ಪ್ರಶ್ನೆಗಳಿಗೆ ತನ್ನದೇ ಅನುಕೂಲ ಉತ್ತರಗಳನ್ನು ಊಹಿಸಿಟ್ಟುಕೊಳ್ಳುತ್ತದೆ. ಆ ಉತ್ತರಗಳು ಸರ್ವಜ್ಞನಾದ ದೇವರಿಂದಲೇ ಪಡೆದವೆಂದು ಸಾರುತ್ತವೆ. ಅವನ್ನು ಪ್ರಶ್ನಿಸುವವರೆಲ್ಲ ದೇವರ ಕಠಿಣ ಶಿಕ್ಷೆಗೆ ಗುರಿಯಾಗುವರೆಂದು ಹೆದರಿಸಿ, ಅಲ್ಪಸ್ವಲ್ಪ ಸುಧಾರಣೆಯ ಶಕ್ತಿಯನ್ನೂ ಯಾರಿಗೂ ಕೊಡದೆ, ತಾನೂ ಕಳೆದುಕೊಳ್ಳುತ್ತದೆ. ಇಂತಹ ದೈವಿಕ ಜ್ಞಾನ ಪಡೆದ ಕಾರಣಕ್ಕಾಗಿ, ತನ್ನ ಮತದವರು ಬೇರೆಲ್ಲ ಮತದವರಿಗಿಂತ ಶ್ರೇಷ್ಠರಾಗುತ್ತಾರೆಂದು ಜನರನ್ನು ನಂಬಿಸಿ ತನ್ನಲ್ಲಿ ಸೇರಿಸಿಕೊಳ್ಳುತ್ತದೆ. ಇಂತಹ ಊಹಾ ಮಾಹಿತಿಗಳಿಂದ ಜನರನ್ನು, ಅವರಿಗೆ ರಂಜಕವಾದ ಮತ್ತು ಅದ್ಭುತವಾದ ಕತೆ, ಕಾವ್ಯ, ಚಿತ್ರ, ಶಿಲ್ಪ, ನಾಟ್ಯತಂತ್ರ ಇತ್ಯಾದಿಗಳ ಮೂಲಕ ಒಲಿಸಿಕೊಳ್ಳುತ್ತದೆ. ಈ ಮಾನವಸಹಜ ಕಲೆಗಳನ್ನೂ ಮತದ ಅಡಿಯಾಳಾಗುವಂತೆ ಬರಿಯ ಮಾಧ್ಯಮಗಳ ಮಟ್ಟಕ್ಕೆ ಇಳಿಸಿ, ಅವುಗಳೆಲ್ಲದರ ಮೇಲೆ, ತನ್ನ ಸ್ವಾಮ್ಯವನ್ನು ಸ್ಥಾಪಿಸುತ್ತದೆ. ಪ್ರಕೃತಿಯ ಸೃಷ್ಟಿ ಮತ್ತು ನಿಯಮಗಳ ವಿಷಯದ ಅಸತ್ಯ ಕಲ್ಪನೆಗಳೊಂದಿಗೆ, 'ಮತಧರ್ಮವೇ ಉಚ್ಚ ಮನುಷ್ಯ ಸಂಸ್ಕೃತಿ', 'ಮತಧರ್ಮವೇ ಶ್ರೇಷ್ಠ ಮನುಷ್ಯಧರ್ಮ' ಎನ್ನುವ ಭ್ರಮೆಗಳನ್ನೂ ತನ್ನ ಅನುಯಾಯಿಗಳಲ್ಲಿ ಬಿತ್ತಿ ಬೆಳೆಸುತ್ತದೆ.

ಆದರೆ, ಪ್ರಮಾಣಿಸಬಲ್ಲ ವಿಚಾರಗಳಾದ ಸೃಷ್ಟಿ ಮತ್ತು ಪ್ರಕೃತಿಗಳ ಬಗ್ಗೆಯಂತು ವಿವಿಧ ಮತಗಳ ಉತ್ತರಗಳು ಬಹುಮಟ್ಟಿಗೆ ವಿಭಿನ್ನವಾಗಿರುವುದರಿಂದ, ಎಲ್ಲವೂ ನಂಬಲು ಅನರ್ಹವಾಗುತ್ತವೆ. ಹಾಗೆಯೇ ಬಹಳಷ್ಟು ಮತಗಳು ಅತಿವಿಶ್ವಾಸದಿಂದ ನಂಬಿರುವ, 'ದೈವಾರಾಧನೆಯು ಜ್ಞಾನ ಸಂಪಾದನೆಯ ಒಂದು ಉತ್ತಮ ಮಾರ್ಗ' ಎನ್ನುವ ಮಾತಂತೂ ಅಸತ್ಯವೇ ಎಂದು ದೃಢವಾಗುತದೆ.

ಈ ಮತವಿಧಾನಗಳಿಗೆ ವ್ಯತಿರಿಕ್ತವಾಗಿ, ವಿಜ್ಞಾನವು ಈ ಪ್ರಶ್ನೆಗಳೆಲ್ಲವಕ್ಕೂ ಉತ್ತರಗಳು ಇನ್ನೂ ಸಿಕ್ಕಿಲ್ಲವೆಂದು ಒಪ್ಪಿಕೊಳ್ಳುತ್ತದೆ. ತನ್ನ ತರ್ಕಬದ್ಧ, ಸುವ್ಯವಸ್ಥಿತ, ಪ್ರಯೋಗ ನಿರ್ದಿಷ್ಟ ಮಾರ್ಗಗಳಲ್ಲಿ ತಾನು ಪ್ರಮಾಣಿಸಿದಷ್ಟು ಸತ್ಯಗಳನ್ನು ಬಹಿರಂಗವಾಗಿ ಎಲ್ಲರೊಡನೆ ಹಂಚಿಕೊಂಡು, ಅವುಗಳ ಜ್ಞಾನದಿಂದ ಲಭಿಸುವ ಸುಖ ಸಂತೋಷ ಸಮೃದ್ಧಿಗಳನ್ನು ನಂಬಿದವರಿಗಷ್ಟೆ ಮೀಸಲಾಗಿಡದೆ, ಎಲ್ಲರಿಗೂ ಹಂಚುತ್ತ ಬಂದಿದೆ. ವಿಜ್ಞಾನದ ಬಹುಮುಖಿ ವಿಧಾನಗಳಲ್ಲಿ ಆಸಕ್ತಿಯುಳ್ಳವರೆಲ್ಲರ ಕ್ರಮಬದ್ಧ ಸತ್ಯಾನ್ವೇಷಣೆಗಳ ಪ್ರವಾಹ ಈಗ ಜೀವನ್ಮೂಲ ಪ್ರಶ್ನೆಗಳನ್ನೂ ಬಿಡಿಸಬಲ್ಲ ಘಟ್ಟವನ್ನು ಮುಟ್ಟಿದೆ. ಈಗ ಎಲ್ಲರೂ, ಯಾವ ಮತದ ಬೆಂಬಲ, ಸಹಾಯ, ಸಲಕರಣೆಗಳಿಲ್ಲದೆಯೆ ಪ್ರಮಾಣಿಸಬಲ್ಲ ಬಹಳಷ್ಟು ಉತ್ತರಗಳನ್ನು ತಿಳಿಯಬಹುದು.

ಡಾರ್ವಿನ್ನನ ವಿಕಾಸವಾದದಲ್ಲಿ ಮೊಳಕೆಯೊಡೆದ ಹಳೆಯ ಪ್ರಾಣಿಶಾಸ್ತ್ರ, ಕಳೆದ ಐದು ದಶಕಗಳಲ್ಲಿ ಸರ್ವಜೀವ ಸೃಷ್ಟಿಕರ್ತೃವಾದ ಡಿಎನ್ಎ, ಮತ್ತು ಇತ್ತೀಚಿನ ಜೆನೆಟಿಕ್ಸ್ (ಅನುವಂಶಿಕತಾ ವಿಜ್ಞಾನ), ಜಿನೋಮ್ (ಮಾನವ ಡಿಎನ್ಎಯ ಸಮಗ್ರ ಮಾಹಿತಿ) ಇವುಗಳಂತಹ ತಿರುಳಿನಾಳದ ತಂತ್ರ ಮತ್ತು ಜ್ಞಾನಗಳಿಂದ ಪರಿಪಕ್ವವಾಗಿ, ಈಗ ಒಂದು ಆಧುನಿಕ ಜೀವವಿಜ್ಞಾನವಾಗಿ ಬೆಳೆಯುತ್ತಿದೆ. ಇದು ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ, ಮಾನವ ವಿಕಾಸಶಾಸ್ತ್ರ, ಪ್ರಾಚ್ಯಶೋಧಶಾಸ್ತ್ರ, ವೈದ್ಯವಿಜ್ಞಾನ ಮತ್ತು ಚಿಕಿತ್ಸಾಶಾಸ್ತ್ರ, ಮನಃಶಾಸ್ತ್ರ ಇತ್ಯಾದಿ ಅನೇಕ ಹಳೆಯ, ಹೊಸ ವಿಜ್ಞಾನಾಂಗಗಳ ಮೇಲೆಲ್ಲ ಹೊಸ ಬೆಳಕು ಚೆಲ್ಲಿ ಅವುಗಳಲ್ಲಿ ಚದುರಿಹೋಗಿದ್ದ ಮಾಹಿತಿ, ಅರಿವುಗಳನ್ನೆಲ್ಲವನ್ನು ಒಂದು ಗೂಡಿಸಿ ಸಮಗ್ರ ಅರ್ಥ ಕೊಡುವಂತಹ ಜ್ಞಾನಸ್ರೋತ ವಾಗಿದೆ. ಈ ಜೀವವಿಜ್ಞಾನ ಅನೇಕ ಹಳೆಯ ಮತ್ತು ಹೊಸ ಮೂಲಪ್ರಶ್ನೆಗಳಿಗೆ ಇಂದು ಏಕೀಕೃತ ಉತ್ತರಗಳನ್ನು ಸಮರ್ಪಕವಾಗಿ ಕೊಡುತ್ತಿದೆ. ಇಷ್ಟಲ್ಲದೆ ಹಿಂದಿಗಿಂತ ಬಹುಪಟ್ಟು ಹೆಚ್ಚಾಗಿ ಈ ಜ್ಞಾನದಿಂದ ಅರ್ಜಿತವಾಗುತ್ತಿರುವ ಆಯುರಾರೋಗ್ಯ, ಸುಖ, ಸಮೃದ್ಧಿಗಳನ್ನು ಯಾವ ಭೇದಭಾವವಿಲ್ಲದೆ ಎಲ್ಲರಿಗೂ ಹಂಚುತ್ತಿದೆ.

ಇವೆಲ್ಲದಕ್ಕಿಂತ ಮುಖ್ಯವಾಗಿ, ಜೀವವಿಜ್ಞಾನ ಪ್ರಮಾಣಿಸಿರುವ ಪ್ರಸ್ತುತ ಸತ್ಯಗಳ ಕಿರು ಸಾರಾಂಶಗಳು ಇವು :

'ಸುಮಾರು ಮುನ್ನೂರೈವತ್ತು ಕೋಟಿ ವರುಷಗಳಷ್ಟು ಹಿಂದೆ, ಆಗಿನ ಅತಿಕ್ಷೋಭಿತ ಭೂಮಿಯಲ್ಲಿ, ಯಾವ ಪರಕರ್ತೃವಿನ ಕಾರಣ ಅಥವಾ ಸಹಾಯವಿಲ್ಲದೆಯೆ, ತನ್ನ ಪ್ರತಿಯನ್ನು ತಾನೇ ನಿರ್ಮಿಸಿಕೊಳ್ಳಬಲ್ಲ ಅಣುರಚನಾ ಕ್ರಮವೊಂದು ಸಂಭವಿಸಿತು. ಇದೇ ಪ್ರಥಮ ಜೀವಿ. ಈ ಏಕಜೀವಿಯ ಅನಂತಾನಂತ ಸಂತತಿಯು, ದೇಶಕಾಲ ವಿಭಿನ್ನತೆಗಳಿಂದ ಕೂಡಿದ ಮತ್ತು ವಿಚಲಿತ ಪ್ರಾಕೃತಿಕ ಪರಿಸರ ಮತ್ತು ಪರಿಸ್ಥಿತಿಗಳಲ್ಲೂ ಅಳವಡಿಕೆಯಾಗಿ ವೃದ್ಧಿಸುವಂತೆ, ಶಾಖೋಪಶಾಖೆಗಳಾಗಿ, ಯುಗಯುಗಗಳ ಕಾಲಘಟ್ಟ ಗಳಲ್ಲಿ, ವಿಕಸಿತವಾದ ವಿವಿಧ ರೂಪಾಂತರಗಳೇ ಈಗ ನಾವು ಕಾಣುತ್ತಿರುವ ಸಕಲ ಜೀವಿಗಳು ಮತ್ತು ಅವುಗಳ ವಿಚಿತ್ರ ವೈವಿಧ್ಯಮಯ ಸಂಪನ್ನತೆಗಳು. ಇವು ಯಾವುವೂ ಒಟ್ಟೊಟ್ಟಿಗೆ, ಒಂದೇ ಕಾರಣಕ್ಕೆ, ಯಾವುದೇ ಒಂದು ಕರ್ತೃವಿನಿಂದ, ಯಾವುದೇ ಉದ್ದೇಶಪೂರಕವಾಗಿ ಸೃಷ್ಟಿಯಾದವಲ್ಲ.'

'ಎಲ್ಲ ಜೀವಿಗಳಂತೆಯೆ ಒಂದು ಮಾನವ ವ್ಯಕ್ತಿಯೂ ತನ್ನ ತಾಯಿತಂದೆಯರಿಂದ ಸ್ವಭಾವ, ಬುದ್ಧಿ, ಕೌಶಲ್ಯ, ವಿದ್ಯೆ, ಜ್ಞಾನ, ವಿವೇಕ ಇತ್ಯಾದಿಗಳಿಗೆ ಸಂಬಂಧಪಟ್ಟ ಸುಗುಣ-ದುರ್ಗುಣಗಳನ್ನು ಅನುವಂಶಿಕವಾಗಿ ಜನ್ಮತಃ ಪಡೆಯಲಾಗುವುದಿಲ್ಲ. ತನ್ನದೇ ಜನನದ ನಂತರದ ಬೆಳವಣಿಗೆಯ ಪರಿಸರ-ಪರಿಸ್ಥಿತಿಗಳಿಗೆ ಅನುಗುಣವಾಗಿ, ಆ ವ್ಯಕ್ತಿ ಇವನ್ನು ಬೆಳೆಸಿಕೊಳ್ಳುತ್ತದೆ. ಹಾಗೆಯೇ ತನ್ನದೇ ಇಂತಹ ಗುಣಗಳನ್ನು ತನ್ನ ಸಂತತಿಗೂ ಅನುವಂಶಿಕವಾಗಿ ಜನ್ಮತಃ ಕೊಡಲಾಗುವುದಿಲ್ಲ. ಆದ್ದರಿಂದ, ಜನ್ಮದ ಆಧಾರದ ಮೇಲೆ ಕಟ್ಟಲ್ಪಟ್ಟ ಮತ, ಜಾತಿ, ಕುಲ, ವಂಶ, ವೃತ್ತಿ, ವ್ಯಕ್ತಿ, ಗುಣ ಕರ್ಮವಿಭಾಗಗಳು ಇಂತಹ ಯಾವುದೇ ನಂಬಿಕೆ, ನಿಯಮ, ನೀತಿ, ಧರ್ಮಗಳ ಮೂಲಕ, ಯಾರೂ ಯಾವುವೂ ಉಳಿದವಕ್ಕಿಂತ ಮೇಲುಕೀಳಾಗುವುದು ಅಸಂಭವ ಮತ್ತು ಹೀಗೆನ್ನುವುದು ಅವೈಜ್ಞಾನಿಕ.'

'ಒಂದು ವ್ಯಕ್ತಿಯು ಅನುವಂಶಿಕವಾಗಿ ಪಡೆಯುವ ಎಲ್ಲಾ ಗುಣಲಕ್ಷಣಗಳೂ, ಆ ವ್ಯಕ್ತಿಯ ಪುರುಷ ಪೂರ್ವಜರಿಂದ ಎಷ್ಟು ಪ್ರಭಾವಿತವಾಗುವುವೋ ಅದಕ್ಕೆ ಸರಿಸಮಾನವಾಗಿ ಸ್ತ್ರೀ ಪೂರ್ವಜರಿಂದಲೂ ಪ್ರಭಾವಿತ ವಾಗುವುವು. ಆದ್ದರಿಂದ ಎಲ್ಲಾ ಮತಗಳು ಪೋಷಿಸಿ ಬೆಳೆಸಿಟ್ಟಿರುವ ಪುರುಷ ಪ್ರಧಾನ ನೀತಿ, ಧರ್ಮ, ಅನುಷ್ಠಾನಗಳು ಅವೈಜ್ಞಾನಿಕವಾದವು.'

ಹೀಗಿರುವ ಮತ ವಿಜ್ಞಾನಗಳ ಶೀತಸಮರದಲ್ಲಿ, 'ಇದೇ ನಮ್ಮ ಸಂಸ್ಕೃತಿ, ಇದೇ ನಮ್ಮ ಚರಿತ್ರೆ' ಎನ್ನುವಷ್ಟು ಜನರನ್ನು ಮೋಹದಲ್ಲಿ ಸಿಲುಕಿಸಿದ್ದ ವಿಶ್ವದ ಎಲ್ಲ ಮತೀಯ ಪುರಾಣಗಳು ಈ ಹೊಸ ವೈಜ್ಞಾನಿಕ ಸತ್ಯಪರೀಕ್ಷೆಯಲ್ಲಿ ಅಳಿದುಳಿಯಬೇಕಾಗಿವೆ. ಹಳೆಯ ಮತಧರ್ಮಗಳು ಈಗಲಾದರೂ ತಮ್ಮ ಹಿಂದಿನ ಕಲ್ಪಿತ ಅಸತ್ಯಗಳನ್ನು ಹೊರಹಾಕಿ, ಹೊಸ ಪರಿಸ್ಥಿತಿಗನುಗುಣವಾಗಿ ಬದಲಾಗದಿದ್ದಲ್ಲಿ, ಬಹುಬೇಗ, ಹಿಂದಿನ ಬೃಹಜ್ಜೀವಿ ಡೈನೊಸಾರ್‌ಗಳ ಹಾಗೆ ಅಳಿದುಹೋಗಿಬಿಡುತ್ತವೆ.

ಇಂತಹ ನಂಬಲು ಕಷ್ಟವಾದ ಭವಿಷ್ಯವನ್ನು ಸೂಚಿಸುತ್ತಿರುವ ಕೆಲವು ಸರಳ, ಸ್ಥೂಲ ಅಂಶಗಳನ್ನಾದರೂ ಇಲ್ಲಿ ಗಮನಿಸುವುದು ಅಗತ್ಯ. ಕಳೆದ ಕೆಲವು ದಶಕಗಳಲ್ಲಿ ವಿಶ್ವಾದ್ಯಂತದ ಜನಸಮಾಜಗಳಲ್ಲಿ ಪರಂಪರಾನುಗತ ಮತವಿಶ್ವಾಸ, ಮತಾನುಚರಣೆಗಳು ಕ್ಷಯಿಸುತ್ತಿರುವುದು ಎಲ್ಲರಿಗೂ ಕಾಣುತ್ತಿರುವ ಪರಿಸ್ಥಿತಿ. ಇದರಿಂದ ಆತಂಕಗೊಂಡ ಮತಗಳು ತಮ್ಮ ಹಳೆಯ ನಂಬಿಕೆ, ರೂಢಿ, ಪದ್ಧತಿಗಳನ್ನು ಆಧುನಿಕ ವೇಷಭೂಷಣಗಳಿಂದ ಅಲಂಕರಿಸಿ, ಮತ್ತೆ ಮೇಲೆತ್ತಲು ಪ್ರಯತ್ನ ಮಾಡುತ್ತಿವೆ. ಹಾಗೆಯೇ ತಮ್ಮ ಸಾಮಾಜಿಕ ಶಕ್ತಿಯನ್ನು ಉಳಿಸಿಕೊಳ್ಳುವುದಕ್ಕಾಗಿ ರಾಜಕಾರಣಿಗಳೊಂದಿಗೆ ಶಕ್ತಿ ಹಂಚಿಕೊಳ್ಳುವ ಆಸೆಯಿಂದ ತಮ್ಮ ಜಾಯಮಾನಕ್ಕೆ ವಿರುದ್ಧವಾದ, ಮತ್ತು ಸ್ವಪ್ರತಿಷ್ಠೆಯ ಮೂಲಭೂತವಾದಕ್ಕೆ ವ್ಯತಿರಿಕ್ತವಾದ, ಪ್ರಜಾತಂತ್ರವನ್ನು ಅಳವಡಿಸಿಕೊಳ್ಳಲು ಪ್ರಯಾಸ ಪಡುತ್ತಿವೆ.

**ವಿಜ್ಞಾನಿಗಳಲ್ಲಿ ಮತೀಯ ನಂಬಿಕೆಗಳು**

ಒಂದು ಸಮಾಜದಲ್ಲಿರುವ ದೈವಿಕ ಮತ್ತು ಮತೀಯ ನಂಬಿಕೆಗಳ ಏರಿಳಿತಗಳನ್ನು ಜನಮತ ಸಂಗ್ರಹದ ಮೂಲಕ ತಿಳಿದುಕೊಳ್ಳುವ ಪ್ರಯಾಸಗಳು ಅಮೆರಿಕಾದಲ್ಲಿ ಬಹಳ ದಶಕಗಳಿಂದ ನಡೆದುಬರುತ್ತಿವೆ. ೧೯೧೬ರಲ್ಲಿ ಲ್ಯೂಬಾ ಎಂಬಾತ ಅಮೆರಿಕಾದ ಆಗಿನ ವಿಜ್ಞಾನಿಗಳಲ್ಲಿ ಇಂತಹ ಗಣನೆಯನ್ನು ನಡೆಸಿದ. ಮತಗಳ ಮತ್ತು ಮತಪಂಗಡಗಳ ಭಿನ್ನತೆಗಳನ್ನು ಆದಷ್ಟು ಸರಳಗೊಳಿಸುವ ಸಲುವಾಗಿ ಮತ್ತು ವ್ಯಕ್ತಿಗತ ಅರ್ಥಗಳನ್ನು ಬಿಟ್ಟು ಬಹುಮಾನ್ಯ ಅರ್ಥಗಳನ್ನು

ಮಾತ್ರ ನಿಗದಿಗೊಳಿಸುವ ಉದ್ದೇಶದಿಂದ ಅವನು ಕೇಳಿದ ಪ್ರಶ್ನೆಗಳು ಇವು : 'ನಿಮ್ಮ ಧ್ಯಾನ, ಪೂಜೆಗಳಿಗೆ ಸ್ಪಂದಿಸಿ ಫಲ ಕೊಡುವ ದೇವರು ಇದ್ದಾನೆಯೆ ?' ಮತ್ತು 'ಆತ್ಮ ಅಮರವೇ ?' ಇವೆರಡೂ ಕ್ರಿಶ್ಚಿಯನ್ ಮತದ ಮುಖ್ಯ ಅಂಶಗಳು ಎಂದು ಅವನ ಸಿದ್ಧಾಂತ. ಶೇ. ೪೦ ವಿಜ್ಞಾನಿಗಳು ಮಾತ್ರ ಸಕಾರಾತ್ಮಕವಾಗಿ ತಮ್ಮ ನಂಬಿಕೆಯನ್ನು ಒಪ್ಪಿಕೊಂಡರು. ನಂಬುವವರಲ್ಲಿ ಬಹಳಷ್ಟು ಜನ ಎರಡನ್ನೂ ಒಪ್ಪಿಕೊಂಡರು. ಉಳಿದವರೆಲ್ಲ ಪೂರ್ಣವಾಗಿ ನಿರಾಕರಿಸಿದರು. ಈ ಗಣನೆಯನ್ನು ಸಂಶೋಧನ ಪರಿಣತ ವಿಜ್ಞಾನಿಗಳಿಗಷ್ಟಕ್ಕೆ ಸೀಮಿತಗೊಳಿಸಿದಾಗ ಒಪ್ಪಿಕೊಂಡವರ ಸಂಖ್ಯೆ ಶೇ. ೩೦ಕ್ಕೆ ಇಳಿಯಿತು.

೧೯೩೩ರಲ್ಲಿ ಈ ಜನಮತ ಸಂಗ್ರಹಣೆಗೆ ತೊಡಗಿದಾಗ, ಹಿಂದಿನ ಅರ್ಹತೆಗಳ ಪ್ರಕಾರದ ಜನ ಬಹಳ ಜಾಸ್ತಿ ಆಗಿದ್ದುದರಿಂದ ತಮ್ಮೊಡನಾಟದ ವಿಜ್ಞಾನಿಗಳ ಮನ್ನಣೆ ಪಡೆದು ಅಕಾಡೆಮಿಗಳ ಸದಸ್ಯತ್ವದ ಮಟ್ಟಕ್ಕೇರಿದ್ದ ವಿಜ್ಞಾನಿಗಳಿಗೆ ಮಾತ್ರ ಈ ಗಣನೆಯನ್ನು ಸೀಮಿತಗೊಳಿಸಬೇಕಾಯಿತು. ಆಗ ಶೇ. ೨೦ ವಿಜ್ಞಾನಿಗಳಷ್ಟೆ ದೈವ ಮತ್ತು ಆತ್ಮಗಳಲ್ಲಿ ತಮ್ಮ ನಂಬಿಕೆಯನ್ನು ವ್ಯಕ್ತಗೊಳಿಸಿದರು. ೧೯೯೭ರಲ್ಲಿ, ನಾಸ್ತಿಕ ವಿಜ್ಞಾನಿ ಲಾರ್ಸನ್ ಮತ್ತು ಆಸ್ತಿಕ ವಿಜ್ಞಾನಿ ವಿಥ್ಯಾಂ ಸೇರಿ ನಡೆಸಿದ ಗಣನೆಯಲ್ಲಿ, ಇಂತಹ ಅಕಾಡೆಮಿ ಮಾನ್ಯ ವಿಜ್ಞಾನಿಗಳಲ್ಲಿ ಶೇ. ೯೦ ಮಂದಿ ಆರಾಧ್ಯ ಪ್ರಸನ್ನ ದೇವರು ಮತ್ತು ದೇಹತ್ಯಜಿತ ಆತ್ಮಗಳ ಇರುವಿಕೆಯನ್ನು ಪೂರ್ಣತಃ ನಿರಾಕರಿಸಿದರು. ಈ ಗಣನೆಯಲ್ಲಿಯೂ, ನಿರಾಕರಿಸಿದ ಜೀವವಿಜ್ಞಾನಿಗಳು ಶೇ. ೯೫; ನಿರಾಕರಿಸಿದ ಗಣಿತಜ್ಞರು ಶೇ. ೮೪ ಮಾತ್ರ.

ಜಗತ್ಪ್ರಸಿದ್ಧ ಜೀವವಿಜ್ಞಾನಿ ಅರ್ನಸ್ಟ್ ಮಯರ್, ಹಾರ್ವರ್ಡ್ ವಿಶ್ವವಿದ್ಯಾಲಯದ ತನ್ನ ಸಹಚರ ವಿಜ್ಞಾನಿಗಳಲ್ಲಿ ತಾನು ನಡೆಸಿದ ಸುದೀರ್ಘ, ವ್ಯಕ್ತಿಶಃ ಸಮೀಕ್ಷಣೆಯಲ್ಲಿ, ಶೇ. ೯೯.೫ ವಿಜ್ಞಾನಿಗಳು ಪೂರ್ಣ ನಾಸ್ತಿಕರೆಂದು ನಿರ್ಧರಿಸಿ ವರದಿ ಮಾಡಿದ್ದಾನೆ. ಅವರಲ್ಲಿ ಬಹಳಷ್ಟು ಜನ್ಮತಃ ನಾಸ್ತಿಕರೆಂದು, ಉಳಿದವರು ಪ್ರಪಂಚದ ಪರಿಶೀಲನೆ ಮತ್ತು ಅನುಭವಗಳಿಂದ ನಾಸ್ತಿಕರಾದರೆಂದೂ ಹೇಳಿದ್ದಾನೆ. ಇಲ್ಲಿಯೂ, ದೇವರಲ್ಲಿ ನಂಬಿಕೆ ಉಳಿಸಿಕೊಂಡವರಲ್ಲಿಯೂ, ಎಲ್ಲರೂ ಡಾರ್ವಿನ್ನನ ವಿಕಾಸವಾದ ಪೂರ್ಣಸತ್ಯವೆಂದೂ, ತಮ್ಮ ಸ್ವಂತ ದೈವಿಕ ಚಿಂತನೆಗೆ ಈ ನಂಬಿಕೆ ಎಂತಹ ಅಡ್ಡಿಯನ್ನೂ ತಂದಿಲ್ಲವೆಂದು ಹೇಳುತ್ತಾರೆ. ಡಿಎನ್‌ಎಯ ಸೃಷ್ಟಿಯ ನಂತರ ಜೀವವಿಕಾಸದಲ್ಲಿ ದೇವರ ಕೈವಾಡ ಎಲ್ಲೂ ಕಂಡುಬರುವುದಿಲ್ಲವೆಂದೂ ಎಲ್ಲರೂ ಹೇಳುತ್ತ ಬಂದಿದ್ದಾರೆ. ಬಹಳಷ್ಟು ಕ್ರಿಶ್ಚಿಯನ್ ಪಂಗಡಗಳು ಇದನ್ನು ಒಪ್ಪಿಕೊಳ್ಳುವಷ್ಟು ಜಾಗೃತರಾಗಿದ್ದಾರೆ.

ವಿವಿಧ ಮತಗಳು ವಿವಿಧ ಪ್ರದೇಶಗಳಲ್ಲಿ ವಿಧವಿಧ ವಿಧಾನಗಳಲ್ಲಿ, ಎಂದೆಂದಿಗೆ, ಹೇಗೆ ಹೇಗೆ ಕ್ಷೀಣಿಸುವುವು ಎಂಬುದನ್ನು ಕಾದು ನೋಡಬೇಕು. ಆದರೆ ಈಗ ಕಾಣುತ್ತಿರುವ ಒಂದು ದಿಟ್ಟ ದಿಶೆಯಂತೆ, ಮತವೊಂದು ಕ್ಷೀಣಿಸುವುದು, ಹಳೆಯ ಚರಿತ್ರೆಗಳು ಸೂಚಿಸುತ್ತಿದ್ದಂತೆ, ಅನ್ಯಮತಗಳೊಡನೆಯ ಯುದ್ಧಗಳಿಂದಲ್ಲ, ವಿಜ್ಞಾನಕ್ಕೆ ಎದುರಾಗಿನ ಸಂಘರ್ಷದಿಂದ.

**ಡಾ|| ಎಂ. ಎನ್. ಕೇಶವರಾವ್**
೩.೮೮, ವೆಂಕಟೇಶದಾಸ್ ರಸ್ತೆ, ಪದ್ಮನಾಭನಗರ, ಬೆಂಗಳೂರು-೭೦




(ಗಝಲ್)

ತನ್ನಂತರಂಗವನು ದಿನವೂ ದಿಟ್ಟಿಸಿ ನೋಡುತ್ತಿದ್ದ ಎಲೆಯೊಂದು ನಿಶ್ಯಬ್ದವಾಗಿ ಉರುಳಿ ಬಿದ್ದಿತು ನದಿಗೆ
ಸಾಕಿ, ನನ್ನ ಜೀವ ನುಂಗಿ ಮಲಗಿರುವ ಅವಳ ಬೈತಲೆಯಲಿ ಚಂದ್ರನನು ಮುಕ್ಕಾಗಿಸಿದೆ ಬಿದಿಗೆ

ಹಳೆಯ ಪುಸ್ತಕದಂಥ ಅವ್ವನ ಸೀರೆಯ ಕಮ್ಮನೆ ವಾಸನೆಗೆ ಹೇಗೆ ಹಿಗ್ಗುತ್ತಿದೆ ಜೀವ
ಒಡೆದ ಬಳೆಚೂರಿನಲಿ ಕಳೆದುಹೋಗಿರುವ ಅವಳ ಕನಸನ್ನು ಮರಳಿ ದೊರಕಿಸಿಕೊಡು ದೇವ

ಯಾರು ಕಳಿಸಿದರೆಂದು ಹೆಸರು ಹೇಳದೆ ಹಾರಿಹೋಯಿತು ಮುಂಜಾನೆ ಮನೆ ಮೇಲೆ ಕೂತಿದ್ದ ಹಕ್ಕಿ
ಇರುಳ ತೇರನಿಳಿದವಳು ನೀನು, ಬಲಗಾಲಿಲೇ ನನ್ನೆದೆ ತುಳಿದು ಚಂದ್ರಮನ ತಿಂದ ತುಟಿಯಲ್ಲಿ ಮುಗುಳ್ನಕ್ಕಿ

ಬಿಂಬ ತೋರುವ ಕನ್ನಡಿಯನಾರೋ ಕಸಿದರೆಂದು ಅವಳಿಗೇಕೆ ಸಾಕಿ, ನನ್ನ ಕಣ್ಣು ಕಳೆಯುವ ಮುನಿಸು
ಏಳು ಬೆಟ್ಟಗಳಾಚೆಯ ಪ್ರಾಣ ಪಕ್ಷಿ ಅವಳು : ಆ ಕಣ್ಣೊಳಗೆ ಜ್ವಲಿಸುತಿದೆ ಗಾಯಗೊಂಡಿರುವ ನನ್ನ ಮನಸು

ಅಡಿ ಇಟ್ಟಲ್ಲಿ ಒಲವ ನುಡಿ ಉಣಿಸುವ ಎಷ್ಟೋ ಜೀವಗಳ ಹರಕೆ ನನ್ನ ಬೆನ್ನ ಹಿಂದಿದೆ
ಬರೀ ನೋಟದಲಿ ನೀನು ಬಿಡಿಸಿ ಹೋಗಿರುವ ನೋವಿನ ಹಾದಿ ಕರಗದೆ ಈ ಕಣ್ಣ ಮುಂದಿದೆ

ನಿರಾಕರಣೆಯ ನಂತರವೂ ನಾ ನಿನ್ನ ಬಯಸಿದರೆ ನನ್ನ ರಕ್ತ ನಾನೇ ಕುಡಿದು ಬದುಕಿದಂತೆ
ಎದೆಯಲೊಂದು ಮಮತೆ ಹಣತೆ ಇಲ್ಲದ ಈ ಜನರ ನಡುವೆ ನೀ ಹೇಗೆ ಬದುಕಿಯೆ ಎಂಬುದು ನನಗಿರುವ ಚಿಂತೆ

ನನ್ನೆದೆಯ ಕುಲುಮೆಯ ಮೇಲೆ ಉರಿ-ಹುರಿದ ಕನಸುಗಳನು ಸಖಿ, ಮೌನದಿಂದಲೆ ಮಣ್ಣುಗೂಡಿಸು
ದೇವರನು ಎದುರಿಸಲಾದರೂ ಈ ಪಾಪಿಯ ನೋಟದೊಂದಿಗೆ ಕೊನೆಗೊಂದು ಬಾರಿ ನೀ ಕಣ್ಣುಕೂಡಿಸು

**ತುರುವೀಹಾಳ ಚಂದ್ರು**
ಕೇರಾಫ್ : ಡಾ|| ಎಲ್. ಟಿ. ನಾಯಕ, 'ವಿಜಯಜ್ಯೋತಿ', ಬಸವನಗರ-೧
ಹಳಿಯಾಳ ರಸ್ತೆ, ಧಾರವಾಡ - ೫೮೦ ೦೦೩

ಟೋಪಿ ಎಂದರೇನೆಂದು ನಾವೆಲ್ಲರೂ ತಿಳಿದವರೇ. ತಲೆಯ ಮೇಲೊಂದು ಟೋಪಿ ಇದ್ದರೆ ಬಿಸಿಲ ಬೇಗೆಯಿಂದ ರಕ್ಷಣೆಯಾದರೂ ಸಿಕ್ಕೀತೆಂದೊ, ಆಯಾ ವೃತ್ತಿಗೆ ತಕ್ಕಂತೆ ಟೋಪಿ ಧರಿಸುವುದು ಸಂಪ್ರದಾಯವೆಂದೋ ಟೋಪಿ ತೊಡುವುದು ರೂಢಿಯಾಗಿಹೋಗಿದೆ. ಇಂತಹ ಟೋಪಿಗಳಲ್ಲಿ ಗಾಂಧಿ ಟೋಪಿಯೂ ಒಂದು. ಇದು ಇಂದಿಗೂ ನಮ್ಮ ರಾಜಕಾರಣಿಗಳ ತಲೆಯಲ್ಲಿ ರಾರಾಜಿಸಿ ಗಾಂಧೀಜಿಯವರ ಪ್ರಾಮಾಣಿಕತೆಯನ್ನು ಅಣಕಿಸುತ್ತಿದೆ. ಈ ಟೋಪಿಯನ್ನು ತಟ್ಟಿದರೆ ಆಯತಾಕಾರಕ್ಕೆ ತಿರುಗುತ್ತದೆ. ಜೋಕರ್ ಟೋಪಿಯಂತೂ ನಮ್ಮ ಊರಿನ ಸಂತೆಯಲ್ಲಿ ಕಡ್ಲೆ ಮಾರಲು ಮಾಡುವ ಕಾಗದದ ತೊಟ್ಟೆಯಂತೆ ಒಂದು ಬದಿ ಬಾಣಲೆಯಂತೆ ಅಗಲವಾಗಿದ್ದರೆ ಇನ್ನೊಂದು ಬದಿ ಗುಂಡುಸೂಜಿಯ ಮೊನೆಯಂತೆ ಚೂಪಾಗಿರುತ್ತದೆ. ಇದನ್ನು ತಟ್ಟಿದರೆ ತ್ರಿಕೋನಾಕಾರ ತಾಳುತ್ತದೆ. ಇನ್ನು ಬಲೆ ಟೋಪಿಯನ್ನು ಹೆಚ್ಚಾಗಿ ಮುಸ್ಲಿಮರೇ ಧರಿಸುತ್ತಾರೆ. ಈ ಬಲೆ ಟೋಪಿಯಿಂದಾಗಿ ಬಿಸಿಲಿನಿಂದ ರಕ್ಷಣೆ ಸಿಗುವುದು ಸ್ವಲ್ಪ ಕಷ್ಟವೇ, ಯಾಕೆಂದರೆ ತೂತುಗಳ ಮೂಲಕ ಬಿಸಿಲು ಒಳಪ್ರವೇಶ ಪಡೆಯುತ್ತದೆಯಲ್ಲ ! ಈ ಟೋಪಿಯನ್ನು ತಟ್ಟಿದಾಗ ಅರ್ಧಗೋಳಾಕಾರ ಉಂಟಾಗುತ್ತದೆ. ಇನ್ನು ನೇತಾಜಿಯವರ ಟೋಪಿ. ಇದು ಈಗ ಪೋಲಿಸ್ ಟೋಪಿಯಾಗಿ ಮಿಂಚುತ್ತಿದೆ. ಇವನ್ನಂತೂ ತಟ್ಟುವುದು ಬಿಡಿ, ಮುಟ್ಟುವುದೂ ಸಾಧ್ಯವಿಲ್ಲ. ಅದು ಗುರ್ರೆನ್ನುತ್ತದೆ. ಅದು ತಲೆಯಲ್ಲಿದ್ದರೂ ಒಂದೇ, ಮೇಜಿನ ಮೇಲಿದ್ದರೂ ಒಂದೇ – ತನ್ನ ಆಕಾರವನ್ನಂತೂ ಕಳೆದುಕೊಳ್ಳುವುದೇ ಇಲ್ಲ. ಒಂದು ರೀತಿಯಲ್ಲಿ ಸ್ಪಂದನರಹಿತ ಟೋಪಿ ಇದು! ಈ ಟೋಪಿ ಜನಸಾಮಾನ್ಯರೊಂದಿಗೆ ಪೋಲಿಸರ ಭಾಷೆಯ ವಿಧಾನಕ್ಕೊಂದು ಭಾಷ್ಯದಂತಿದೆ. ಆದರೆ ಈ ಟೋಪಿಯ ಧೀರೋದಾತ್ತವಾದ ನಿಲುಮೆಯೇ ಅದೇನೋ ಒಂದು ಬಗೆಯ ಮೆಚ್ಚುಗೆಯನ್ನು ಮನದಲ್ಲಿ ಮೂಡಿಸುವುದು ಸುಳ್ಳಲ್ಲ. ಇಷ್ಟೆಲ್ಲ ಹೇಳಿದ ಮೇಲೆ ಈ ಟೋಪಿ ಜಪ ಪಠಿಸಿದರೆ ತಪ್ಪೇನಿದೆ ?

*- ತೊಟ್ಟರೆ ಶ್ರೀರಕ್ಷೆಯಾದೆ*
*ತಟ್ಟಿದರೆ ಗಣಿತಕ್ಕಾಧಾರವಾದೆ*
*ಅಡಿಮೇಲಾಗಿ ಕೈಗೆ ಬಂದರೆ ಭಿಕ್ಷಾ ಪಾತ್ರೆಯಾದೆ*
*ಅರೆರೆ ಮೋಸಕ್ಕೆ ನೀನೇ ಹೆಸರಾದೆ!*



ಹಾಂ, ಅಂದ ಹಾಗೆ ನಾನು ಹೇಳಬೇಕಾಗಿರುವುದು ಈ ಟೋಪಿಯ ಬಗ್ಗೆ ಅಲ್ಲ, ಟೋಪಿ ಹಾಕುವುದರ ಬಗ್ಗೆ ಅಲ್ಲವೆ ? ಟೋಪಿ ಹಾಕಲು ಅಳತೆಯೇ ಬೇಕಿಲ್ಲ, ಅದು ಫ್ರಿಫ್ರಿ ಆಜ್ಞೆ ಯಾಕೆಂದರೆ ಟೋಪಿಯ ವೈಶಿಷ್ಟ್ಯವೇ ಹಾಗೆ. ಮತ್ತೂ ಹೇಳಬೇಕೆಂದರೆ ಈ ಟೋಪಿಗೆ ಬಟ್ಟೆ ಬಿಡಿ, ತಲೆಯ ಅವಶ್ಯಕತೆಯೂ ಇಲ್ಲ. ಹಾಗಾಗಿಯೇ ಟೋಪಿ ಹಾಕಿಸಿಕೊಂಡವನಿಗೆ ಅದರ ಅನುಭವ ಮಾತ್ರ ದಕ್ಕುವುದು. ಅದು ಮುಟ್ಟಲು, ನೋಡಲು ಸಿಗುವುದಿಲ್ಲ ! ಇದೇನೋ ಧರ್ಮಜಿಜ್ಞಾಸೆಯ ಕಥನವೆಂದು ತಿಳಿದು ಮುಖ ಕಿವುಚಬೇಡಿ ಮಾರಾಯ್ರೆ ! ಈಗ ನಾವು ಟೋಪಿ ಹಾಕುವ ಕೆಲಸಕ್ಕೆ ಹೊರಡೋಣ. ವಿಚಿತ್ರವೆಂದರೆ ಟೋಪಿ ಹಾಕಿಸಿಕೊಂಡವ ನಾನು ಟೋಪಿ ಹಾಕಿಸಿಕೊಂಡೆ ಎಂದು ಹೇಳಬೇಕಾಗಿಯೇ ಇಲ್ಲ, ಆತನ ಸಪ್ಪೆ ಮೋರೆ ನೋಡಿಯೇ ಈತನಿಗೆ 'ಟೋಪಿ ಬಿದ್ದಿದೆ' ಎಂದು ಬಹಳ ಸುಲಭವಾಗಿ ಗುರುತಿಸಬಹುದು. ಇದಕ್ಕೆ ಟೋಪಿ ಹಾಕಿಸಿಕೊಂಡ ನಮ್ಮ ಸ್ವಾನುಭವವೂ ಸ್ವಲ್ಪಮಟ್ಟಿಗೆ ಸಹಾಯಕವಾಗಬಹುದು. ಯಾಕೆಂದರೆ ಬಹುಶಃ ಟೋಪಿ ಹಾಕಿಸಿಕೊಳ್ಳದವರ್ಯಾರೂ ಇರಲಾರರು. ನಾವು ಟೋಪಿ ಹಾಕಿಸಿಕೊಂಡ ಹೆಡ್ಡತನವೇ ನಾವು ಇತರರಿಗೆ ಟೋಪಿ ಹಾಕುವ ಜಾಣತನಕ್ಕೆ ಕಾರಣವಾಗಬಹುದು ! ಪ್ರಜಾಪ್ರಭುತ್ವವನ್ನು ಹೊಂದಿರುವ ನಮ್ಮ ದೇಶದಲ್ಲಿ ಪ್ರಜೆಗಳು ಸದಾ ಟೋಪಿ ಹಾಕಿಸಿಕೊಳ್ಳುವುದು ತೀರಾ ಸಾಮಾನ್ಯವಾದ ವಿಚಾರ. ಸಾಧಾರಣವಾಗಿ ಟೋಪಿ ಹಾಕುವುದಕ್ಕೂ ರಾಜಕಾರಣಕ್ಕೂ ನಾವು ನೇರ ಸಂಬಂಧವನ್ನು ಕಾಣುತ್ತೇವೆ. ಆದರೆ ಸದಾ ಟೋಪಿ ಹಾಕಿ ಅಭ್ಯಾಸವಾಗಿ ಹೋದ ರಾಜಕಾರಣಿಗಳ ತಲೆಗೇ ಟೋಪಿ ಹಾಕಿದ ಭೂಪನೆಂದರೆ ಕಾಡುಗಳ್ಳ ವೀರಪ್ಪನ್ ಮಾತ್ರ. ಇರಲಿ, ವಿಷಯ ಹೇಗಿದ್ದರೂ ತಾನು ಟೋಪಿ ಹಾಕಿಸಿಕೊಂಡಿದ್ದೇನೆಂದು ಯಾರೂ ಕೂಡ ಢಂಗೂರ ಸಾರುವುದಿಲ್ಲ. ಆದರೆ ಇಲ್ಲಿ ಇನ್ನೂ ಒಂದು ಕುತೂಹಲಕರ ಸಂಗತಿ ಇದೆ. ತೀರಾ ಇತ್ತೀಚೆಗೆ ಮಣಿಪಾಲದ ಟೋಪಿ ಕುಟುಂಬವೊಂದು ಸಾರ್ವಜನಿಕರ ಠೇವಣಿ ಹಣಗಳನ್ನು ಗುಳುಂ ಮಾಡಿ ಎಲ್ಲರಿಗೂ ಒಟ್ಟಿಗೇ ಟೋಪಿ ಹಾಕಿದ ಸಂಗತಿ ಜಗಜ್ಜಾಹೀರಾಯಿತು.

ಇವರಿಂದ ಟೋಪಿ ಹಾಕಿಸಿಕೊಂಡಿದ್ದ ನನ್ನ ಸ್ನೇಹಿತನೊಬ್ಬ ನನ್ನಲ್ಲಿ ಈ ವಿಷಯ ಹೇಳುತ್ತಾ "ನನ್ನ ಭಾವ, ಮಾವ ಎಲ್ಲರೂ ಟೋಪಿ ಹಾಕಿಸಿಕೊಂಡಿದ್ದಾರೆ" ಎಂದು ಹೇಳಿ ಸಮಾಧಾನಗೊಂಡ ! ಇದು ಬಹಳ ವಿಚಿತ್ರ, ಆದರೆ ಸತ್ಯ. ಸಾಧಾರಣವಾಗಿ, ಟೋಪಿ ಹಾಕಿಸಿಕೊಂಡವ ಮುಜುಗರಕ್ಕೊಳಗಾಗಿ ಪ್ರಚಾರಕ್ಕಿಷ್ಟಪಡುವುದಿಲ್ಲ. ಒಂದು ವೇಳೆ ಅದು ಪ್ರಚಾರವಾದರೆ ಆತ ತನ್ನೊಂದಿಗೆ ಟೋಪಿ ಹಾಕಿಸಿಕೊಂಡವರ ಪಟ್ಟಿಯನ್ನೇ ಬಿಡುಗಡೆ ಮಾಡಿ ಏನೋ ಒಂದು ಸಮಾಧಾನದ ನಿಟ್ಟುಸಿರುಬಿಡುತ್ತಾನೆ ! ಇದು ಬಹುಶಃ ನಮ್ಮ ಸಾಮಾಜಿಕ ಜೀವನದ ಕುರುಹಾಗಿದ್ದೀತು !

ಇನ್ನು ಟೋಪಿ ಹಾಕುವ ಕಾಯಕದಲ್ಲಿ ಯಾರು ನಿಸ್ಸೀಮರೆಂದು ತಿಳಿಯಲು ಬಹಳ ಕಷ್ಟ. ಯಾಕೆಂದರೆ ಸಾಮಾನ್ಯವಾಗಿ ವಕೀಲರು ಕಕ್ಷಿಗಾರನಿಗೆ, ವ್ಯಾಪಾರಿಗಳು ಗ್ರಾಹಕರಿಗೆ, ಪೂಜಾರಿಗಳು ದೇವರ ಭಕ್ತರಿಗೆ, ವಿದ್ಯಾರ್ಥಿಗಳು ಅಧ್ಯಾಪಕರಿಗೆ ಟೋಪಿ ಹಾಕುತ್ತಿರುತ್ತಾರೆ. ಈ ಟೋಪಿ ಹಾಕುವ ಕಲೆ ಪುರಾಣಕಾಲದಿಂದಲೇ ಚಾಲ್ತಿಯಲ್ಲಿದೆ. ಮಹಾವಿಷ್ಣು, ನಾರದ ಮತ್ತು ಪರ್ವತರಿಗೆ ಕೋಡಗದ ಮುಖದವರಾಗಿ ಶ್ರೀಮತಿಗೆ ಕಾಣಿಸಲು ಮಾಡಿದ ವ್ಯವಸ್ಥೆ ಟೋಪಿ ಹಾಕುವ ಪ್ರಕ್ರಿಯೆಯೇ ತಾನೆ ?



# ಟೋಪಿ ಹಾಕುವುದು



ಸುಬ್ರಹ್ಮಣ್ಯ ಎಸ್. ಆರ್.



ಇನ್ನು ಶ್ರೀರಾಮ ವಾಲಿಯನ್ನು ಕೊಂದದ್ದೂ ಟೋಪಿಯಡಿಯ ಕಾರ್ಯಾಚರಣೆಯೇ. ಶ್ರೀಕೃಷ್ಣ ಕೌರವ ಪಾಳಯಕ್ಕೇ ಟೋಪಿ ಹಾಕಿ ಪಾಂಡವರ ತಲೆಗೆ ಟೋಪಿ, ಅರ್ಥಾತ್ ಕಿರೀಟ ತೊಡಿಸಿದ. ಹಾಗೆ ನೋಡಿದರೆ ಮಹಾಭಾರತದ ಕಥೆಯನ್ನು ಒಟ್ಟಾಗಿ ಟೋಪಿ ಕಥೆಯೆಂದೇ ಕರೆಯಬಹುದು. ರಾಜಧರ್ಮದಲ್ಲಿ 'ಮೋಸ' ಎಂದರೆ ಟೋಪಿ ಹಾಕುವುದು ಒಂದು ಸ್ವೀಕೃತಧರ್ಮವೇ ಆಗಿದೆ. ವಿವಾಹ ಪದ್ಧತಿಯಲ್ಲೂ 'ರಾಕ್ಷಸ ವಿವಾಹ'ವೆಂಬ ಪದ್ಧತಿಯೊಂದಿದೆ. ವಾಸ್ತವವಾಗಿ ಇದು ಕನ್ಯಾಪಿತೃವಿಗೆ ಟೋಪಿ ಹಾಕಿ ಆತನ ಮಗಳನ್ನು ಅಪಹರಿಸುವ ಕ್ರಮ. ಹೀಗಾಗಿ ವ್ಯವಸ್ಥೆಯೊಂದರ ಅವಿಭಾಜ್ಯ ಹಾಗೂ ಕಾನೂನುಬದ್ಧ ಅಂಗವಾಗಿ 'ಟೋಪಿ ಹಾಕುವುದು' ಕೂಡ ಅಂಗೀಕರಿಸಲ್ಪಟ್ಟರೆ ಆಶ್ಚರ್ಯವೇನಿಲ್ಲ. ಪುರಾಣಗಳಲ್ಲಿ ರಾಕ್ಷಸರು ಅಟ್ಟಹಾಸದಲ್ಲಿ ಹೋಗಿ ಟೋಪಿ ಹಾಕತೊಡಗಿದರೆ, ದೇವರು ನಿಧಾನಗತಿಯಿಂದ ಟೋಪಿ ಹಾಕುವ ಕಲೆಯಲ್ಲಿ ನಿಷ್ಣಾತರು. ಇದಕ್ಕೆ ಗಣಪತಿ ರಾವಣನಿಗೆ ಟೋಪಿ ಹಾಕಿ ಆತ್ಮಲಿಂಗವನ್ನು ಭೂಮಿಯಲ್ಲಿಟ್ಟ ಕತೆಯೇ ನಿದರ್ಶನ. ಹೀಗಾಗಿ ಟೋಪಿ ಹಾಕುವ ಕಲೆ ಕೇಳಿ ಅಥವಾ ನೋಡಿಯೇ ಕಲಿಯಬಹುದು. ಆದ್ದರಿಂದ ಇದು ನಮಗೆ ರಕ್ತಗತವಾಗಿ ಬರುವಂತಹ ವಿದ್ಯೆ ಎನ್ನಬಹುದು. ಇಲ್ಲಿಯೂ ಕೆಲವೊಂದು specialisation subject ಇರಬಹುದು, ಅದು ಬೇರೆಯೇ ವಿಚಾರ. ನಾನು ಟೋಪಿ ಧರಿಸಿದ್ದಾಗಲೂ ಇತರರಿಂದ ಟೋಪಿ ಹಾಕಿಸಿಕೊಂಡಿದ್ದೇನೆ, ಅದನ್ನು ತೆಗೆದಿರಿಸಿದಾಗಲೂ ಟೋಪಿ ಹಾಕಿಸಿಕೊಂಡಿದ್ದೇನೆ. ತಲೆಗೆ ರಕ್ಷಣಾತ್ಮಕವಾಗಿ ಟೋಪಿ ಧರಿಸಿಕೊಂಡಿದ್ದ ನಾನು ಅದನ್ನು ಖಾಯಂ ಆಗಿ ತೆಗೆಯಲೇಬೇಕಾದ ಅನಿವಾರ್ಯತೆಗೊಳಗಾದದ್ದು ಎಲ್ಲರೂ ನನ್ನನ್ನು ಕುರಿತಾಗಿ 'ಯಾವಾಗಲೂ ಟೋಪಿ ಹಾಕಿಕೊಂಡು ತಿರುಗುತ್ತಿರುತ್ತಾನೆ' ಎಂದು ಹೇಳಲಾರಂಭಿಸಿದ ಮೇಲೆಯೇ ! ಪ್ರಾಮಾಣಿಕವಾಗಿ ಹೇಳುವುದಾದರೆ ನನಗೆ ಟೋಪಿ ಹಾಕುವ ವಿದ್ಯೆಯ ಸ್ಥೂಲ ಪರಿಚಯವಿದೆ. ಇತರರಿಗೆ ಟೋಪಿ ಹಾಕಿದರೆ ಆಗಬಹುದಾದ ಸಂತೋಷದ ಕಲ್ಪನೆಯೂ ಇದೆ, ಟೋಪಿ ಹಾಕಿಸಿಕೊಂಡ ನೋವಿನ ಅನುಭವವೂ ಇದೆ ! ಹಾಗೆಂದು ಇತರರಿಗೆ ಟೋಪಿ ಹಾಕುವ ಕಾರ್ಯಾಚರಣೆಗಿಳಿಯುವ ಧೈರ್ಯ ಮಾತ್ರ ಇಲ್ಲ, ಯಾಕೆಂದರೆ ಎಲ್ಲಿಯಾದರೂ ನಾನು ಸಿಕ್ಕಿಬಿದ್ದರೆ ಎಂಬ ಹೆದರಿಕೆಯಿಂದ ! ಅಷ್ಟರ ಮಟ್ಟಿಗೆ ಪ್ರಾಮಾಣಿಕನೇ ನಾನು. ನೀವೂ ಕೂಡ ನನ್ನದೇ ಪಂಕ್ತಿಯವರೆಂದು ನನ್ನ ದೃಢವಾದ ನಂಬುಗೆ ! ಅಂತೂ ಟೋಪಿ ಹಾಕಲು ಮಾನಸಿಕ ತಯಾರಿಯಂತೂ ಅತ್ಯಗತ್ಯವೆಂಬುದು ನಿರ್ವಿವಾದವಾದ ಸಂಗತಿ.

ಒಮ್ಮೆ ಟೋಪಿ ಹಾಕಿಸಿಕೊಂಡವನು ತುಂಬಾ ಎಚ್ಚರಿಕೆಯಿಂದಿರುತ್ತಾನಾದ್ದರಿಂದ ಪುನಃ ಇನ್ನೊಮ್ಮೆ ಆತನಿಗೆ ಅದೇ ಟೋಪಿಯನ್ನು ಹಾಕುವ ಹಾಗಿಲ್ಲ, ಆ ಟೋಪಿಗೆ ಇತರ ವ್ಯಕ್ತಿಗಳು ಕಾಯುತ್ತಿರುತ್ತಾರೆ. ಒಮ್ಮೆ ಟೋಪಿ ಹಾಕಿಸಿಕೊಂಡ ಅನುಭವಿ ಮತ್ತೊಂದು ಟೋಪಿಗೆ ತನ್ನ ತಲೆಯನ್ನು ಸಿದ್ಧವಾಗಿಟ್ಟುಕೊಳ್ಳಬೇಕು. ಟೋಪಿ ಹಾಕುವವರು ಸದಾ ಹದ್ದಿನ ಕಣ್ಣಿನವರಾಗಿ ತಕ್ಕವರು ಸಿಕ್ಕಿದಾಕ್ಷಣ ಸಾವಕಾಶವಾಗಿ ಟೋಪಿಹಾಕಿ ಸಂತೋಷಿಸುತ್ತಾರೆ. ಆದ್ದರಿಂದಲೇ ವಿಚಿತ್ರವಾದರೂ ಹಲವು ಸಲ ಎಷ್ಟೇ ಎಚ್ಚರಿಕೆಯಿಂದಿದ್ದರೂ ಮೇಲಿಂದ ಮೇಲೆ ಟೋಪಿ ಹಾಕಿಸಿಕೊಳ್ಳುತ್ತಲೇ ಇರುತ್ತಾರೆ. ಇನ್ನೂ ಹೇಳುವುದಾದರೆ ತನಗೆ ಯಾರಿಂದಲೂ ಟೋಪಿ ಬೀಳಬಾರದು ಎಂದು ಅತಿಯಾಗಿ ಎಚ್ಚರಿಕೆ ವಹಿಸುವವನಿಗೇ ಹೆಚ್ಚುಹೆಚ್ಚು ಟೋಪಿ ಬೀಳುವುದು ! ಏಕೆಂದರೆ ಟೋಪಿ ಹಾಕಿಸಿಕೊಳ್ಳಲ್ಪಡುವ ಕೆಲವೇ ಕೆಲವು ಪ್ರಕರಣಗಳ ಕಲ್ಪನೆ ಮಾತ್ರ ಈತನಿಗೆ ಇರುವುದು. ಟೋಪಿ ಹಾಕುವ ಚಾಣಾಕ್ಷನಿಗಾದರೋ ತನ್ನ ಅಕ್ಷಯ ಬತ್ತಳಿಕೆಯಲ್ಲಿರುವ ಯಾವ ಟೋಪಿ ಯಾವ ಮುಖಕ್ಕೆ ಸೂಕ್ತ ಎಂಬುದನ್ನು ಚಾಕಚಕ್ಯತೆಯಿಂದ ನಿರ್ಧರಿಸಿ ಟೋಪಿಹಾಕುವ ವ್ಯವಸ್ಥೆಯಿರುತ್ತದೆ. ಹೀಗಾಗಿ ಅತೀ ಜಾಗರೂಕ ವ್ಯಕ್ತಿ ಕೆಲವೊಮ್ಮೆ ಬಹಳ ಸುಲಭವಾಗಿ ಟೋಪಿ ಹಾಕಿಸಿಕೊಳ್ಳುತ್ತಾನೆ.



ಟೋಪಿ ಹಾಕಿಸಿಕೊಳ್ಳುವುದೆಂದರೆ ಕೇವಲ ಹಣದ ಮೂಲಕ ಮಾತ್ರವೆಂದು ತಿಳಿದರೆ ತಪ್ಪಾದೀತು. ಇದು ಮಾನಸಿಕವಾಗಿ ಕೂಡ ಸಾಧ್ಯ. ನಾನೊಮ್ಮೆ ನಮ್ಮೂರಿನ ಒಂದು ಮದುವೆಗೆ ಸ್ಕೂಟರಿನಲ್ಲಿ ಹೋಗುತ್ತಿದ್ದೆ. ಓರ್ವ ಮಹಾಶಯರು ನಿಲ್ಲಿಸುವಂತೆ ಕೈಮಾಡಿದಾಗ ಸ್ಕೂಟರ್ ನಿಲ್ಲಿಸಿ ಏನೆಂದು ಕೇಳಿದೆ. ಅವರೂ ಅದೇ ಮದುವೆಗೆ ಹೋಗಬೇಕೆಂದೂ, ದಾರಿ ತಿಳಿದಿಲ್ಲವೆಂದೂ ಹೇಳಿದರು. ನಾನೂ ಅಲ್ಲಿಗೇ ಹೋಗುವವನಾದ್ದರಿಂದ ಹಿಂದೆ ಕುಳ್ಳಿರಿಸಿಕೊಂಡು ಹೋದೆ, ಏನೋ ಮಹದುಪಕಾರ ಮಾಡುವವನ ಮುಖಮುದ್ರೆಯಿಂದ ! ಸರಿ, ಸಮಾರಂಭದ ಮನೆಯ ಹತ್ತಿರ ನಾನು ಸ್ಕೂಟರ್ ನಿಲ್ಲಿಸಿ ಬೀಗ ಹಾಕಿ 'ಇನ್ನು ಹೋಗೋಣ'ವೆನ್ನುತ್ತಾ ತಿರುಗಿ ನೋಡಿದರೆ ಈ ಆಸಾಮಿ ನಾಪತ್ತೆ ! ನಾನು ಅತ್ತಿತ್ತ ನೋಡುತ್ತಾ ಮದುವೆ ಮನೆಯೊಳಗಡೆ ಹೋದಾಗ ಈ ಮಹಾಶಯರು ಆರಾಮವಾಗಿ ಕುಳಿತು ಕಾಫಿ ಕುಡಿಯುತ್ತಿದ್ದರು ! ಅಷ್ಟೇ ಅಲ್ಲ, ನನ್ನ ಪರಿಚಯವೇ ಇಲ್ಲದವರಂತೆ ನನ್ನನ್ನು ನೋಡಿಯೂ ನೋಡದವರಂತೆ ವರ್ತಿಸಿದರು ! ಇವರು ಬಹಳ ಸುಲಭವಾಗಿಯೇ ನನಗೆ ಟೋಪಿ ಹಾಕಿದ್ದರು !

ಇನ್ನು ಈ ಕಾರ್ಯಕ್ರಮ ಸಂಘಟಕರಿರುತ್ತಾರಲ್ಲ, ಅವರು ಕೂಡ ಟೋಪಿ ಹಾಕುವ ಕಲೆಯಲ್ಲಿ ಸಿದ್ಧಹಸ್ತರು. ಕಾರ್ಯಕ್ರಮ ನಿರ್ವಾಹಕರನ್ನು ಇವರು ಸಹಾಯಕರನ್ನಾಗಿ ತೆಗೆದುಕೊಳ್ಳುತ್ತಾರೆ. ಮುಖ್ಯ ಅತಿಥಿಗಳನ್ನು ಹೊಗಳೀ ಹೊಗಳೀ ಅವರಿಂದ ತಮ್ಮ ಸಂಘಟನೆಗೆ ಹಣಕಾಸಿನ ನೆರವನ್ನು ಪಡೆಯಲು ಪ್ರಯತ್ನಿಸುತ್ತಾರೆ. ಇಷ್ಟೇ ಅಲ್ಲದೆ ಬಹುಮಾನ ವಿತರಣೆಗೆ ಮುಖ್ಯ ಅತಿಥಿಗಳ ಪತ್ನಿಯನ್ನು ಕರೆದು, ಹಾಕಲಿರುವ ಟೋಪಿಗೆ ಮತ್ತಷ್ಟು ಬಣ್ಣವನ್ನೂ ಕೊಡುತ್ತಾರೆ ! ಇವೆಲ್ಲಾ ಮುಖ್ಯ ಅತಿಥಿಯ ಮನಗೆಲ್ಲಲು ಇರುವ ಟೋಪಿ ಎಂಬುದು ಪಾಪ ಈ ಅತಿಥಿಗೇನು ಗೊತ್ತು ? ಅತಿಥಿ ಎನ್ನುವಾಗ ನನಗೆ ನಮ್ಮ ಕಾಲೇಜಿಗೆ ಬರುತ್ತಿದ್ದ ಓರ್ವ ಅತಿಥಿ ಉಪನ್ಯಾಸಕರು ನಮ್ಮಿಂದ ಟೋಪಿ ಹಾಕಿಸಿಕೊಂಡ ಪ್ರಕರಣ ನೆನಪಾಗುತ್ತದೆ. ಈ ಉಪನ್ಯಾಸಕರು ಪಾಠ ಮಾಡುತ್ತಿರುವಾಗ ಹೊರಗಿನ ಜಗುಲಿಯಿಂದ ಗೆಜ್ಜೆ ಶಬ್ದ ಕೇಳಿಬಂದರೆ ಅತ್ತ ಒಮ್ಮೆ ಕಣ್ಣುಹಾಯಿಸದೆ ಪಾಠ ಮುಂದುವರಿಸುತ್ತಿರಲಿಲ್ಲ. ಒಮ್ಮೆ ನಾವು ನಾಲ್ಕಾರು ಸ್ನೇಹಿತರು, ಹುಡುಗಿಯರು ನಡೆಯುತ್ತಿರುವಾಗ ಆಗುತ್ತಿದ್ದ ಅವರ ಕಲರವವನ್ನು ಧ್ವನಿ ಮುದ್ರಿಸಿಕೊಂಡು, ಈ ಉಪನ್ಯಾಸಕರು ಪಾಠ ಮಾಡುತ್ತಿರುವಾಗ ಹೊರಗಿನ ಜಗುಲಿಯಿಂದ ಚಾಲೂ ಆಗುವಂತೆ ವ್ಯವಸ್ಥೆ ಮಾಡಿದೆವು. ಈ ಧ್ವನಿಯಿಂದ ಪ್ರಚೋದಿತರಾದ ನಮ್ಮ ಉಪನ್ಯಾಸಕರು ಆಸಕ್ತಿಯಿಂದ ಜಗುಲಿಯೆಡೆಗೆ ನೋಡಲಾರಂಭಿಸಿದರು, ಧ್ವನಿತರಂಗಗಳನ್ನು ಹಿಂಬಾಲಿಸಿ ಬರಬಹುದಾದ ಸುಂದರ ನಂದನವನದ ವೀಕ್ಷಣೆಗಾಗಿ ಚಡಪಡಿಸುತ್ತಾ. ಎಷ್ಟು ಹೊತ್ತಾದರೂ ಹುಡುಗಿಯರು ಕಾಣದೆ ಕೇವಲ ಧ್ವನಿ ಮಾತ್ರ ಕೇಳಲು ಉಪನ್ಯಾಸಕರು ಹೊರಗೆ ಹೋಗಿ ಜಗುಲಿಯೆಡೆಗೆ ಕಣ್ಣು ಹಾಯಿಸಿ ಅಲ್ಲಿ taperecorder ನೋಡಿ ಪೆಚ್ಚಾಗಿಹೋದರು. ಹೀಗೆ ನಮ್ಮಿಂದ ಟೋಪಿ ಹಾಕಿಸಿಕೊಂಡ ಆ ಉಪನ್ಯಾಸಕರು ಮತ್ತೆ ನಮ್ಮ ಕಾಲೇಜಿಗೆ ಅತಿಥಿಯಾಗಿ ಆಗಮಿಸಲೇ ಇಲ್ಲ !

ಉತ್ತಮಾಂಗವಾದ ತಲೆಯ ರಕ್ಷಣಾಸಾಧನಾಗಿರುವ ಈ ಟೋಪಿ ಕಾರ್ಯಾಚರಣೆಗಿಳಿದಾಗ ಮಾತ್ರ ಮೋಸಗಾರ ನೆನಿಸಿದ್ದು ಹೇಗೆಂಬುದೇ ನಿಗೂಢ ! ನಾವೆಲ್ಲರೂ ಸೇರಿ ನಮಗೇ ಟೋಪಿ ಹಾಕಿಸಿಕೊಂಡ ಕತೆಯೂ ಅಷ್ಟೇ ನಿಗೂಢ. ಅದು ನಮ್ಮರಿವಿಗೆ ಬಂದದ್ದು ತೀರಾ ತಡವಾಗಿ. ಬಹುರಾಷ್ಟ್ರೀಯ ಕಂಪೆನಿಗಳ ಮಾತಿಗೆ ಮರುಳಾಗಿ ಪರಿಸರದ ಬಗ್ಗೆ ಕಿಂಚಿತ್ತೂ ಕಾಳಜಿವಹಿಸದೆ ನಮ್ಮ ಮಣ್ಣನ್ನು ನಿಸ್ಸಾರಗೊಳಿಸುತ್ತಾ ಸರ್ವತ್ರ ಕಲ್ಮಶಗೊಳಿಸಿ ಇದೀಗ ಕುಡಿಯುವ ನೀರಿಗೇ ಸಂಚಕಾರ ಬಂದಿದೆ. ರಾಸಾಯನಿಕಗಳ ಬೇಕಾಬಿಟ್ಟಿ ಬಳಕೆಯಿಂದಾಗಿ ಎಲ್ಲವೂ ವಿಷಮಯವಾಗಿದೆ. ಇನ್ನೂ ಸ್ವಲ್ಪ ಟೋಪಿಯನ್ನು ಮೇಲೆ ಸರಿಸಿದರೆ ಈ ಜಾಗತೀಕರಣ ಎಂಬ ದೊಡ್ಡ ಟೋಪಿಯಡಿಯಡಿ ನಾವು ಸಿಲುಕಿ ಒದ್ದಾಡುವ ಪರಿ ನಮಗೇ ಗೋಚರವಾಗುತ್ತದೆ. ನಮ್ಮದೇ ಮೂಲದ ವಾಸ್ತು, ಅರಿಶಿನ, ಕಹಿಬೇವು, ಭತ್ತ ಮುಂತಾದವುಗಳ ಮೇಲೆ ಹಕ್ಕುಸ್ವಾಮ್ಯವನ್ನು ಸ್ಥಾಪಿಸುವ ಹುನ್ನಾರದಿಂದ ವಿದೇಶೀ ಟೋಪಿಯಡಿ ಸಿಲುಕಿ ನಾವು ಚಡಪಡಿಸುವಂತಾಗಿದೆ. ಇತ್ತೀಚೆಗೆ ವಿದೇಶೀ ಕಂಪೆನಿಯೊಂದರ ಬಿ. ಟಿ. ಸಂಕರ ಹತ್ತಿಗೆ ಕೇಂದ್ರಪರಿಸರ ಇಲಾಖೆ ಮಂಜೂರಾತಿ ನೀಡುವ ಮೂಲಕ ಟೋಪಿಗೆ ಅಧಿಕೃತ ಪರವಾನಿಗೆ ದೊರಕಿತು. ಕೀಟನಾಶಕದ ಅಗತ್ಯವೂ ಇಲ್ಲ, ಇಳುವರಿಯೂ ಅಧಿಕ ಎಂಬ ಗಾಳದ ಟೋಪಿಯ ಮೂಲಕ ಈ ಕಂಪೆನಿಯು ರೈತರು ಅದನ್ನು ಬಿತ್ತುವಂತೆ ಮಾಡಿತು. ಆದರೆ ಬೆಳೆದ ರೈತರು ಇದೀಗ ನಷ್ಟ ಹೊಂದಿ ತಾವು ಟೋಪಿ ಹಾಕಿಸಿಕೊಂಡ ಕಣ್ಣೀರಿನ ಕತೆಯ ಹಿಂದಿನ ದುರಂತಕ್ಕೆ ಯಾರು ಹೊಣೆ ?



ಇರಲಿ, ಒಟ್ಟಿನಲ್ಲಿ ಟೋಪಿಯಂತೂ ಯಾವುದೇ ಎಗ್ಗಿಲ್ಲದೆ ಎಲ್ಲರನ್ನೂ ಪೆಕರರನ್ನಾಗಿಸಲು ತುದಿಗಾಲಲ್ಲಿ ನಿಂತಿದೆ. ಟೋಪಿಯ ಈ ತೆರನ ಅವತಾರಗಳಿಂದಾಗಿಯೇ ಸನ್ಮಾನ ಸಮಾರಂಭಗಳಲ್ಲಿ ಸನ್ಮಾನಿತರಿಗೆ ಟೋಪಿ ಇರಿಸುವ ಕಾರ್ಯ ಆರಂಭವಾಗಿಲ್ಲ. ಬದಲಾಗಿ ಕೇವಲ ಶಾಲು ಹೊದಿಸಿ, ಫಲ ಪುಷ್ಪ ಸಮರ್ಪಣೆ ಮಾಡಿ ಸನ್ಮಾನವನ್ನು ಮುಗಿಸಿಬಿಡುತ್ತಾರೆ. ಉತ್ತಮಾಂಗವಾದ ತಲೆಗೇ ಸನ್ಮಾನ ದಕ್ಕದಿರಲು ಟೋಪಿಯ ಈ ಕುಚೋದ್ಯತನವೇ ಕಾರಣ ಎಂದು ಎದೆ ತಟ್ಟಿ ಹೇಳಬಹುದು.



ಸುಬ್ರಹ್ಮಣ್ಯ ಎಸ್. ಆರ್.
ಚೊಕ್ಕಾಡಿ

# ವಿಮರ್ಶಾ ಲೇಖನಗಳ 'ಒಳ ಹೊರಗು'

ಸುಬ್ರಾಯ ಚೊಕ್ಕಾಡಿ ಅವರ ವಿಮರ್ಶಾ ಲೇಖನಗಳ ಸಂಗ್ರಹ 'ಒಳಹೊರಗು' (ಇಂಚರ ಪ್ರಕಾಶನ-೨೦೦೨)ನಲ್ಲಿ ಚೊಕ್ಕಾಡಿಯವರ ಒಟ್ಟು ಪ್ರತಿಪಾದನೆ 'ತಲೆದಂಡ'ವನ್ನು ಅರ್ಥೈಸಿರುವಲ್ಲಿ ಕಂಡುಬರುತ್ತದೆ. 'ಜಂಗಮಕ್ಕಳಿವುಂಟು ಸ್ಥಾವರಕ್ಕಳಿವಿಲ್ಲ' ಎನ್ನುವ ಅವರ ಮಾತುಗಳು ಈ ಬಲಿಷ್ಠ ವ್ಯವಸ್ಥೆಯನ್ನು ಬದಲಿಸಲು ಅಸಾಧ್ಯ ಎನ್ನುವ ನಿಲುವನ್ನು ಒಪ್ಪಿಕೊಳ್ಳುತ್ತವೆ.

ಈ ನಿಲುಮೆಯನ್ನು ಆಧರಿಸಿ ಕಲ್ಯಾಣದ ಕ್ರಾಂತಿಯನ್ನು ಅರ್ಥೈಸುವ ಅವರು ಸೋವಿ ದೇವನ ಮಾತುಗಳ ಮೂಲಕ ವರ್ಣಾಶ್ರಮ ಧರ್ಮದ ಪುನಃಸ್ಥಾಪನೆಯನ್ನು ಗುರುತಿಸುತ್ತಾರೆ. ಇದೇ ವಿಚಾರ ಚಿತ್ತಾಲರ 'ಮೂರು ದಾರಿಗಳು'ಅನ್ನು ಅರ್ಥೈಸಿರುವಲ್ಲಿಯೂ ಕಂಡುಬರುತ್ತದೆ. ಸಮಾಜದ ಸ್ಥಾಪಿತ ಮೌಲ್ಯವಾದ ಲೈಂಗಿಕ ಪಾವಿತ್ರ್ಯವನ್ನು ಮೀರುವ ನಿರ್ಮಲೆಯ ಪ್ರೇಮವನ್ನು ಬಲಿಷ್ಠ ಸಮಾಜ ಕೊಂದುಹಾಕಿ ಆ ಘಟನೆಯನ್ನು ಅರಗಿಸಿಕೊಂಡು ಪುನಃ ಮೂಲಸ್ಥಿತಿಗೆ ಬರುತ್ತದೆ ಎನ್ನುತ್ತಾರೆ ಅವರು. ಕಾರಂತರ 'ಮರಳಿ ಮಣ್ಣಿಗೆ'ಯನ್ನು ಇತ್ಯಾತ್ಮಕ ದೃಷ್ಟಿಯಲ್ಲಿ ಗ್ರಹಿಸಿರುವ ಚೊಕ್ಕಾಡಿಯವರು ದೇಸೀಯತೆ ಆಧುನಿಕತೆಗೆ ಮರುಳಾಗಿ ಮತ್ತೆ ತನ್ನ ಮೂಲನೆಲೆಗೆ ಮರಳುತ್ತದೆ ಎಂಬುದನ್ನು ಗುರುತಿಸಿದ್ದಾರೆ. ಇದೇ ವಿಚಾರವನ್ನು ನೇತ್ಯಾತ್ಮಕ ದೃಷ್ಟಿಯಲ್ಲಿ ಗ್ರಹಿಸಿದರೆ ಅದೂ ಸಹ 'ಜಂಗಮಕ್ಕಳಿವುಂಟು ಸ್ಥಾವರಕ್ಕಳಿವಿಲ್ಲ' ಎಂಬ ನಿಲುಮೆಯನ್ನೇ ಪ್ರತಿಪಾದಿಸುತ್ತದೆ. ಆದರೆ ಇಲ್ಲಿ ಅವರು ಸ್ವರೂಪಾತ್ಮಕ ವ್ಯತ್ಯಾಸವನ್ನು ಗಮನಿಸಿದ್ದಾರೆ.

'ತಲೆದಂಡ' ಮತ್ತು 'ಮೂರು ದಾರಿಗಳು'ಗಳ ಅರ್ಥೈಸುವಿಕೆಯಲ್ಲಿ ಸ್ವರೂಪಾತ್ಮಕ ವ್ಯತ್ಯಾಸವನ್ನು ಪ್ರಖರವಾಗಿ ಗುರುತಿಸಲು ಸಾಧ್ಯವಾಗಿಲ್ಲ. ಆದರೆ ವ್ಯವಸ್ಥೆ ಹಾಗಿರುವುದಿಲ್ಲ. ಬಲಿಷ್ಠ ವ್ಯವಸ್ಥೆ ತನಗೆದುರಾಗುವ ಪ್ರತಿಭಟನೆಯನ್ನು ನಿರ್ದಾಕ್ಷಿಣ್ಯವಾಗಿ ಹೊಸಕಿಹಾಕಿದಾಗಲೂ ಅದರ ಪ್ರಭಾವ ಉಳಿದಿರುತ್ತದೆ. ಕಲ್ಯಾಣದ ಕ್ರಾಂತಿ ವಿಫಲವಾಗಿರಬಹುದು. ಆದರೆ ಕರ್ನಾಟಕ ಸಮಾಜದ ಮೇಲೆ ಅದು ಬೀರಿರುವ ದಟ್ಟ ಪ್ರಭಾವವನ್ನು ಕಡೆಗಣಿಸುವುವಂತಿಲ್ಲ. ಆ ಪ್ರಭಾವವೂ ಕೂಡ ವೀರಶೈವರಲ್ಲೇ ಜಾತಿ ವಿಂಗಡಣೆಗಳಾಗಿ ವರ್ಣಾಶ್ರಮ ಧರ್ಮದ ಜಾಲದೊಳಗೆ ಸಿಲುಕಿರಬಹುದು. ಆದರೆ ಹಾಗೆ ಸಿಲುಕಿರುವಾಗಲೂ ಕಲ್ಯಾಣದ ಕ್ರಾಂತಿ ಸಮಾಜವನ್ನು ಮತ್ತೊಂದು ಮಜಲಿಗೆ ಎತ್ತಿಹಾಕಿದೆ ಎಂಬುದನ್ನು ಗಮನಿಸಬೇಕು. ಸಾಮಾಜಿಕ ಪರಿವರ್ತನೆ ಆಗುವುದೇ ಹೀಗಲ್ಲವೇ?

ನಿರ್ಮಲೆಯ ಪ್ರೇಮವಾದರೂ ಹೀಗೆಯೇ. ನಿರ್ಮಲೆ ಕತೆಯಾಗಿ ಉಳಿಯಬಹುದು ಎಂದು ಒಪ್ಪಿಕೊಂಡಿರುವ ಚೊಕ್ಕಾಡಿಯವರು ಪ್ರತಿಭಟನೆಯ ಕುರುಹು ಉಳಿಯುತ್ತದೆಂಬುದನ್ನು ಭಾಗಶಃ ಒಪ್ಪಿಕೊಂಡಿದ್ದಾರೆ. ಪರಿವರ್ತನೆಯ ಈ ಮೆಲು ನಡೆ ಕ್ರಮೇಣ ಸಾಮೂಹಿಕ ಧ್ವನಿಯಾಗಲೂ ಬಹುದು. ಹಾಗಾದಾಗ ಲೈಂಗಿಕ ಪಾವಿತ್ರ್ಯದ ಅಲ್ಲಗಳೆಯುವಿಕೆ ಸಾಮಾಜಿಕ ಮೌಲ್ಯವಾಗಿ ಸ್ಥಾಪನೆಯಾಗಬಹುದು. ಚೊಕ್ಕಾಡಿಯವರ 'ಜಂಗಮಕ್ಕಳಿವುಂಟು ಸ್ಥಾವರಕ್ಕಳಿವಿಲ್ಲ' ಎಂಬ ನಿಲುಮೆಯನ್ನು ವಿಶಾಲ ಅರ್ಥದಲ್ಲಿ ಗ್ರಹಿಸಿದರೆ ಲೈಂಗಿಕ ಪಾವಿತ್ರ್ಯ ಇಲ್ಲವಾಗುವುದೇ ಸಾಮಾಜಿಕ ಮೌಲ್ಯವೆನಿಸುವ ಕಾಲವೊಂದು ಬರಬೇಕು. ಯಾಕೆಂದರೆ ಮನುಷ್ಯ ನಾಗರಿಕತೆಯ ಪ್ರಾರಂಭದ ಕಾಲ ಹಾಗಿತ್ತು ಎಂದು ಚರಿತ್ರೆ ತಿಳಿಸುತ್ತದೆ. ಚೊಕ್ಕಾಡಿಯವರ ಮಟ್ಟಿಗೆ ಲೈಂಗಿಕ ಪಾವಿತ್ರ್ಯ ಎನ್ನುವುದು ಸ್ವೀಕೃತ ಮೌಲ್ಯ. ಅದು ನಮ್ಮೆಲ್ಲರಿಗೂ (ಬಹುಶಃ) ಸ್ವೀಕೃತ ಮೌಲ್ಯವೇ. ಆದರೆ ಅದರ ಸ್ಥಿರೀಕೃತ ಬದ್ಧತೆಯನ್ನು ಬರಹಗಾರರಾಗಿಯೂ ಒಪ್ಪಿಕೊಂಡಿರುವುದರಿಂದ ಏನಾಗಿದೆಯೆಂದರೆ ಸ್ವೀಕೃತ ಮೌಲ್ಯದ ಆಚೆಗೆ ಇರುವ ಸಮಾಜವನ್ನು ಇತ್ಯಾತ್ಮಕವಾಗಿ ನೋಡಲು ಸಾಧ್ಯವಾಗಿಲ್ಲ.

ಈ ಅಂಶ ಆಲನಹಳ್ಳಿಯವರ 'ಪರಸಂಗದ ಗೆಂಡೆತಿಮ್ಮ'ವನ್ನು ಅರ್ಥೈಸುವಲ್ಲಿ ಸ್ಪಷ್ಟವಾಗಿ ವ್ಯಕ್ತವಾಗಿದೆ. ತಿಮ್ಮನನ್ನು ಆಧುನಿಕತೆ, ಸಾಂಪ್ರದಾಯಿಕತೆಗಳ ಸಂಕೇತವಾಗಿ ತೆಗೆದುಕೊಂಡಿರುವ ಚೊಕ್ಕಾಡಿಯವರು ಸಾಂಪ್ರದಾಯಿಕತೆಗೆ ಬದ್ಧವಾಗಿರುವ ಅವನ ಮನಸ್ಸು ನೈತಿಕತೆಗೆ ಅತೀತವಾಗಿ ಬಾಳುವ, ತನ್ನ ಭಾವೀ ಪತ್ನಿ ಮರಂಕಿ ಮತ್ತೊಬ್ಬನ ಮಗ್ಗುಲಲ್ಲಿ ಮಲಗಿರುವುದನ್ನು ಕಂಡು ಆಘಾತವಾಗಿ ಸಾಯುತ್ತಾನೆ ಎನ್ನುತ್ತಾರೆ. ನೈತಿಕ ಪ್ರಜ್ಞೆಗೆ ಅತೀತವಾದ ಆಕೆಗೆ ನೈತಿಕತೆಯ ಅರಿವಾದೊಡನೆ ಆಕೆಯೂ ಸಾಯುತ್ತಾಳೆ. ಇಲ್ಲಿ, ಈ ಕೃತಿ ಸಂಕ್ರಮಣ ಕಾಲದ ಸಂಘರ್ಷದ ನಿರೂಪಣೆ ಎಂದು ಕರೆದಿರುವ ಜಿ. ಎನ್. ರಂಗನಾಥ ರಾವ್ ಅವರ ಅಭಿಪ್ರಾಯವನ್ನು ಅಲ್ಲಗಳೆದಿರುವ ಚೊಕ್ಕಾಡಿಯವರು ಸಂಕ್ರಮಣ ಕಾಲದ ಪಕ್ವ ಸಂಘರ್ಷ ಇಲ್ಲಿಲ್ಲ; ಇದು ಸಂಕ್ರಮಣ ಕಾಲದ ಸಂಘರ್ಷಕ್ಕೆ ನಾಂದಿ ಹಾಡುವ ಕೃತಿ ಎಂದಿದ್ದಾರೆ.

ಆ ಅಭಿಪ್ರಾಯ ಸರಿಯೇ. ಆದರೆ ಒಂದು ಸಂಕ್ರಮಣ ಕಾಲದ ಸಂಘರ್ಷಕ್ಕೆ ನಾಂದಿ ಹಾಡುವಾಗ, ಮತ್ತೊಂದು ಸಂಕ್ರಮಣ ಕಾಲದ ಸಂಘರ್ಷ ಮುಗಿದು ಉಳಿದ ಅದರ ಪ್ರತಿನಿಧಿಯನ್ನು ಸಮಾಜ ನಾಶಪಡಿಸುತ್ತದೆ ಎನ್ನುವುದನ್ನು ಅರ್ಥೈಸುವಲ್ಲಿ ಚೊಕ್ಕಾಡಿಯವರು ಸಫಲರಾಗಿಲ್ಲ. ನೈತಿಕತೆಗೆ ಅತೀತವಾದ ಸಮಾಜ ವೇದಪೂರ್ವ ಕಾಲದಲ್ಲಿ, ಪ್ರಾರಂಭದ ವೇದ ಕಾಲದಲ್ಲಿ ಇತ್ತು. ಇತರ ವೇದಗಳ ಕಾಲ ಮತ್ತು ಬೌದ್ಧಯುಗದಲ್ಲಿ ನೈತಿಕ ಪ್ರಜ್ಞೆಯ ಸಮಾಜ ನೈತಿಕತೆಗೆ ಅತೀತವಾದ ಸಮಾಜದೊಂದಿಗೆ ಸಂಕ್ರಮಣ ಸಂಘರ್ಷ ನಡೆಸಿತು. ಗುಪ್ತ ಚಕ್ರಾಧಿಪತ್ಯದ ಕಾಲದಲ್ಲಿ ನೈತಿಕತೆಗೆ ಅತೀತವಾದ ಸಮಾಜದ ಅವನತಿಯಾಯಿತು. ಆಗ ಸ್ಥಿರೀಕರಿಸಲ್ಪಟ್ಟ ನೈತಿಕತೆ ಈ ತನಕ ಮುಂದುವರಿದಿದೆ. ಅಂಥಲ್ಲಿ ನೈತಿಕತೆಗೆ ಅತೀತವಾದ ತೀರಾ ಪ್ರಾಚೀನ ಸಮಾಜದ ಪ್ರತಿನಿಧಿಯಾಗಿ ಮರಂಕಿ ಕಂಡುಬರುತ್ತಾಳೆ. ಆಕೆಯ ಸಾವು ಎಂದರೆ ಆ ಸಮಾಜದ ಕೊನೆಯ ಪ್ರತಿನಿಧಿಯ ನಾಶ. ಅಂದರೆ ಇನ್ನೊಂದು ಸಂಕ್ರಮಣ ಸಂಘರ್ಷಕ್ಕೆ ಸಿದ್ಧವಾಗುವ ಮೊದಲು ತನ್ನ ಹಿಂದಿನ ಸಮಾಜದ ಎಲ್ಲ ಅಂಶಗಳನ್ನು ಸಮಾಜ ನಾಶಪಡಿಸುತ್ತದೆ. ಪ್ರಾಯಶಃ ಚೊಕ್ಕಾಡಿಯವರು ಲೈಂಗಿಕ ಪಾವಿತ್ರ್ಯವನ್ನು ಸ್ಥಿರೀಕೃತ ಮೌಲ್ಯವಾಗಿ ಸ್ವೀಕರಿಸಿದ್ದು ಈ ಅಂಶವನ್ನು ಹೇಳದಿರಲು ಕಾರಣವಾಗಿದೆ. ನಿಜವಾದ ಅರ್ಥದಲ್ಲಿ ಸ್ಥಿರೀಕೃತ ಮೌಲ್ಯ ಯಾವುದು? ಬಹುಶಃ ಆಯಾ ಕಾಲಮಾನದಲ್ಲಿ ಸಮಾಜ ಒಪ್ಪಿಕೊಂಡಿರುವಂಥದಷ್ಟೇ.

ಹಾಗೆಯೇ ಕೃತಿಯ ಉದ್ದಕ್ಕೂ ಚೊಕ್ಕಾಡಿಯವರು ಆಧುನಿಕತೆಯನ್ನು ಸ್ವಲ್ಪ ಅತೃಪ್ತಿಯಿಂದ ನೋಡಿರುವುದು ಕಂಡುಬರುತ್ತದೆ. ನಾ. ಡಿಸೋಜರ 'ಒಡ್ಡು' ಕಾದಂಬರಿಯನ್ನು ಅರ್ಥೈಸುವಲ್ಲಿ ಮಾತ್ರ ಅವರು ಆಧುನಿಕತೆಯನ್ನು ಪ್ರಶಂಸಿಸಿರುವುದು ಕಂಡುಬರುತ್ತದೆ. ಪ್ರಾಯಶಃ ಚೊಕ್ಕಾಡಿಯವರು ಸಾಹಿತ್ಯ ಮಾರ್ಗ ಹಿಡಿಯಲು ಕಾರಣವಾದ ಅಂಶಗಳ ಬಗ್ಗೆ ಹೇಳಿರುವಲ್ಲಿ ಅವರ ಸಾಹಿತ್ಯ ಸಂವೇದನೆಗಳು ರೂಪುಗೊಂಡು ಒಂದು ಮಟ್ಟಿಗೆ ಸ್ಥಿರವಾದ ೬೦-೭೦ರ ದಶಕದ ಸ್ಥಿತಿಯಲ್ಲಿ ನಿಂತು ೨೦೦೦ವನ್ನು ನೋಡುತ್ತಾರೆ ಅವರು. ಬಹುಮಟ್ಟಿಗೆ ಅವರು ಪ್ರಶಂಸಾತ್ಮಕ ನೋಟ ಬೀರುವುದೂ ಸಹ ೬೦-೭೦ರ ದಶಕದ ಸ್ಥಿತಿಗತಿಗಳ ಕಡೆಗೆ ಎಂಬುದನ್ನು ಗಮನಿಸಬೇಕು. ಅದರಿಂದ ಏನಾಗಿದೆಯೆಂದರೆ ಆಯಾ ಕೃತಿಗಳನ್ನು ಅರ್ಥೈಸುವಲ್ಲಿ ಅವರಿಗೆ ಆಧುನಿಕತೆಯನ್ನು ಇತ್ಯಾತ್ಮಕ ದೃಷ್ಟಿಯಿಂದ ನೋಡಲು ಸಾಧ್ಯವಾಗಿಲ್ಲ. ಉದಾಹರಣೆಗೆ ಕಾರಂತರ 'ಮರಳಿ ಮಣ್ಣಿಗೆ'ಯಲ್ಲಿ ದೇಸೀಯತೆಗೆ ಮರಳುವ ಚಿತ್ರಣವಿರುವಂತೆಯೇ ಆಧುನಿಕತೆಯ ಅಂಶಗಳನ್ನು ಮೈಗೂಡಿಸಿಕೊಂಡ ವ್ಯಕ್ತಿ ದೇಸೀಯತೆಗೆ ಮರಳಿದಾಗ ಆಗುವ ಇತ್ಯಾತ್ಮಕ ಬದಲಾವಣೆಯ ಚಿತ್ರಣವೂ ಇದೆ. ಆದರೆ ಚೊಕ್ಕಾಡಿಯವರು ಅದನ್ನು ಸ್ವರೂಪಾತ್ಮಕ ಬದಲಾವಣೆ ಎಂಬರ್ಥದಲ್ಲಿ ಸ್ವೀಕರಿಸಿ ಅಲ್ಲಿಗೆ ಮುಗಿಸಿಬಿಡುತ್ತಾರೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಚಾರವೆಂದರೆ 'ಮರಳಿ ಮಣ್ಣಿಗೆ'ಯ ರಾಮೈತಾಳರು, 'ಪರಸಂಗದ ಗೆಂಡೆತಿಮ್ಮ'ದ ತಿಮ್ಮನಂಥವರೆಲ್ಲ ಪ್ರತಿನಿಧಿಸುವ ಸಾಂಪ್ರದಾಯಿಕ ಸಮಾಜ ಎಂಬುದಿದೆಯಲ್ಲ, ಅದೂ ಕೂಡ ಅದರ ಹಿಂದಿನ ಸಾಮಾಜಿಕ ಮನಃಸ್ಥಿತಿಗೆ ಆಧುನಿಕವೇ ಆಗಿತ್ತು ಎನ್ನುವುದು. ಈ ಅಂಶವನ್ನು ಗಮನಿಸಿದಂತೆಲ್ಲ ತೀರಾ ಪುರಾತನ ಮತ್ತು ತೀರಾ ಆಧುನಿಕವಾದ ವ್ಯವಸ್ಥೆಯಲ್ಲಿನ ಗುಣ, ದೋಷಗಳನ್ನು ಹೆಚ್ಚು ಪರಿಪೂರ್ಣವಾಗಿ ಗ್ರಹಿಸಲು ಸಾಧ್ಯವಾಗುತ್ತದೆ.

ರೂ : ೬೦

ಪುಟ : ೧೨೪

ಸೈದ್ಧಾಂತಿಕವಾಗಿ ಹೇಳುವುದಾದರೆ ಚೊಕ್ಕಾಡಿಯವರು ಇಲ್ಲಿ ವ್ಯಕ್ತಿವಾದಿಯಾಗಿ ಕಂಡು ಬರುತ್ತಾರೆ. ಆದರೆ ಅವರು ಗಮನಿಸುವ ವ್ಯಕ್ತಿವಾದ ಬಂಡವಾಳಶಾಹಿತ್ವವನ್ನು ಪುಷ್ಟಿಗೊಳಿಸುವಂಥದಲ್ಲ. ಹಾಗೆಂದರೆ ಎಲ್ಲೋ ಒಂದೆಡೆ ಸಮತಾವಾದ, ಇನ್ನೊಂದೆಡೆ ಸಮಾಜವಾದ, ಮತ್ತೊಂದೆಡೆ ಸಂಪ್ರದಾಯಗಳನ್ನೆಲ್ಲ ಇತ್ಯಾತ್ಮಕ ದೃಷ್ಟಿಯಿಂದ ನೋಡುವ ಚೊಕ್ಕಾಡಿಯವರು ಒಂದೇ ಒಂದು ಕಡೆಯಲ್ಲಿಯೂ ಬಂಡವಾಳಶಾಹಿತ್ವವನ್ನು ಇತ್ಯಾತ್ಮಕವಾಗಿ ಗ್ರಹಿಸುವುದಿಲ್ಲ. ಬದಲು 'ನನ್ನ ಕನಸುಗಳು' 'ನನ್ನ ಕಾವ್ಯ ಪ್ರತಿಮೆಗಳು' ಲೇಖನಗಳಲ್ಲಿ ಬಂಡವಾಳಶಾಹಿತ್ವದ ಬಗ್ಗೆ ಆಕ್ಷೇಪವಿದೆ.

ಅವರು ಗಮನಿಸುವ ವ್ಯಕ್ತಿವಾದ ವಿಭಿನ್ನವಾದದ್ದು. ಅದು ಸಮಾಜವಾದವನ್ನೇ ಆಧರಿಸಿದೆ. ಆದರೆ ವ್ಯಕ್ತಿಯ ಅಂತರಂಗದ ಬದಲಾವಣೆಯ ಮೂಲಕ ಅದರ ಸಾಧನೆಯನ್ನವರು ಬಯಸುತ್ತಾರೆ. ಅಂತರಂಗಕ್ಕೆ ಬರುವ ವಿಚಾರಗಳು ಬೌದ್ಧಿಕವಾಗಿ ಬರದೆ ಭಾವನಾತ್ಮಕವಾಗಿ ಬಂದು ಹೊರಗಿನ ನೋವುಗಳಿಗೆ ಸ್ಪಂದಿಸುವ ಒಳಗು ತೆರೆದುಕೊಳ್ಳಬೇಕೆಂಬುದು ಅವರ ನಿಲುವು. ಬಹುಶಃ ಇಂದಿನ ನವಸಾಮ್ರಾಜ್ಯಶಾಹಿ ತರುತ್ತಿರುವ ಒತ್ತಡವನ್ನು ಎದುರಿಸಲಾಗದೆ ಬಳಲುತ್ತಿರುವಲ್ಲಿ ಚೊಕ್ಕಾಡಿಯವರ ಈ ನಿಲುಮೆಗೆ ಮಹತ್ವವಿದೆ.

**ಅರವಿಂದ ಚೊಕ್ಕಾಡಿ**
ಫ್ರಾಂಕೋ ವಿಲ್ಲಾ, ಚರ್ಚ್ ರಸ್ತೆ, ಬೆಳ್ತಂಗಡಿ - ೫೭೪೨೧೪, ದ. ಕ.



# ನಾಮ ಸಂಕೀರ್ತನ

**ಕೆ**ಲವು ವಾರಗಳ ಹಿಂದೆ ಒರಿಸ್ಸಾದಿಂದ ಬಂದ ಮಹನೀಯರೊಬ್ಬರನ್ನು ಭೇಟಿ ಮಾಡಲು ನನ್ನ ಮಿತ್ರರೊಬ್ಬರ ಮನೆಗೆ ಹೋಗಿದ್ದೆ. ಸುಮಾರು ಎಪ್ಪತ್ತು ವರುಷ ವಯಸ್ಸು ದಾಟಿದ ವ್ಯಕ್ತಿಯೊಬ್ಬರನ್ನು ತೋರಿಸಿ ನನ್ನ ಪರಿಚಯ ಮಾಡಿಸಿದ ನನ್ನ ಸ್ನೇಹಿತರು ''ಇವರಿಗೆ ನಿಮ್ಮಿಂದ ಒಂದು ಚಿಕ್ಕ ಕೆಲಸವಾಗಬೇಕಿದೆ'' ಎಂದರು. ನಮ್ಮ ಸಂಭಾಷಣೆ ಇಂಗ್ಲಿಷಿನಲ್ಲೇ ನಡೆದಿತ್ತು. ಅಚ್ಚ ಬಿಳಿಯ ಗಡ್ಡ ಮೀಸೆಧಾರಿಯನ್ನು ನೋಡಿ ಎದ್ದು ನಿಂತು ಪ್ರಣಾಮ ಮಾಡಿದೆ. ಕುತೂಹಲದಿಂದ ''ತಮ್ಮ ಹೆಸರೇನು ?'' ಎಂದು ಕೇಳಿದೆ. ''ಮಹಾತ್ಮ ಯೋಗಿ ಮುನಿ'' ಎಂದರು. ನನಗಾದ ಆಶ್ಚರ್ಯಕ್ಕೆ ಮಿತಿಯಿಲ್ಲ. ಹೀಗೆಯೂ ಹೆಸರಿಟ್ಟುಕೊಳ್ಳುವ ಮಹಾನುಭಾವರು ಈ ಜಗತ್ತಿನಲ್ಲಿ ಇದ್ದಾರೆಯೇ ಎನಿಸಿತು. ''ಮಹಾತ್ಮಾ'' ಎಂಬಂಥ ಶಬ್ದಗಳು ಗೌರವಪೂರ್ವಕವಾಗಿ ಇತರರು ದಯಪಾಲಿಸುವ ಪಟ್ಟವೇ ವಿನಃ ನಾವೇ ಇಟ್ಟುಕೊಳ್ಳುವ ಹೆಸರೇ ಎಂಬ ಅನುಮಾನ ನನ್ನನ್ನು ಕಾಡಿತು.

ಮನಸ್ಸಿನಲ್ಲಿ ಬಂದ ಪ್ರಶ್ನೆಯನ್ನು ಮನಸ್ಸಿನಲ್ಲಿಯೇ ಅದುಮಿ ಇಟ್ಟುಕೊಳ್ಳದೆ ಥಟ್ಟನೆ ಕೇಳಿಬಿಡುವುದು ನನ್ನಲ್ಲಿ ಬೆಳೆದುಬಂದ ಒಂದು ದುರಭ್ಯಾಸ. ಇದರಿಂದ ಹಲವಾರು ಬಾರಿ ಪೇಚಿಗೆ ಸಿಕ್ಕಿದ ಸಂದರ್ಭಗಳಿವೆ.

''ಸ್ವಾಮೀ, 'ಮಹಾತ್ಮಾ ಯೋಗಿ ಮುನಿ' ಎಂಬ ಹೆಸರು ತಮ್ಮ ತಂದೆ ತಾಯಿಯರು ಮಾಡಿದ ಒರಿಜಿನಲ್ ನಾಮಕರಣವೇ ?'' ಎಂದು ಕೇಳಿಬಿಟ್ಟೆ.

ಅವರ ಮುಖ ಏಕ್ ದಂ ಕೆಂಪಗಾಗಿ ಗುರುತು ಹಿಡಿಯುವುದೇ ಕಷ್ಟವಾಯಿತು. ನನ್ನಂತಹ ಯಃಕಶ್ಚಿತ್ ಮನುಷ್ಯನಿಂದ ಈ ರೀತಿ ಪ್ರಶ್ನೆಯನ್ನು ಅವರು ಎಂದೂ ಎದುರಿಸಿರಲಾರರು. ಭೇಟಿಯಾದವರಲ್ಲನೇಕರು ಅವರ ಭವ್ಯ ವ್ಯಕ್ತಿತ್ವವನ್ನೂ, ಬಿಳಿಯ ದಾಡಿ ಮೀಸೆಗಳನ್ನೂ ನೋಡಿ, ಹಿಂದು ಮುಂದು ನೋಡದೆ ಕಾಲು ಮುಟ್ಟಿ ಸಾಷ್ಟಾಂಗ ಪ್ರಣಾಮ ಮಾಡಿದ ಪ್ರಸಂಗಗಳನ್ನೇ ಅನುಭವಿಸಿ - ಆನಂದಿಸಿ - ತಮಗಿಂತ ಅನೇಕ ಪಟ್ಟು ಹಿರಿದಾಗಿ ಬೆಳೆದ ತಮ್ಮ ನೆರಳನ್ನೇ ನಿಜವಾದ ವ್ಯಕ್ತಿತ್ವವೆಂದು ಎಣಿಸಿ, ಮಿಥ್ಯಾ ಸಿಂಹಾಸನದಲ್ಲಾರೂಢರಾಗಿ, ಕ್ಷಣ ಕ್ಷಣಕ್ಕೂ ತಮ್ಮ ತಲೆಯ ಮೇಲಿದ್ದ ಊಹೆಯ ಕಿರೀಟವನ್ನು ಮುಟ್ಟಿ ನೋಡಿಕೊಳ್ಳುತ್ತಾ, ಹಿರಿತನದ ಸವಿಯನ್ನುಂಡು ಬದುಕಿದ ಈ ಮಹಾಶಯರಿಗೆ ಬುಡವೇ ಅಲ್ಲಾಡುವ ಅನುಭವವಾಗಿರಲಿಕ್ಕೂ ಸಾಕು !

ಅವರು ನನ್ನ ಪ್ರಶ್ನೆಗೆ ಉತ್ತರ ಕೊಡಲಿಚ್ಛಿಸಲಿಲ್ಲ ಎಂಬ ಸತ್ಯವೇ ನನ್ನ ಪ್ರಶ್ನೆಗೆ ಉತ್ತರ ನೀಡಿತು.

ಮುಂದೆ ನಾನು ಅವರ ಕೆಲಸವನ್ನೇನೋ ಮಾಡಿ ಕೊಟ್ಟೆ. ಅವರಿಗೆ ಅದು ಹಿಡಿಸಿತೋ ಇಲ್ಲವೋ, ನನ್ನ ಮೇಲಿನ ಕೋಪಕ್ಕೆ ನನ್ನ ಬೆನ್ನಿನ ಹಿಂದೆ ಅದನ್ನು ಹರಿದು ಬಿಸುಟರೋ ನನಗೆ ಗೊತ್ತಿಲ್ಲ. ಅದು ಇಲ್ಲಿ ಅಪ್ರಸ್ತುತ.

ಈ ಪ್ರಸಂಗದಿಂದ ಬಹಳ ದಿನಗಳಿಂದ ನನ್ನ ಮನಸ್ಸನ್ನು ಕಾಡುತ್ತಿದ್ದ ಪ್ರಶ್ನೆಯೊಂದು ಹಾವಿನಂತೆ ಹೆಡೆಯೆತ್ತಿ ಭುಸುಗುಡಲಾರಂಭಿಸಿತು. ಈ ಡಾಕ್ಟರ್, ಪ್ರೊಫೆಸರ್ ಇತ್ಯಾದಿ ಬಿರುದು ಬಾವಲಿಗಳನ್ನು ಅನೇಕ ಜನರು ತಮ್ಮ ಹೆಸರಿನ ಒಂದು ಭಾಗವನ್ನಾಗಿಯೇ ಮಾಡಿಕೊಳ್ಳುವುದೇಕೆ ? ''ಸ್ವಾಮೀ, ತಮ್ಮ ಹೆಸರೇನು ?'' ಎಂದು ಕೇಳಿದಾಗ ''ಡಾಕ್ಟರ್ ರಘುರಾಮ್'' ಎಂದೋ, ''ಪ್ರೊಫೆಸರ್ ಮೋಹನ್'' ಎಂದೋ, ''ಕ್ಯಾಪ್ಟನ್ ವಿಶ್ವನಾಥ್'' ಎಂದೋ, ''ಬ್ರಿಗೇಡಿಯರ್ ಖನ್ನಾ'' ಎಂದೋ ಹೇಳುವುದೇಕೆ ?

ಡಾಕ್ಟರ್, ಪ್ರೊಫೆಸರ್, ಕ್ಯಾಪ್ಟನ್, ಮೇಜರ್, ಬ್ರಿಗೇಡಿಯರ್ ಇತ್ಯಾದಿಗಳು ಯಾವ ಮನುಷ್ಯನ ಹೆಸರಿನ ಭಾಗವೂ ಅಲ್ಲವಲ್ಲಾ? ಈ ಮಹಾನುಭಾವರು ಜನ್ಮ ತಾಳಿದಾಗ ಇವರ ತಂದೆ ತಾಯಿಯರು ಹೆಸರಿನ ಜೊತೆಗೆ ಮೇಲ್ಕಂಡ ಬಿರುದು ಬಾವಲಿಗಳನ್ನೂ ಸೇರಿಸಿ ನಾಮಕರಣ ಮಾಡಿದರೇ? ಅಥವಾ ಇವರು ಹುಟ್ಟಿದಾಗಲೇ ತಂತಮ್ಮ ವೃತ್ತಿ-ಕಸುಬುಗಳನ್ನೂ ನಿರ್ಧರಿಸಿಕೊಂಡೇ ಜನ್ಮವೆತ್ತಿದರೇ ? ಹೆಸರು ಕೇಳಿದಾಗ ವೃತ್ತಿಯನ್ನೂ ಸೇರಿಸಿ ಹೇಳುವುದೇಕೆ? ವೈದ್ಯಕೀಯ ವೃತ್ತಿಯಲ್ಲಿರುವವರು ತಮ್ಮ ಹೆಸರಿಗೆ ಮುಂದೆ ಡಾ|| ಎಂದು ಸೇರಿಸಿಕೊಳ್ಳುವುದರಲ್ಲಿ ಒಂದಿಷ್ಟು ಅರ್ಥ ಹಾಗೂ ಉದ್ದೇಶಗಳು ಕಂಡುಬರುತ್ತವೇನೋ ನಿಜ. ಯಾವುದಾದರೂ ಅಪಘಾತ ಸಂಭವಿಸಿದಾಗ, ಇಲ್ಲವೇ ತುರ್ತುಪರಿಸ್ಥಿತಿಯಲ್ಲಿ ಇಂಥವರು ತುಂಬ ಉಪಯೋಗಕ್ಕೆ ಬರುತ್ತಾರೆಂಬುದರಲ್ಲಿ ಸಂದೇಹವಿಲ್ಲ. ಈ ವೃತ್ತಿ ಸಂಕೇತ ಇರುವುದರಿಂದ ಇತರರು ಇವರನ್ನು ವೈದ್ಯರೆಂದು ಗುರುತಿಸಿ ಸಮಯೋಚಿತ ಉಪಯೋಗ ಪಡೆಯಬಹುದು.

ಆದರೆ ವೈದ್ಯ ವೃತ್ತಿಯಲ್ಲದೆ, ಮತ್ಯಾವುದಾದರೂ ವಿಷಯದಲ್ಲಿ ಸಂಶೋಧನೆ ನಡೆಸಿ ಡಾಕ್ಟರೇಟ್ ಪಡೆದವರೆಲ್ಲರೂ ತಮ್ಮ ಹೆಸರಿನ ಮುಂದೆ ಡಾ|| ಎಂದು ಸೇರಿಸಿಕೊಳ್ಳುವುದರಿಂದ ಸಾಕಷ್ಟು ಮಟ್ಟಿಗೆ ಗೊಂದಲವೇ ಉಂಟಾಗುತ್ತದೆನ್ನಬಹುದು. ''ಡಾ||............'' ಎಂಬ ಹೆಸರನ್ನು ನೋಡಿ ಇವರು ವೈದ್ಯರೆಂದು ಎಣಿಸಿ ತುರ್ತು ಚಿಕಿತ್ಸೆ ಪಡೆಯಲು ಧಾವಿಸಿದ ವ್ಯಕ್ತಿಯು, ಸಮಾಜ ಶಾಸ್ತ್ರದಲ್ಲಿಯೋ, ವೈದ್ಯಕೀಯಕ್ಕೆ ಸಂಬಂಧವೇ ಇಲ್ಲದಂತಹ ಇನ್ನಾವ ವಿಷಯದಲ್ಲಿಯೋ ಇವರು ಡಾಕ್ಟರೇಟ್ ಪಡೆದವರು ಎಂಬುದನ್ನರಿತಾಗ, ಆತನಿಗಾಗುವ ನಿರಾಶೆ, ದುಗುಡಗಳನ್ನು ಅನುಭವಿಸಿದವರೇ ಅರ್ಥ ಮಾಡಿಕೊಳ್ಳಬಲ್ಲರು. ಅಲ್ಲಿಂದ ಮುಂದೆ ಅಂಥಹವರು ''ಡಾ||......'' ಎಂಬ ಹೆಸರಿನ ಕೆಳಗೆ ಚಿಕ್ಕ ಅಕ್ಷರಗಳಲ್ಲಿ ಬರೆದ ಅವರ ಡಿಗ್ರಿಗಳನ್ನೂ ಸರಿಯಾಗಿ ಓದಿಕೊಳ್ಳುವ ಪರಿಪಾಠ ಬೆಳೆಸಿಕೊಂಡಾರೆಂಬುದರಲ್ಲಿ ಸಂದೇಹವಿಲ್ಲ.

ವೈದ್ಯರಿಗೇ ಆಗಲೀ, ಡಾಕ್ಟರೇಟ್ ಪಡೆದ ಇತರ ಯಾವ ವ್ಯಕ್ತಿಗೇ ಆಗಲೀ, ತಮ್ಮ ನಾಮಧೇಯದ ಹಿಂದೆ ಡಾ|| ಎಂದು ಸೇರಿಸಿಕೊಳ್ಳುವ ಸಂಪೂರ್ಣ ಹಕ್ಕು ಇದೆಯೆಂಬುದನ್ನು ಯಾರೂ ಅಲ್ಲಗಳೆಯುವುದಿಲ್ಲ. ಆದರೆ ಈ ಜನರು ತಮ್ಮ ಡಾಕ್ಟರ್ ಪಟ್ಟಕ್ಕೆ ಅಷ್ಟೊಂದು ಗಟ್ಟಿಯಾಗಿ ಏಕೆ ಜೋತುಬೀಳುತ್ತಾರೆಂಬುದು ಅರ್ಥವಾಗದ

[illegible]

ವಿಷಯ. ಫೋನಿನಲ್ಲಿ ಮಾತಾಡುವಾಗಲೀ, ಎದುರಿಗೆ ಮಾತಾಡುವಾಗಲೇ ಆಗಲೀ, ಪತ್ರದಲ್ಲಿ ಬರೆಯುವಾಗಲೇ ಆಗಲೀ, ಪ್ರತಿಬಾರಿಯೂ ತಮ್ಮ ಹೆಸರಿಗೆ ಹಿಂದೆ ಡಾಕ್ಟರ್ ಪದವಿಯನ್ನು ಕಡ್ಡಾಯವಾಗಿ, ಅದು ತಮ್ಮ ಹೆಸರಿನ ಒಂದು ಭಾಗವೇ ಎಂಬಂತೆ ಸೇರಿಸುವವರನ್ನು ನೋಡಿದಾಗ ಸ್ವಲ್ಪ ಮುಜುಗರವಾಗುವುದು ಸಹಜವೇ.

ಡಾಕ್ಟರ್ ಪದವಿಯನ್ನು ಸ್ವಲ್ಪ ಹೊತ್ತು ಬಿಟ್ಟು ಇತರ ಬಿರುದುಗಳಿಗೆ ಬಂದಾಗ ಇನ್ನೂ ಹೆಚ್ಚೇ ಮುಜುಗರ ವಾಗುತ್ತದೆ. ನನ್ನ ಸಹಪಾಠಿಯೊಬ್ಬರು ಮಿಲಿಟರಿಯಲ್ಲಿ ಕ್ಯಾಪ್ಟನ್ ಆಗಿ ಕೆಲವು ಕಾಲ ಸೇವೆ ಸಲ್ಲಿಸಿದರು. ನಂತರ ಮಿಲಿಟರಿಯಿಂದ ನಿವೃತ್ತರಾಗಿ (ಆ ಕಾಲದಲ್ಲಿ ಎಕ್ಸ್ ಸರ್ವಿಸ್ಮೆನ್‌ಗಳಿಗೆ ಅನೇಕ ಉದ್ಯೋಗಾವಕಾಶಗಳಲ್ಲಿ ಮೀಸಲಾತಿ ಇರುತ್ತಿದ್ದುದರಿಂದ) ಬೇರೆ ಕೆಲಸಕ್ಕೆ ಸೇರಿದರು. ಅವರು ಕ್ಯಾಪ್ಟನ್ ಆಗಿ ಸೇವೆ ಸಲ್ಲಿಸಿದುದು ಕೆಲವೇ ವರುಷಗಳು. ಉಳಿದ ಉದ್ಯೋಗಗಳಲ್ಲಿ ಇದ್ದುದು ಆ ಸೇವಾಕಾಲಕ್ಕೆ ಸುಮಾರು ಐದು ಪಟ್ಟೇ ಇರಬಹುದು. ಆದರೆ ಅವರು ಮಾತ್ರ ಇಂದಿಗೂ ಯಾರಾದರೂ ಹೆಸರು ಕೇಳಿದಾಗ ''ಕ್ಯಾಪ್ಟನ್..........'' ಎಂದೇ ಹೇಳುತ್ತಾರೆ. ಈ ಮನೋಭಾವವನ್ನು ಹೆಚ್ಚಾಗಿ ಮಿಲಿಟರಿ ಉದ್ಯೋಗಿ ಗಳಲ್ಲಿ ಕಾಣಬಹುದು. ಅವರಿಗೆ ತಮ್ಮ ಹೆಸರನ್ನು ಪದವಿ ಬಿಟ್ಟು ಹೇಳಲು ಬರುವುದೇ ಇಲ್ಲ ಎಂದರೂ ಅತಿಶಯೋಕ್ತಿಯಲ್ಲ.

ಇತ್ತೀಚೆಗೆ ನಾನು ಕೆಲಸ ಮಾಡುವ ಸಂಸ್ಥೆಗೆ ಬೇರೆ ರಾಜ್ಯದಿಂದ ಬಂದ ನಿವೃತ್ತ ಲೆಕ್ಚರರ್ ಒಬ್ಬರು ಕೆಲಸಕ್ಕೆ ಸೇರಿದರು. ನನ್ನ ಹೆಸರು ಹೇಳಿ, ವಂದಿಸಿ ತಮ್ಮ ಹೆಸರೇನೆಂದು ಪ್ರಶ್ನಿಸಿದಾಗ ''ಪ್ರೊಫೆಸರ್ ಅಹಮದ್ ಹುಸ್ಸೇನ್'' ಎಂದರು. ಪೂರ್ವಾನುಭವ ಕಲಿಸಿದ ಪಾಠ ಇನ್ನೂ ನೆನಪಿನಲ್ಲಿದ್ದುದರಿಂದ ಅವರನ್ನು ''ಪ್ರೊಫೆಸರ್ ಎಂಬುದು ತಮ್ಮ ಹೆಸರಿನ ಒಂದು ಭಾಗವೇ ?'' ಎಂದು ಕೇಳದೆ ಬಾಯಿ ಮುಚ್ಚಿಕೊಂಡೆ.

ಈ ಮನೋಭಾವವು ಉಳಿದ ವೃತ್ತಿಪರರಲ್ಲಿ ಏಕಿಲ್ಲ ಎಂಬುದು ಆಶ್ಚರ್ಯಕರ. ಉದಾಹರಣೆಗೆ ಒಬ್ಬ ಇಂಜಿನಿಯರಾಗಲೀ, ಕಲಾವಿದನಾಗಲೀ, ಕರಣಿಕನಾಗಲೀ, ಉಪಾಧ್ಯಾಯನಾಗಲೀ ಇತರೇ ಯಾವ ವೃತ್ತಿಯವನಾಗಲೀ, ಯಾರಾದರೂ ಹೆಸರು ಕೇಳಿದಾಗ ''ನನ್ನ ಹೆಸರು ಉಪಾಧ್ಯಾಯ ರಮೇಶ'' ಎಂದಾಗಲೀ, ''ಕಲಾವಿದ ಹರೀಶ'' ಎಂದಾಗಲೀ, ''ಇಂಜಿನಿಯರ್ ರಾಮಾ ನಾಯುಡು'' ಎಂದಾಗಲೀ, ''ಅಧ್ಯಾಪಕಿ ಮಾಲತಿ'' ಎಂದಾಗಲೀ ಹೇಳುವುದಿಲ್ಲವೇಕೆ ? ಇವರಿಗೆಲ್ಲ ತಂತಮ್ಮ ವೃತ್ತಿಗಳ ಬಗ್ಗೆ, ಅದನ್ನು ತಮ್ಮ ಹೆಸರಿನ ಮುಂದೆ ಸೇರಿಸಿಕೊಳ್ಳಲು ಇಷ್ಟವಿಲ್ಲದಷ್ಟು ಕೀಳರಿಮೆ ಇದೆಯೆಂದು ಅರ್ಥವೇ ? ಅಥವಾ ಡಾಕ್ಟರು ಮತ್ತು ಮಿಲಿಟರಿ ಉದ್ಯೋಗಿಗಳಿಗೆ ಮಾತ್ರ ತಮ್ಮ ವೃತ್ತಿಯ ಬಗ್ಗೆ ಎಲ್ಲಿಲ್ಲದ ಅಭಿಮಾನವಿದೆಯೆಂದು ಭಾವಿಸಬೇಕೇ ?

ವಿದ್ಯಾರ್ಥಿ ದೆಸೆಯಲ್ಲಿದ್ದಾಗ ಮೆಡಿಕಲ್ ಕಾಲೇಜಿಗೆ ಹೋಗುವ ವಿದ್ಯಾರ್ಥಿ ವಿದ್ಯಾರ್ಥಿನಿಯರನ್ನು ಗಮನಿಸಿ ದಾಗಲೂ, (ಇನ್ನೂ ಡಾಕ್ಟರ್ ಪಟ್ಟ ಬಂದಿಲ್ಲದಿದ್ದುದ ರಿಂದಲೋ ಏನೋ) ಅವರು ತಮ್ಮ ಬಿಳೀ ಕೋಟಿಗೆ ಜೋತುಬಿದ್ದಿರುತ್ತಿದ್ದುದನ್ನು ನೋಡಿ ವಿಸ್ಮಯಪಟ್ಟಿದ್ದೆ. ಅವರಂತೂ ಆ ಬಿಳಿಯ ಕೋಟೇ ತಮ್ಮ ವೈದ್ಯಕೀಯ ಸ್ನಾತಕ ಎಂಬಂತೆ ಕಷ್ಟಪಟ್ಟಾದರೂ ಅದನ್ನು ಎಲ್ಲಲ್ಲೂ ಮೆರೆಸುತ್ತಿದ್ದುದನ್ನು ನೋಡಿದಾಗ ಮುಜುಗರವಾಗದೆ ಇದ್ದಿಲ್ಲ.

ಇತ್ತೀಚೆಗಂತೂ ಹೆಸರು ಕೇಳಿದಾಗ ಯಾರಾದರೂ ಅದಕ್ಕೆ ಬಿರುದು ಬಾವಲಿ ಸೇರಿಸಿ ಹೇಳಿದರೆ ನನಗೆ ಕೋಪವೂ ಮುಜುಗರವೂ ಒಟ್ಟಿಗೇ ಉಂಟಾಗುತ್ತವೆ. ಆದರೆ ''ಬ್ರಿಗೇಡಿಯರ್ ಎಂಬುದು ನಿಮ್ಮ ಹೆಸರಿನ ಒಂದು ಭಾಗವೇ ?'' ಎಂದು ಕೇಳಿ ಅವರಿಗೆ ಕೋಪ ಬರಿಸುವುದನ್ನು ನಿಲ್ಲಿಸುವ ಪ್ರಯತ್ನ ಮಾಡುತ್ತಿದ್ದೇನೆ.

**ಡಿ. ಟಿ. ಲೋಹಿತ್**
೩೩೯, ೩ನೇ ಮುಖ್ಯರಸ್ತೆ, ೩ನೇ ಫೇಸ್, ಜೆ.ಪಿ.ನಗರ
ಬೆಂಗಳೂರು - ೫೬೦ ೦೭೮

# ಹೆಪ್ಪು ಹಾಕುವುದೆಂದರೆ...



ಉಗುರ ಬೆಚ್ಚಗಿನ
ಮಾದಕ ರುಚಿಯ
ನೊರೆವಾಲಿಗೆ ಹೆಪ್ಪು ಹಾಕುವುದೆಂದರೆ,
ಬರಿ ಹುಳಿಮೊಸರಿನಪೇಕ್ಷೆ ಮಾತ್ರವಲ್ಲ ;
ಕೆನೆಭರಿತ ಘಟದಲ್ಲಿ
ಕಡಗೋಲನಿಳಿಸಿ
ತಳದಿಂದ ತುದಿಯವರೆಗೆ
ಅಲ್ಲೋಲ – ಕಲ್ಲೋಲವಾಗುವಂತೆ
ಕಡೆ ಕಡೆದು, ಮಥಿಸಿ ಮದಿರಸಿ,
ನೊರೆಯುಕ್ಕಿಸಿ, ಬುರುಬುರುಗಿಸಿ
ಬರುಬರುತ್ತ ಗಟ್ಟಿಯಾಗುವ
ನವನೀತದ ನಿರೀಕ್ಷೆ!

ಹೆಪ್ಪು ಹಾಕದೆ ಕಡೆದ
ಸಮುದ್ರಮಂಥನಕ್ಕೆಲ್ಲಿ
ಈ ಸರಳ, ಸ-ರಸ ಕ್ರಿಯೆ ?
ಚತುರ್ದಶ ಲಬ್ಧಿಗಳಿಗೆ
ಕಿಚ್ಚು ಹಚ್ಚುವ
ನವ ನಿರ್ಮಾಣದ ಪ್ರಕ್ರಿಯೆ.

ಮಿಡಿವ ಕಡಗೋಲ
ಸ್ಪರ್ಶಕ್ಕೆ ಒಡಲೊಳಗೆ
ಹೊರ ಹಾಕುವ ಒಪ್ಪು
ಈ ಹೆಪ್ಪು!

ಅಂತೆಯೇ ಹೆಪ್ಪು ಹಾಕುವುದೆಂದರೆ
ಭೌತ ಸ್ಪರ್ಶದ ಕೆಡಿಸುವ ಕೆಲಸವಲ್ಲ ;
ಆ – ಗರ್ಭ ನಿಕ್ಷೇಪ ನಿರೀಕ್ಷೆಯ
ಸೃಜನ ಸುಖ

**ಡಾ॥ ಬಸವರಾಜ ಸಾದರ**
ಸಹಾಯಕ ಕೇಂದ್ರ ನಿರ್ದೇಶಕರು
ಆಕಾಶವಾಣಿ, ಧಾರವಾಡ - ೫೮೦ ೦೦೮

# ಇವರು ವಿಜ್ಞಾನ ಕಲಿತವರು!

ಅವಳು ಎಂಬಿಬಿಎಸ್ ಓದುವಾಗ ಭ್ರೂಣಗಳು ಇಂತಹ ಅಪಾಯಕಾರಿ ಕೆಲಸಗಳನ್ನು ಮಾಡುತ್ತವೆಂದು ಯಾವ ಪುಸ್ತಕವೂ ಹೇಳಿರಲಿಲ್ಲ. ಕಲಿಸಿದ ಪ್ರೊಫೆಸರ್‌ಗಳೂ ತಿಳಿಸಿರಲಿಲ್ಲ. ಫಲಿತಗೊಂಡ ಅಂಡಾಣು ಮನುಷ್ಯರೂಪ ಪಡೆಯಲು ಮೊದಲ ಹನ್ನೆರಡು ವಾರಗಳನ್ನು ತೆಗೆದುಕೊಳ್ಳುವುದರಿಂದ ಕೈಕಾಲು, ಮುಖ, ಹೃದಯ, ತಲೆ ಹೀಗೆ ಎಲ್ಲಾ ಅಂಗಾಂಗಗಳನ್ನು ಜೋಡಿಸಿಕೊಳ್ಳುವುದರಲ್ಲಿ ತಲ್ಲೀನವಾಗಿರುತ್ತದೆ ಎಂದು ತಿಳಿದಿದ್ದಳು. ಅದು ಹೇಗೆ ತಾನು ರೂಪ ಪಡೆಯುವುದನ್ನು ಬಿಟ್ಟು ಅಮೆರಿಕದಿಂದ ಬಂದವನ ವಾಸನೆ ಹಿಡಿದು ಬೆಂಗಳೂರಿನಿಂದ ಕೊಯಮತ್ತೂರಿಗೆ ಹೋಗಿ ಜೀವ ತೆಗೆದು ಬಂದಿತೆನ್ನುವುದು ಅವಳ ಊಹೆಗೆ ನಿಲುಕದ ವಿಷಯವಾಗಿತ್ತು.

— ಡಾ|| ಶೈಲಜಾ ಕೆ. ಆರ್. —

ನನ್ನ ಸ್ನೇಹಿತೆಯೊಬ್ಬಳ ವಿವಾಹ ಅಮೆರಿಕದಲ್ಲಿ ಪೌರತ್ವ ಹೊಂದಿದ್ದ ಭಾರತೀಯನೊಂದಿಗೆ ಆಗಿತ್ತು. ಆತ ವೃತ್ತಿಯಲ್ಲಿ ಜೀವರಸಾಯನ ಶಾಸ್ತ್ರದ ವಿಜ್ಞಾನಿ. ಅವಳು ವೈದ್ಯೆ. ಅಲ್ಲಿಗೆ ಹೋಗುವ ಇಚ್ಛೆ ಆಕೆಗಿರಲಿಲ್ಲವಾದ್ದರಿಂದ ಇಲ್ಲಿಯೇ ಕೆಲಸ ನೋಡಲು ಆತನಿಗೆ ಹೇಳಿದ್ದಳು. ಆದ್ದರಿಂದ ಆತ ೩-೪ ತಿಂಗಳವರೆಗೂ ಇಲ್ಲೇ ಇದ್ದ. ಎಲ್ಲೂ ಸೂಕ್ತ ಸಂಬಳದ, ಅವನಿಗಿಚ್ಛೆಯಾಗುವಂತಹ ಕೆಲಸ ದೊರೆಯದ್ದರಿಂದ ವಾಪಸ್ಸು ಹೊರಟುಹೋದ. ಈ ಅವಧಿಯಲ್ಲಿ ಅವಳು ಎರಡು ತಿಂಗಳ ಗರ್ಭಿಣಿಯಾಗಿದ್ದರಿಂದ ಅಲ್ಲಿಗೆ ಅವನೊಟ್ಟಿಗೆ ಹೋಗಲಾಗಲಿಲ್ಲ. ಹೆರಿಗೆಯಾದ ನಂತರ ಹೋದರಾಯಿತೆಂದು ಇಲ್ಲಿಯೇ ಉಳಿದಳು. ಇವನು ಹೋದ ೨-೩ ವಾರಕ್ಕೆ ಅವನ ತಮ್ಮ (ಅಮೆರಿಕ ವಾಸಿ) ಇಂಡಿಯಾಗೆ ಬಂದ. ಹತ್ತು ಹದಿನೈದು ದಿನ ಚೆನ್ನಾಗಿಯೇ ಇದ್ದ ಈತ ಮಿದುಳು ಜ್ವರದಿಂದ ಹಾಸಿಗೆ ಹಿಡಿದ. ಹೈಟೆಕ್ ಆಸ್ಪತ್ರೆಯಲ್ಲಿಯೇ ಚಿಕಿತ್ಸೆ ನಡೆಯುತ್ತಿದ್ದರೂ ಹತೋಟಿಗೆ ಬರಲೇ ಇಲ್ಲ. ಕೋಮಾಗೆ ಹೋಗಿ ೪-೫ ದಿನಗಳ ನಂತರ ಮರಣಿಸಿದ. ಸ್ವಾಭಾವಿಕವಾಗಿಯೇ ಇದು ಎಲ್ಲರಿಗೂ ಆಘಾತಕಾರಿ ವಿಷಯವಾಗಿತ್ತು. ಅಮೆರಿಕದಲ್ಲಿದ್ದ ಅವಳ ಪತಿಗಂತೂ ತುಂಬಾ ನೋವಿನ ವಿಷಯವಾಗಿತ್ತು. ಮಿದುಳು ಜ್ವರದಿಂದ ಸತ್ತನೆಂದರೆ ನಂಬಲೇ ಆಗುತ್ತಿಲ್ಲ. ಸಾವಿಗೆ ಕಾರಣಗಳನ್ನು ಹುಡುಕತೊಡಗಿದ. (ವಿಜ್ಞಾನಿಯಲ್ಲವೇ ?) ಅದೆಷ್ಟು ಬಾರಿ ತಮ್ಮ ಇಂಡಿಯಾಗೆ ಹೋಗಿ ಬಂದಿದ್ದ. ಒಮ್ಮೆಯೂ ಕೂದಲು ಕೊಂಕದಂತೆ ಹಿಂದಿರುಗಿ ಬಂದಿದ್ದ. ಆಗ ಏನೂ ಮಾಡದ ಭಾರತದ ಅದೇ ಬ್ಯಾಕ್ಟೀರಿಯಾ, ಅದೇ ವೈರಸ್, ಅದೇ ನೀರು, ಅದೇ ಗಾಳಿ, ಅದೇ ಆಹಾರ. ಈಗ ಧಾಳಿಯಿಟ್ಟು ಸಾಯಿಸಿದವೆಂದರೆ ಕಾರಣ ಬೇರೇನೋ ಇದೆ. ಕುಳಿತು ಚಿಂತಿಸಿದ. ಸಂಶೋಧಿಸಿದ. ಭಾರತದ ಸನಾತನ ನಂಬಿಕೆಗಳೂ ನೆನಪಿಗೆ ಬಂದು ಸಹಾಯ ಮಾಡಿದವು. ಏನದು ? ಸಾವಿನ ಕಾರಣ ವೈರಸ್ ಬ್ಯಾಕ್ಟೀರಿಯಾಗಳಲ್ಲ, ಪತ್ನಿಯ ಗರ್ಭದೊಳಗಿರುವ ೧೨-೧೪ ವಾರದ ಭ್ರೂಣ! ಅವಳು ಗರ್ಭಿಣಿಯಾಗಿರದಿದ್ದರೆ ಅವಳ ಕಾಲ್ಗುಣದಿಂದ ಆಯಿತೆಂದು ಹೇಳೇಬಿಡುತ್ತಿದ್ದನೇನೋ, ಅವಳು ಪಾರಾದಳು. ಪಾಪ, ಕೇವಲ ೧೨-೧೪ ವಾರದ ಭ್ರೂಣ ಈ ಆರೋಪ ಹೊತ್ತುಕೊಂಡಿತು. ಹೊಟ್ಟೆಯೊಳಗಿರುವಾಗಲೇ ಇಷ್ಟೊಂದು ಜೀವಕಾರಕವಾಗಿರುವ ಈ ಭ್ರೂಣ ಭೂಮಿಯ ಮೇಲೆ ಬಂದನಂತರ ಇನ್ನು ಎಷ್ಟು ಜನರ ಪ್ರಾಣ ತೆಗೆಯಬಹುದು ? ಮಗು ಎಂದರೆ ವಂಶೋದ್ಧಾರಕ, ಆದರೆ ಇದು ನಿರ್ವಂಶಕಾರಕ್ಕಾಗಿ ಬರುತ್ತಿದೆಯಲ್ಲ, ಆದ್ದರಿಂದ ಇದನ್ನು ಬೆಳೆಯಲು ಬಿಡದೆ ಗರ್ಭದೊಳಗಿರುವಾಗಲೇ ಹೊಸಕಿ ಹಿಸುಕಿ ಎಸೆಯುವುದು ಒಳ್ಳೆಯದೆನಿಸಿತು. ಸರಿ, ತೆಗೆಸಿಬಿಡೆಂದು ಅಲ್ಲಿಂದಲೇ ಆರ್ಡರ್ ಮಾಡಿದ. ನನ್ನ ಸ್ನೇಹಿತೆ ಮತ್ತು ಅವಳ ಮನೆಯವರು ಹೌಹಾರಿದರು. ಅವಳು ಎಂಬಿಬಿಎಸ್ ಓದುವಾಗ ಭ್ರೂಣಗಳು ಇಂತಹ ಅಪಾಯಕಾರಿ ಕೆಲಸಗಳನ್ನು ಮಾಡುತ್ತವೆಂದು ಯಾವ ಪುಸ್ತಕವೂ ಹೇಳಿರಲಿಲ್ಲ. ಕಲಿಸಿದ ಪ್ರೊಫೆಸರ್‌ಗಳೂ ತಿಳಿಸಿರಲಿಲ್ಲ. ಫಲಿತಗೊಂಡ ಅಂಡಾಣು ಮನುಷ್ಯರೂಪ ಪಡೆಯಲು ಮೊದಲ ಹನ್ನೆರಡು ವಾರಗಳನ್ನು ತೆಗೆದುಕೊಳ್ಳುವುದರಿಂದ ಕೈಕಾಲು, ಮುಖ, ಹೃದಯ, ತಲೆ ಹೀಗೆ ಎಲ್ಲಾ ಅಂಗಾಂಗಗಳನ್ನು ಜೋಡಿಸಿಕೊಳ್ಳುವುದರಲ್ಲಿ ತಲ್ಲೀನವಾಗಿರುತ್ತದೆ ಎಂದು ತಿಳಿದಿದ್ದಳು. ಅದು ಹೇಗೆ ತಾನು ರೂಪ ಪಡೆಯುವುದನ್ನು ಬಿಟ್ಟು ಅಮೆರಿಕದಿಂದ ಬಂದವನ ವಾಸನೆ ಹಿಡಿದು ಬೆಂಗಳೂರಿನಿಂದ ಕೊಯಮತ್ತೂರಿಗೆ ಹೋಗಿ ಜೀವ ತೆಗೆದು ಬಂದಿತೆನ್ನುವುದು ಅವಳ ಊಹೆಗೆ ನಿಲುಕದ ವಿಷಯವಾಗಿತ್ತು. ವಿಜ್ಞಾನಿ ಗಂಡ, ಅದೂ ಅಮೆರಿಕದಂತಹ ವಿಜ್ಞಾನವೇ ಉಸಿರಾದ ದೇಶದಲ್ಲಿ ಡಾಲರ್ ಎಣಿಸುವ ಗಂಡ, ಈ ರೀತಿಯ ಮೂಢನಂಬಿಕೆಗಳಿಗೆ ಜೋತುಬಿದ್ದಿದ್ದಾನೆ ಎನ್ನುವುದನ್ನು ನಂಬಲಿಕ್ಕೆ ಆಗಲಿಲ್ಲ. ಅವನು ಹೇಳಿದನೆಂದು ಮಾನ್ಯ ಮಾಡಲು ಹೋಗದೆ ಹಠ ಹಿಡಿದು ವಾದ ಮಾಡಿ ಗೆದ್ದಳು. ಆರೋಗ್ಯವಂತ ಹೆಣ್ಣು ಮಗುವಿಗೆ ಜನ್ಮ ನೀಡಿ ಅಮೆರಿಕಾಗೆ ಕರೆದೊಯ್ದಳು.

*  *  *

ನನ್ನ ತಾಯಿಯವರ ಹಲ್ಲು ತೆಗೆಸಬೇಕಿತ್ತು. ಅದಕ್ಕಾಗಿ ದಂತ ವೈದ್ಯರೊಬ್ಬರ ಬಳಿ ಅಪಾಯಿಂಟ್‌ಮೆಂಟ್ ನಿಗದಿಗೊಳಿಸಿ ಬಂದಿದ್ದೆ. (ಆತ ದಂತ ವೈದ್ಯದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದ) ಮನೆಯಿಂದ ನಮ್ಮಮ್ಮನನ್ನು ಕರೆದುಕೊಂಡು ಹೋಗಬೇಕಿತ್ತು. ಮನೆಯ ಮುಂದಿನ ರಸ್ತೆ ಬದಿಯಲ್ಲಿ ಎಮ್ಮೆಯೊಂದು ಮೇಯುತ್ತಿತ್ತು. ನಾವು ಗೇಟು ದಾಟಿ ಬರುವ ಸಮಯಕ್ಕೆ ಸರಿಯಾಗಿ ಅದು ನಮ್ಮ ಮುಂದಿನಿಂದ ಹಾದು ಹೋಯಿತು. ಸರಿ ಇಂತಹದ್ದರಲ್ಲೆಲ್ಲ ಅಪಾರ ಶ್ರದ್ಧೆ ಭಕ್ತಿ ಭಾವ ಹೊಂದಿದ್ದ ನಮ್ಮ ತಾಯಿ ಶಕುನ ಸರಿಯಾಗಲಿಲ್ಲ, ನಾನು ಬರುವುದಿಲ್ಲವೆಂದುಬಿಟ್ಟರು. ನನಗಂತೂ ಇಂತಹದ್ದರಲ್ಲಿ ಕೂದಲಿನಷ್ಟೂ ನಂಬಿಕೆಯಿಲ್ಲ. ಯಾವುದನ್ನು ಮಾಡಬಾರದೆಂದು ಹೇಳುತ್ತಾರೋ ಅಂತಹವನ್ನು ಮಾಡಿ ನೋಡುವುದೆಂದರೆ ನನಗೆ ಬಾಲ್ಯದಿಂದಲೂ ಖುಷಿಯೇ. ಆದರೆ ನಮ್ಮ ತಾಯಿಗೆ ಏನೂ ಆಗುವುದಿಲ್ಲವೆಂದು ಹೇಳುತ್ತಿದ್ದರೂ ಒಪ್ಪುತ್ತಲೇ ಇಲ್ಲ. ಹೆಚ್ಚಿನ ಬಲವಂತ ನಾನು ಮಾಡಲಿಲ್ಲ. ಯಾಕೆಂದರೆ ವೃತ್ತಿಯಲ್ಲಿ ವೈದ್ಯೆಯಾಗಿರುವ ನನಗೆ ಚೆನ್ನಾಗಿ ತಿಳಿದಿತ್ತು, ರೋಗಿ ಮಾನಸಿಕವಾಗಿ ಸಿದ್ಧನಾಗಿಲ್ಲದಿದ್ದರೆ ಒಂದು ಸಣ್ಣ ಇಂಜೆಕ್ಷನ್ ಸಹ ಪ್ರಜ್ಞೆ ತಪ್ಪಿಸುತ್ತದೆಂದು. ರೋಗಿಯ ಸಹಕಾರವಿಲ್ಲದಿದ್ದರೆ ಏನನ್ನೂ ಮಾಡಲಾಗುವುದಿಲ್ಲ. ಕಾರಣ ಮುಂದಿನವಾರ ತೆಗೆಸಿದರಾಯಿತೆಂದು ಅವರಿಗೆ ಹೇಳಿಬರಲು ಹೊರಟೆ. ದಂತವೈದ್ಯರಲ್ಲಿ ಈ ಶಕುನದ ಬಗ್ಗೆ ಹೇಳಲು ನನಗೂ ಸಂಕೋಚವಿತ್ತು. ಆದ್ದರಿಂದ ಯಾವುದೋ ಒಂದು ನೆಪ ಹೇಳಿದೆ. ಆ ದಿನ ಭಾನುವಾರವಾಗಿತ್ತು. ಅವರು ಬಿಡುವಾಗಿದ್ದರು. ಕಾಫೀ ಕುಡಿದು ಹೋಗಲು ಒತ್ತಾಯಿಸಿದರು. ಕುಳಿತೆ. ನಂತರ ಗೊತ್ತಾಯಿತು ಈತ ನನಗೆ ಕುಳಿತುಕೊಳ್ಳಲು ಏಕೆ ಹೇಳಿದ್ದೆಂದು. ನಾನು ಅವಿವಾಹಿತೆ. ಅವರ ಪ್ರಕಾರ ಓದಿದ ಅದೂ ವೃತ್ತಿಪರ ಕೋರ್ಸುಗಳನ್ನು ಓದಿದ ಹುಡುಗ ಹುಡುಗಿಯರು ಅವಿವಾಹಿತರಾಗಿ ಉಳಿಯಲೇಬಾರದು. ಅವರ ಬುದ್ಧಿವಂತ ಜೀನ್ಸ್‌ಗಳೆಲ್ಲ ಅವರೊಂದಿಗೆ ಕೊನೆಗೊಳ್ಳಲು ಅವಕಾಶ ಮಾಡಿಕೊಡಬಾರದು ಎಂದು ಹೀಗೇ ಏನೇನೋ ಹೇಳುತ್ತಾ ಹೋಗಿ ನಾನು ಹುಟ್ಟಿದ ನಕ್ಷತ್ರ, ರಾಶಿ, ಗ್ರಹಗಳತ್ತ ನಿಂತರು. ಅದು ಒಂದೂ ನನಗೆ ಗೊತ್ತಿಲ್ಲವೆಂದೆ. ಅದರಿಂದ ಅವರೇನು ನಿರಾಸೆಗೊಳ್ಳಲಿಲ್ಲ. ಹುಟ್ಟಿದ ತಾರೀಖು ಹೇಳಿದರೆ ಅವರೇ ಹೇಳುವುದಾಗಿ ತಿಳಿಸಿ, ಏನನ್ನೋ ಗುಣಿಸಿ ಏನನ್ನೋ ಭಾಗಿಸಿ ನನಗೆ ಮಂಗಳ ಗ್ರಹದ ದೋಷವು, ರವಿಯ ದೋಷವು ಇರುವುದಾಗಿ ತಿಳಿಸಿದರು. ಈ ಎರಡೂ ನನ್ನ ಸುತ್ತ ಸರಿಯಾಗಿ ಸುತ್ತುತ್ತಿಲ್ಲದ ಕಾರಣ (ಯಾವ ಹುಡುಗನೂ ಬಾರದಂತೆ ಢಿಕ್ಕಿ ಹೊಡೆದು ಬೀಳಿಸುತ್ತಿರಬೇಕು) ನನ್ನ ವಿವಾಹವಾಗಿಲ್ಲವೆಂದು ತಿಳಿಸಿದರು. ನಂತರ ಯೋಚಿಸಿ, ಮಂಗಳ ಗ್ರಹ ಹಾಗೆ ನೋಡಿದರೆ ನಿಮಗೆ

ಜಾಸ್ತಿ ತೊಂದರೆ ಮಾಡಬಾರದು ಅಂದರು. ನಾನು ಕುತೂಹಲದಿಂದ ಯಾಕೆ ಅಂದೆ. ನೀವು ENT ಸರ್ಜನ್. ಆಪರೇಷನ್‌ಗಳನ್ನು ಮಾಡುತ್ತೀರಿ. ಆಪರೇಷನ್ ಮಾಡುವಾಗ ಹಾಕುವ Incisionಗಳಿಂದ 'ರಕ್ತ' ಸಹಜವಾಗಿ ಬರುತ್ತದಲ್ಲವೇ, ಅಷ್ಟು ರಕ್ತ ಸಾಕು ಮಂಗಳ ಗ್ರಹಕ್ಕೆ ತೃಪ್ತಿ ಹೊಂದಲು. ಅದೊಂದು ರೀತಿ ಬಲಿ ನೀಡಿದಂತೆ ಎಂದರು. ಕೇಳುತ್ತಿದ್ದ ನಾನು ತಟಸ್ಥಳಾಗಿ ಹೋದೆ. ರೋಗಿ ಗುಣಮುಖವಾಗಲೆಂದು ಮಾಡುವ ಆಪರೇಷನ್‌ಗಳಿಂದ ಬರುವ ರಕ್ತ ವೈದ್ಯನ ಗ್ರಹಗಳನ್ನು ತೃಪ್ತಿಪಡಿಸುತ್ತದೆ ಎನ್ನುವ ಹೊಸ ಸಿದ್ಧಾಂತ ಕೇಳಿ ಪ್ರತಿಕ್ರಿಯಿಸಲು ಆಗದಷ್ಟು ತಣ್ಣಗೆ ಕುಳಿತು ಅವರ ಮುಖ ನೋಡಿದೆ. ಮುಂದುವರಿಸಿದ್ದರು. ಮಂಗಳ ಗ್ರಹದ ತೊಂದರೆಗಿನ್ನ ರವಿಯದೇ ಜಾಸ್ತಿಯಿರಬೇಕು ಎಂದು ನೀವು ಉಪಯೋಗಿಸುವ ಉಪಕರಣಗಳು ಸರಿಯಾಗಿ ಕೆಲಸ ಮಾಡುತ್ತವಾ ಎಂದು ಪ್ರಶ್ನಿಸಿದರು. ಮಂಗಳ ಗ್ರಹದಿಂದ ರವಿ ಗ್ರಹ (ಸೂರ್ಯ ಗ್ರಹವಲ್ಲವೆಂದು ಐದನೇ ತರಗತಿಯಿಂದ ಕಲಿತಿದ್ದರು. ಗ್ರಹವೆಂದೇ ಹೇಳುತ್ತಿದ್ದರು.) ದೆಡೆಗೆ ಹೋಗಿದ್ದ ನೌಕೆ ನಾನು ಉಪಯೋಗಿಸುವ ಉಪಕರಣಗಳತ್ತ ಯಾಕೆ ಇಳಿಯುತ್ತಿದೆ ಎಂದು ನನಗೂ ಅರ್ಥವಾಗಲಿಲ್ಲ. ಬಹುಶಃ ಅವುಗಳಿಂದ ನಾನು ರಿಮೋಟ್ ಕಂಟ್ರೋಲ್ ಮಾಡಿ ಸೂರ್ಯನನ್ನು ತಹಬಂದಿಗೆ ತರುವ ಮಾರ್ಗ ಹೇಳುತ್ತಾರೇನೋ ಎಂದುಕೊಂಡು ಎಲ್ಲವೂ ಸರಿಯಾಗಿಯೇ ಮಾಡುತ್ತವೆ ಎಂದೆ. ಇಲ್ಲ ಡಾಕ್ಟ್ರೇ, ನೀವು ಸರಿಯಾಗಿ ಗಮನಿಸಿ ನೋಡಿ. ರವಿ ಗ್ರಹದ ತೊಂದರೆ ಇರುವವರು ಮುಟ್ಟಿದ ವಸ್ತುಗಳೆಲ್ಲ ಹಾಳಾಗಿ ಹೋಗುತ್ತವೆ. ದೀರ್ಘಕಾಲ ಬಾಳಿಕೆ ಬರುವುದಿಲ್ಲ, ನೀವು ಓಡಾಡುತ್ತಿರುವ ಸ್ಕೂಟರ್ ಸಹ ಆಗಾಗ ಕೆಟ್ಟುಹೋಗುತ್ತಿರಬೇಕಲ್ಲ. ತೀವ್ರತರದ ದೋಷವಾಗಿದ್ದರಂತು clockwise ಸುತ್ತುವ ವಸ್ತುಗಳು anticlockwise ಸುತ್ತುತ್ತವೆ. ನಾನು ಕಣ್ಣಾರೆ ನೋಡಿದ್ದೀನಿ. ನೀವು ಸ್ವಲ್ಪ ಗಮನಿಸಿ ನೋಡಿ, ಆ್ಯಕ್ಸಿಡೆಂಟ್‌ಗಳು ಆಗಲು ಇದೇ ಕಾರಣ ಎಂದರು. ನನಗೆ ಒಂದು ಕ್ಷಣ ಅನುಮಾನವಾಯಿತು. ನಾನೇನೋ ವೈದ್ಯರ ಬಳಿ ಮಾತಾಡುತ್ತಿದ್ದೇನೋ ಅಥವಾ ಕವಡೆ ಉರುಳಿಸಿ ಭವಿಷ್ಯ ಹೇಳುವ ಪಂಡಿತನೊಡನೋ, ಒಂದು ಕ್ಷಣ ಜಿಗುಪ್ಸೆ ಅಸಹ್ಯ ಎರಡೂ ಉಂಟಾಯಿತು. ನನ್ನ ತಾಯಿ ಬಾರದಿದ್ದಕ್ಕೆ ಸುಳ್ಳೇಕೆ ಹೇಳಿದೆನೆನಿಸಿತು. ಇಂತಹದ್ದನ್ನೆಲ್ಲ ನಂಬುವ ಈತ ನನ್ನ ತಾಯಿ ಕುರ್ಚಿಯಲ್ಲಿ ಕುಳಿತು, ಎಮ್ಮೆ ನೋಡಿದೆ, ದಯವಿಟ್ಟು ಹಲ್ಲು ಕೀಳಬೇಡಿ ಎಂದು ಹೇಳಿದ್ದರೆ ಈತ ಸಂಭ್ರಮದಿಂದಲೇ ಎಮ್ಮೆಯೊಂದೇ ಏಕೆ ಇನ್ನೂ ಅಂತಹ ಹತ್ತಾರು ಶಕುನಗಳಿವೆ. ಯಾವುದನ್ನು ನೋಡಿದರೆ ಮನೆಯಿಂದ ಹೊರಬರಬೇಕು, ಬೇಡ ಎಂದು ಎಲ್ಲವನ್ನೂ ಹೇಳಿಕೊಡುತ್ತಿದ್ದನೇನೋ. ನನ್ನ ತಾಯಿಯೇ ಎಷ್ಟೋ ವಾಸಿ ಎನಿಸಿತು. ಓದಿದವಳಲ್ಲ, ಅಪ್ಪಟ ಗೃಹಿಣಿ. ಮನೆಯಾಚೆಗಿನ ಬದುಕನ್ನೇ ನೋಡದವಳು. ಗ್ರಾಮೀಣ ಹೆಣ್ಣು ಮಗಳು. ನ್ಯೂಟನ್, ಐನ್‌ಸ್ಟೀನ್ ಅಂತಹ ವ್ಯಕ್ತಿಗಳು ಭೂಮಿಯಲ್ಲಿ ಜನ್ಮ ತಾಳಿದ್ದರು ಎನ್ನುವುದನ್ನೇ ತಿಳಿಯದವಳು. ಅವಳ ನಂಬಿಕೆಯಲ್ಲಿ ಮುಗ್ಧತೆಯಿತ್ತು. ಆದರೆ ಈತನಲ್ಲಿ ವಿಜ್ಞಾನ ಕಲಿತಿದ್ದರೂ ವೈಚಾರಿಕತೆಯೇ ಇರಲಿಲ್ಲ. ಅಷ್ಟೇ ಅಲ್ಲ, ಮಂಗಳ ಗ್ರಹ ತಣಿಸಲು ರೋಗಿಗಳ ಹಲ್ಲು ಕಿತ್ತಾಗ ರಕ್ತ ಬಾರದಂತೆ ತಡೆಯುವ ಬದಲು ಹೋದರೆ ಹೋಗಲಿ ಎಂದು ಬಿಡಲೂಬಹುದೆನಿಸಿ ದಿಗಿಲು ಉಂಟಾಯಿತು.

* * *

ಬೇಸಿಗೆಯ ಕಾಲದಲ್ಲಿ ಅನೇಕ ಊರುಗಳಲ್ಲಿ ಜಾತ್ರೆ ನಡೆಯುತ್ತದೆ. ನಮ್ಮ ಕುಟುಂಬದ ಸ್ನೇಹಿತನೊಬ್ಬ (ಆತ ಡಬ್ಬಲ್ ಗ್ರ್ಯಾಜ್ಯುವೇಟ್. ಬಿಎಸ್ಸಿ ಮತ್ತು ಸಿವಿಲ್ ಇಂಜಿನಿಯರಿಂಗ್ ಬಿ.ಇ.ಯನ್ನು ಪಡೆದಿದ್ದಾನೆ. ಉತ್ತಮ ಉದ್ಯೋಗದಲ್ಲೂ ಇದ್ದಾನೆ. ಆಧುನಿಕ ಉಡುಪುಗಳನ್ನು ತೊಡುತ್ತಾನೆ.... ಆಧುನಿಕ ಮನೋಭಾವದವನೆಂದು ಹೇಳಿಕೊಂಡು ತಿರುಗುತ್ತಾನೆ.) ತನ್ನೂರ ಜಾತ್ರೆಯ ವಿಡಿಯೋ ರಿಕಾರ್ಡಿಂಗ್ ಮಾಡಿದ್ದ. ಅದನ್ನು ತೋರಿಸಲು ತಂದಿದ್ದ. ಅವರೂರ ಜಾತ್ರೆಯಲ್ಲಿ 'ಗಾವು ಸಿಗಿತ'ವೆಂಬ ಅದ್ಭುತ ಪೂಜೆಯಿದೆ ನೋಡಿ ಎಂದು ಹಾಕಿದ. ನೋಡಿದರೆ ಕುರಿಮರಿಯೊಂದನ್ನು ಕೈಲಿ ಹಿಡಿದು ತಕತಕನೆ ಒಬ್ಬ ಕುಣಿಯುತ್ತಿದ್ದಾನೆ. ಮತ್ತೊಬ್ಬ ಕೊಲ್ಲದಿರೆಂದು ಬೇಡುತ್ತಿದ್ದಾನೆ. ಆದರೇನಂತೆ ಗ್ರಾಮ ದೇವತೆ ಕುಪಿತಳಾಗುತ್ತಾಳೆ. ಬಲಿ ಕೊಡದಿದ್ದರೆ ಜನ ಎಲ್ಲಾ ಕಾಯಿಲೆಯಿಂದ ಮಲಗ್ತಾರೆ ಎಂದು ಉಳಿದವರು ಸಮಾಧಾನ ಮಾಡಿ ಕೊಲ್ಲಬೇಡವೆಂದು ಬೇಡುತ್ತಿದ್ದವನನ್ನು ಎಳೆದುಕೊಳ್ಳುತ್ತಿದ್ದಾರೆ. ಕುರಿಮರಿ ಕೈಲಿ ಹಿಡಿದವನು ಈಗ ಅದನ್ನು ಮೇಲಕ್ಕೂ ಕೆಳಕ್ಕೂ ಎಸೆದು ಹಿಡಿಯುತ್ತಾ ಕುತ್ತಿಗೆಯನ್ನು ಕಚ್ಚುತ್ತಾ ರಕ್ತ ಹೀರುತ್ತಾ ಉಗಿಯುತ್ತಿದ್ದ. ನೋಡಲು ಅದು ನಿಜಕ್ಕೂ ಹೇಸಿಗೆ ಹುಟ್ಟಿಸುವಷ್ಟು ಅಸಹ್ಯವಾಗಿತ್ತು. ಇದೇ ರೀತಿ ೩-೪ ಕುರಿ/ಆಡಿನ ಮರಿಗಳನ್ನು ಬೀಭತ್ಸವಾಗಿ ಕೊಂದುಹಾಕಿದರು. ಒಂದು ಅಮಾಯಕ ಪ್ರಾಣಿ ಮರಿಯನ್ನು ಮನುಷ್ಯನೊಬ್ಬ ಬಾಯಲ್ಲಿ ಕಚ್ಚಿಕಚ್ಚಿ ಕೊಂದುಹಾಕುವುದು 'ಗಾವು ಸಿಗಿತ'ವಂತೆ, ಅದರಿಂದ ಊರಿನ ಜನ ಕಾಯಿಲೆಯಿಂದ ಪಾರಾಗುತ್ತಾರಂತೆ. ಇಂತಹ ಒಂದು ಅನಾಗರಿಕ ವರ್ತನೆಯನ್ನು ಕಾನ್ವೆಂಟ್‌ನಲ್ಲಿ ಓದಿ ದೊಡ್ಡ ದೊಡ್ಡ ನಗರಗಳಲ್ಲಿ ಬಾಲ್ಯ ಜೀವನ ಕಂಡ ಒಬ್ಬ ಇಂಜಿನಿಯರ್ ಹೆಮ್ಮೆಯಿಂದ ರೆಕಾರ್ಡ್ ಮಾಡಿಕೊಂಡು ನಾಲ್ಕು ಜನರಿಗೆ ತೋರಿಸುತ್ತಿದ್ದ. ಅಷ್ಟೇ ಅಲ್ಲ, ಮನೆಗೆ ಒಳ್ಳೆಯದಾಗಲೆಂದು ಒಂದು ಕುರಿಯನ್ನು ಹೊಸಿಲ ಮೇಲೆ ಮಲಗಿಸಿ ತಲೆ ಕಡಿಯುತ್ತಿದ್ದರು. ಅಲ್ಲಿ ಈತನು ನಗುತ್ತಾ ನಿಂತುಕೊಂಡು ಒಂದು ಫೋಟೋ ತೆಗೆಸಿಕೊಂಡಿದ್ದ. ಎರಡೆರಡು ವಿಜ್ಞಾನದಲ್ಲಿ ಪದವಿ ಪಡೆದರೂ ವ್ಯಕ್ತಿತ್ವ ವಿಕಾಸವೇ ಇಲ್ಲ. ತನ್ನೂರ ಜನ ತನ್ನ ರಕ್ತಸಂಬಂಧಿಗಳು ಅದೇ ನಂಬಿಕೆಗಳ ಮೇಲೆ ಕೊಳೆತುಹೋಗುತ್ತಿದ್ದರೆ ಅವರನ್ನೆತ್ತುವ ಪ್ರಯತ್ನ ಮಾಡದೆ ಅವರ ನಂಬಿಕೆಗಳಿಗೆ ಈತನೂ ಕೈ ಜೋಡಿಸಿ ನಮಸ್ಕರಿಸಿ ಹಣೆಯ ಮೇಲೆ ಕುಂಕುಮವಿಟ್ಟುಕೊಂಡು ಬಂದಿದ್ದ.

ಈ ತರಹದ ಘಟನೆಗಳನ್ನು ಬರೆಯುತ್ತಾ ಹೋದರೆ ಬೇಕಾದಷ್ಟು ಆದೀತು. ವಿಜ್ಞಾನದ ಪದವಿ ಪಡೆದರೂ ಚಂದ್ರಗ್ರಹಣ, ಸೂರ್ಯಗ್ರಹಣ ಹೇಗೆ ಆಗುತ್ತದೆ ಎಂದು ಗೊತ್ತಿದ್ದರೂ ಕದ ಮುಚ್ಚಿ ಬಾಗಿಲೊಳಗೆ ಕೂರುವ ಭೌತಶಾಸ್ತ್ರ ಪ್ರಾಧ್ಯಾಪಕರಿದ್ದಾರೆ. ಇಂತಹವರಿಗೆ ವಿಜ್ಞಾನದ ಪದವಿ ಅಗತ್ಯವೇ? ಇವರು ಸಮಾಜಕ್ಕೆ ನೀಡುವ ಉಡುಗೊರೆಯಾದರೂ ಏನು?

(ಸತ್ಯ ಘಟನೆಗಳು)

ಡಾ॥ ಶೈಲಜಾ ಕೆ. ಆರ್.
೩ನೇ ಮುಖ್ಯರಸ್ತೆ, ಕೆ. ಆರ್. ಬಡಾವಣೆ, ತಿಪಟೂರು - ೫೭೨ ೨೦೨

## ಶ್ರದ್ಧಾಂಜಲಿ



ತಮ್ಮ ಕವನಗಳ ಮೂಲಕ
ಮಲ್ಲಿಗೆಯ ಕಂಪು ಬೀರಿ
ಮರೆಗೆ ಸರಿದುಹೋದ
ಶ್ರೀ ಕೆ. ಎಸ್. ನರಸಿಂಹಸ್ವಾಮಿ
(೨೮.೧೨.೨೦೦೩)
ಅವರ ನೆನಪಿಗೆ 'ಹೊಸತು'
ಶ್ರದ್ಧಾಂಜಲಿ ಅರ್ಪಿಸುತ್ತದೆ.

## ಅನ್ನಪೂರ್ಣೆಗೆ

ಆ ದೇವರು, ಈ ದೇವರು
ಉಳಿವರೆ ಈಗಿಲ್ಲಿ?
ಇಂದೆಲ್ಲರು ಕೈಮುಗಿವರು
ನಿನಗೊಬ್ಬಳಿಗಿಲ್ಲಿ

ಕತ್ತಲೆಯಲಿ ಬತ್ತಲೆಯಲಿ
ತಲೆಗೆದರಿದೆ ಬದುಕು;
ಕಣ್ಣೆಲ್ಲೋ ಎತ್ತರದಲಿ;
ತುಟಿ ದುಃಖದ ಬಿರುಕು

ಪೇರೊಕ್ಕಲು! ಈ ಮಕ್ಕಳು
ಬಡವರ ಮೈಸಾಲ
ನೆಲದೇವಿಯೆ ಉಸ್ಸೆನುವಳು;
ಕಂಗೆಟ್ಟಿತು ಕಾಲ.

ತುಟಿ-ತುತ್ತಿನ ಅಂತರದಲಿ
ಹೆಡೆಯೆತ್ತಿದೆ ಹಾವು;
ಇಂಪೊಗೆಯುವ ಸವಿಗೊರಲಲಿ
ಕುಡಿಯೊಡೆದಿದೆ ನೋವು

ನೀನಿಲ್ಲದ ಮನೆಮನೆಯಲಿ
ಏನಿದ್ದೂ ವ್ಯರ್ಥ
ಹಸಿದೊಡಲಿನ ಕಗ್ಗವಿಯಲಿ
ಹಾಡೆಲ್ಲ ಅನರ್ಥ.

■ ಕೆ. ಎಸ್. ನರಸಿಂಹಸ್ವಾಮಿ

# ಕೃತ್ತಿಕೆಗೂ ಗ್ರಹಣ?



**ಶು**ಭ್ರವಾದ ಆಕಾಶ. ಪಶ್ಚಿಮದಲ್ಲಿ ಪ್ರಜ್ವಲಿಸುವ ಬೆಳ್ಳಿ (ಶುಕ್ರ). ಪೂರ್ವದಲ್ಲಿ ಶನಿ. ನೆತ್ತಿಯಲ್ಲಿ ಮಂಗಳ – ಇವು ಸಂಜೆಯ ಆಕಾಶದ ದಿಕ್ಸೂಚಿಗಳೆನ್ನಬಹುದು. ಆಕಾಶದ ತುಂಬಾ ಚುಕ್ಕೆಗಳ ಸಾಮ್ರಾಜ್ಯ. ಚುಕ್ಕೆಗಳಲ್ಲದೆ ಬೇರಿನ್ನೇನು ಇರಲು ಸಾಧ್ಯ ಎನ್ನದಿರಿ. ಕಳೆದ ತಿಂಗಳುಗಳಲ್ಲಿ ಮಂಕಾಗಿದ್ದ ಮಕರ, ಕುಂಭ ಪಶ್ಚಿಮದ ಆಕಾಶದಲ್ಲಿದ್ದವು. ಹಾಗಾಗಿ ಶುಕ್ರದ ಹೊರತಾಗಿ ಅಲ್ಲಿ ವಿಶೇಷವೇನೂ ಕಾಣುತ್ತಿರಲಿಲ್ಲ. ದಕ್ಷಿಣವೂ ಬರಡಾಗಿತ್ತು. ವೈತರಣೀ (ಎರಿಡಾನಿಸ್) ಪುಂಜದ ನಕ್ಷತ್ರವೊಂದು ಏಕಾಂಗಿಯಂತೆ ಕಾಣುತ್ತಿತ್ತು. ಈಗ ಅದಕ್ಕೆ ತದ್ವಿರುದ್ಧ. ಉತ್ತರದಲ್ಲಿ ಕುಂತಿ (ಕಾಸಿಯೋಪಿಯ), ಪರ್ಸಿಯುಸ್ (ಅರ್ಜುನ) – ಈ ಕಲಾವಿದರ ರಂಗಸಜ್ಜಿಕೆ. ಪಶ್ಚಿಮದಲ್ಲಿ ಕಂತುತ್ತಿರುವ ಪೆಗಸಸ್ (ನಕುಲ) ಚೌಕ. ಪ್ರಜ್ವಲಿಸುವ ಬೆಳ್ಳಿಯ ಪಕ್ಕ ಇವನ್ನು ಗುರುತಿಸಬಹುದು. ಹಾಗೆಯೇ ದಿಗಂತದ ಅಂಚಿನಲ್ಲೇ ದೃಷ್ಟಿಯನ್ನು ಮುಂದುವರಿಸಿದರೆ ಪ್ರಜ್ವಲಿಸುವ ಏಕಾಂಗಿ ವೈತರಣೀ ಮುಖ (ಆಚೆರ್ನಾರ್) ಕಾಣುತ್ತದೆ. ದಕ್ಷಿಣ ದಾಟಿ ಪೂರ್ವದತ್ತ ಮುಂದುವರಿಸಿ ಅಲ್ಲೊಂದು ನಕ್ಷತ್ರ. ವೈತರಣೀ ಮುಖದ ಪ್ರತಿಬಿಂಬವೋ ಎಂಬಂತೆ. ಇದೇ ಅಗಸ್ತ್ಯ (ಕನೋಪಸ್); ಪ್ರಕಾಶದಲ್ಲಿ ಎರಡನೆಯ ಸ್ಥಾನ ಪಡೆದ ನಕ್ಷತ್ರ ಇದು. ಮೊದಲನೆಯ ಸ್ಥಾನ ಯಾರಿಗೆ ಎಂದು ನೀವು ಕೇಳುವುದೇ ಬೇಡ. ಅಲ್ಲೇ ಸ್ವಲ್ಪ ಮೇಲಕ್ಕೆ ಪ್ರಜ್ವಲಿಸುತ್ತಿದೆ ಸಿರಿಯಸ್ (ಲುಬ್ಧಕ).




ದಕ್ಷಿಣಕ್ಕೆ ತಿರುಗಿ ನಿಂತು ಸಿರಿಯಸ್, ಕನೋಪಸ್, ಆಚೆರ್ನಾರ್‌ಗಳನ್ನೇ ಗಮನಿಸಿ. ಬಣ್ಣಗಳ ವ್ಯತ್ಯಾಸವೇನಾದರೂ ಕಂಡೀತೆ ಎಂದು ಗಮನಿಸಿ. ಸಿರಿಯಸ್‌ನ ಬಣ್ಣ ಉಜ್ವಲ ಬಿಳಿ. ಆದರೆ ಕನೋಪಸ್ ಮತ್ತು ಆಚೆರ್ನಾರ್‌ಗಳ ಬಣ್ಣ ಕ್ಷಣ ಕ್ಷಣಕ್ಕೂ ಬದಲಾದಂತೆ ಕಾಣುತ್ತದೆ. ದುರ್ಬೀನಿನಿಂದ ನೋಡಿದಾಗಲೂ ಅವುಗಳ ಬಣ್ಣ ಸ್ಥಿರವಾಗಿರುವುದಿಲ್ಲ. ಈ 'ಕಿತಾಪತಿ'ಯ ಸೃಷ್ಟಿಕರ್ತ ನಮ್ಮ ಸುತ್ತಲಿರುವ ಗಾಳಿಯೇ. ದಿಗಂತದಂಚಿನಲ್ಲಿರುವ ಯಾವುದೇ ಆಕಾಶ ಕಾಯದ ಬಣ್ಣವನ್ನೂ ಅದು ಹೀಗೆ ಮಾರ್ಪಡಿಸುತ್ತಿರುತ್ತದೆ. ಸೂರ್ಯ, ಚಂದ್ರರನ್ನೂ ಬಿಟ್ಟಿಲ್ಲ. ಆದ್ದರಿಂದಲೇ ಅವು ಮುಳುಗುವಾಗ, ಉದಯಿಸುವಾಗ ಕೆಂಪಾಗಿ ಕಾಣುವುವು.

ನೆತ್ತಿಯ ಸಮೀಪದಲ್ಲಿರುವ ವೃಷಭ, ಆರಿಗಾ (ವಿಜಯಸಾರಥಿ), ಒರೈಯನ್, ಮಹಾಶ್ವಾನ (ಕ್ಯಾನಿಸ್ ಮೇಜರ್) – ಇವುಗಳ ಸೌಂದರ್ಯವನ್ನೀಗ ಗಮನಿಸಿ. ಚಂದ್ರನಿಲ್ಲದಿದ್ದಾಗ ಈ ಪುಂಜಗಳ ಮೂಲಕ ಕುಂತಿಯವರೆಗೂ ಹಾದುಹೋಗುವ ಆಕಾಶಗಂಗೆಯ ಹರಿವನ್ನು ಗಮನಿಸಬಹುದು. ಈ ಕಾರಣದಿಂದಲೇ ಇಲ್ಲಿ ನಕ್ಷತ್ರಗಳ ದಟ್ಟಣೆ ಹೆಚ್ಚು.

ಸುಮಾರು ೮-೯ ಗಂಟೆಯ ಹೊತ್ತಿಗೆ ಮತ್ತೆ ಆಕಾಶವನ್ನು ಗಮನಿಸಿ. ಕಾಸಿಯೋಪಿಯ ದಿಗಂತದ ಅಂಚನ್ನು ಮುಟ್ಟಿರುತ್ತದೆ. ಪೆಗಸಸ್ ಚೌಕದ ಎರಡು ನಕ್ಷತ್ರಗಳು ಮಾತ್ರ ಕಾಣುತ್ತಿರುತ್ತವೆ. ಆಕಾಶಗಂಗೆಯ ಭಾಗ ನೆತ್ತಿಗೇ ಬಂದಿರುತ್ತದೆ. ಶುಕ್ರವಿನ್ನೂ ಕಂತಿಲ್ಲ. ಅದರ ಬಣ್ಣದ ವಿನ್ಯಾಸ ನೋಡಿ. ಕೆಂಪು, ನೀಲಿ – ಬಣ್ಣದಿಂದ ಬಣ್ಣಕ್ಕೆ ಫಳಗುಟ್ಟುತ್ತಿದೆ. ಇನ್ನೇನು ಕಂತಲಿದೆ ಎನ್ನುವಾಗ ಅದರ ಬಣ್ಣವೂ ಕೆಂಪು ಎಂಬುದನ್ನು ಗಮನಿಸಿ. ಈಗ ಪೂರ್ವದತ್ತ ದೃಷ್ಟಿಹರಿಸಿ. ಅಲ್ಲೊಂದು ಕೆಂಪು ಚುಕ್ಕೆ. ಶುಕ್ರದ ಪ್ರತಿಬಿಂಬವೇ ? ಅಲ್ಲ, ಅದು ಗುರುಗ್ರಹ. ಕಳೆದ ತಿಂಗಳು ಶನಿಗ್ರಹವನ್ನು ಭೂಮಿ ಹಿಂದೆ ಹಾಕಿ ಓಡಿತ್ತಲ್ಲ. ಈಗ ಗುರುಗ್ರಹದ ಸರದಿ. ದಿನೇ ದಿನೇ ಅದರ ಪ್ರಕಾಶ ಹೆಚ್ಚುತ್ತಿದೆ. ದೂರದರ್ಶಕ ಇರುವವರು ಸಜ್ಜಾಗಿ ಶನಿಯ ಉಂಗುರಗಳ ಜೊತೆಗೆ ಗುರುವನ್ನೂ ಕಾಣುವ ಅವಕಾಶ ಸಮೀಪಿಸುತ್ತಿದೆ.

ಕ್ರಾಂತಿವೃತ್ತ ಎಂಬುದೊಂದು ಕಾಲ್ಪನಿಕ ವೃತ್ತ. ಸೂರ್ಯ ಚಲಿಸುವ (ಚಲಿಸಿದಂತೆ ಕಾಣುವ) ಹೆದ್ದಾರಿ. ಇದನ್ನು ಗುರುತಿಸಲು ಈಗೊಂದು ಪ್ರಯತ್ನ ಮಾಡಿ. ಶುಕ್ರ, ಮಂಗಳ, ಶನಿ ಮತ್ತು ಗುರು – ಈ ನಾಲ್ಕೂ ಗ್ರಹಗಳ ಮೂಲಕ ಹಾದುಹೋಗುವ ವೃತ್ತವೊಂದನ್ನು ಕಲ್ಪಿಸಿಕೊಳ್ಳಿ. ಅದೇ ಕ್ರಾಂತಿ ವೃತ್ತ. ಸೂರ್ಯನ ತೋರಿಕೆಯ ಚಲನೆಯ ಪಥ. ಅಂದಾಜಾಗಿ ಚಂದ್ರನದೂ ಎನ್ನಬಹುದು.

ಗಗನದ ಮಾರ್ಗದರ್ಶಿ ಚಂದ್ರ ಮೂರನೆಯ ತಾರೀಖು ಶನಿಗ್ರಹದ ಪಕ್ಕದಲ್ಲೇ ಕಾಣುತ್ತದೆ. ಮಿಥುನದಲ್ಲಿದೆ ಶನಿ. ಮುಂದೆ ಸರಿದ ಚಂದ್ರ ೫ರಂದು ಕಟಕರಾಶಿಯ ಪ್ರೆಸಿಪಿ ಎಂಬ ನಕ್ಷತ್ರಗುಚ್ಛದ ಪಕ್ಕದಲ್ಲಿ ಕಾಣುತ್ತದೆ. ಆದರೆ ಚಂದ್ರನ ಬೆಳಕೇ ಇದನ್ನು ಬರಿಗಣ್ಣಿನಿಂದ ನೋಡಲು ಅಡ್ಡಿ ಉಂಟುಮಾಡುತ್ತದೆ. ಮರುದಿನ ಹುಣ್ಣಿಮೆ. ಅಂದು ಚಂದ್ರನ ಪಕ್ಕ ಕಾಣುವ ನಕ್ಷತ್ರವೇ ಮಘ. ಆದ್ದರಿಂದ ಈ ತಿಂಗಳ ಹೆಸರೇ ಮಾಘ. ಎಂಟರಂದು ಗುರುಗ್ರಹದ ಪಕ್ಕ ೧೪ರಂದು ಜ್ಯೇಷ್ಠಾ ನಕ್ಷತ್ರದ ಪಕ್ಕ ಹಾದು ೨೦ರಂದು ರಜೆ ತೆಗೆದುಕೊಳ್ಳುತ್ತದೆ (ಅಮಾವಾಸ್ಯೆ). ಆಮೇಲೆ ಸಂಜೆಯ ಆಕಾಶದಲ್ಲಿ ಪುನಃ ಪ್ರತ್ಯಕ್ಷವಾಗುವುದು. ೨೩-೨೪ರಲ್ಲಿ ಶುಕ್ರಗ್ರಹದ ಆಚೀಚೆ ಕಂಡರೆ, ೨೫-೨೬ರಲ್ಲಿ ಮಂಗಳ ಗ್ರಹವನ್ನು ದಾಟುವುದು. ಇದೊಂದು ಬಗೆಯ ಗ್ರಹಣವೇ. ಆಚ್ಛಾದನೆ (occultation) ಎಂಬುದು ವೈಜ್ಞಾನಿಕ ನಾಮಧೇಯ. ಈ ಘಟನೆಯನ್ನು ನೋಡುವುದು ಮಾತ್ರ ಎಲ್ಲರಿಗೂ ಲಭ್ಯವಿಲ್ಲ. ಮಂಗಳಕ್ಕೆ ಅಂಟಿಕೊಂಡಂತೆ ಕಾಣುವ ಚಂದ್ರ ಛಾಯಾಗ್ರಹಣಕ್ಕೆ ಉತ್ತಮ ವಸ್ತುವಾಗುವುದು. ಮುಂದೆ ಸಾಗುವ ಚಂದ್ರನನ್ನು ಬಿಡದೆ ಹಿಂಬಾಲಿಸಿ. ೨೭ರಂದು ಅದು ಕೃತ್ತಿಕಾ ಎಂಬ ನಕ್ಷತ್ರ ಗುಚ್ಛವನ್ನೇ 'ಗ್ರಹಣ' ಮಾಡಲು ಹೊರಟಿರುವುದನ್ನು ಕಾಣಬಹುದು. ಇದೊಂದು ಅಪೂರ್ವ ದೃಶ್ಯ. ಇದನ್ನು ಬರಿಗಣ್ಣಿನಿಂದ ನೋಡಲೂಬಹುದು; ಯಾವುದೇ ಅಪಾಯವಿಲ್ಲ. ಛಾಯಾಗ್ರಹಣಕ್ಕೆ ಮತ್ತೊಂದು ಅಪೂರ್ವ ಅವಕಾಶ.

ಕೃತ್ತಿಕಾ ಯಾವುದು ? ಇದನ್ನು ತಿಳಿಯಲು ನೀವು ಹಿಂದಿನ ರಾತ್ರಿಗಳಲ್ಲಿ ಚಂದ್ರ ನಿಲ್ಲದಾಗ ಹುಡುಕುವ ಪ್ರಯತ್ನ ನಡೆಸಬಹುದು. ನಕ್ಷೆಯಲ್ಲಿ ವೃಷಭ ಎಂದು ನಮೂದಿಸಲಾಗಿರುವ ಭಾಗದಲ್ಲಿ ಷ ಎಂಬ ಅಕ್ಷರದ ಮೇಲೆ ಇದೆ. ಸುಲಭವಾಗಿ ಗುರುತಿಸಬಹುದಾದ ಒರೈಯನ್‌ನಿಂದ ಆರಂಭಿಸಿ. ಇಲ್ಲಿ ನಿಮಗೆ ನ್ಯೂಝಿಲೆಂಡ್‌ನವರ ಕಲ್ಪನೆಯೊಂದು ಸಹಾಯವಾಗಬಹುದು. ಟಾಮರೆಟ್ಟಿ ಎಂಬ ನಾವಿಕನೊಬ್ಬ ದೋಣಿಯನ್ನು ಅವರಲ್ಲಿ ಕಲ್ಪಿಸಿಕೊಂಡಿದ್ದಾನೆ. ಈ ದೋಣಿಯ ನಾವಿಕನ ಸ್ಥಾನದಲ್ಲಿದೆ ಕೃತ್ತಿಕಾ ಗುಚ್ಛ. ಒರೈಯನ್‌ನ ಮೇಲರ್ಧ ದೋಣಿಯ ಚುಕ್ಕಾಣಿಯಾಗಿದೆ. ಬಹಳ ಸಭ್ಯನಾಗಿದ್ದ ಈತ ತಿನ್ನಬಾರದು ಎಂದು ನಿಷೇಧಿಸಲಾಗಿದ್ದ ಮೀನನ್ನು ತಿಂದುಬಿಟ್ಟನಂತೆ. ಅದು ಗಂಟಲಲ್ಲಿ ಸಿಕ್ಕಿಕೊಂಡು ಸತ್ತು ಹೋದನಂತೆ. ಇದು ಅಲ್ಲಿಯ ಸ್ಥಳೀಯರಲ್ಲಿ ಪ್ರಚಲಿತವಿರುವ ಕಥೆ.

ಡಾ|| ಬಿ. ಎಸ್. ಶೈಲಜಾ

ನಮ್ಮಲ್ಲಿ ಕೃತ್ತಿಕೆ ಎಂಬುದು ಸಪ್ತಮಾತೃಕೆಯರ ಗುಂಪು. ಶಿವನ




ಮಗನನ್ನು ಪೋಷಿಸಿದವರು ಈ ಏಳು 'ತಾರೆ'ಯರು. ಆದ್ದರಿಂದ ಅವನ ಹೆಸರು ಕಾರ್ತಿಕೇಯ ಎಂದಾಯಿತು. ಈ ಸಪ್ತಮಾತೃಕೆಯರು ದೇವಪಟ್ಟ ಪಡೆದವರು. ಇವರನ್ನೂ ಚಂದ್ರ ಬಿಡುವವನಲ್ಲ– 'ಗ್ರಹಣ' 'ಹಿಡಿ'ಸುತ್ತಾನೆ!

**ಖಗೋಳ ದಿನಚರಿ**

ಫೆಬ್ರವರಿ ೩ ಚಂದ್ರನಿಂದ ೪ ಡಿಗ್ರಿ ಅಂತರದಲ್ಲಿ ಶನಿ
೫ ಪ್ರೆಸಿಪಿ ನಕ್ಷತ್ರಗುಚ್ಛದ ಪಕ್ಕದಲ್ಲಿ ಚಂದ್ರ
೬ ಹುಣ್ಣಿಮೆ (೧೪:೧೭ಕ್ಕೆ)
೮ ಚಂದ್ರನಿಂದ ೩ ಡಿಗ್ರಿ ಅಂತರದಲ್ಲಿ ಗುರು
೧೩ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
೧೯ ಚಂದ್ರನಿಂದ ೩ ಡಿಗ್ರಿ ಅಂತರದಲ್ಲಿ ಬುಧ (ನೋಡುವುದು ದುಸ್ತರ)
೨೦ ಅಮಾವಾಸ್ಯೆ (೧೪:೪೮ಕ್ಕೆ)
೨೩ ಚಂದ್ರನಿಂದ ೩ ಡಿಗ್ರಿ ಅಂತರದಲ್ಲಿ ಶುಕ್ರ
೨೬ ಚಂದ್ರನಿಂದ ೧ಡಿಗ್ರಿ ಅಂತರದಲ್ಲಿ ಮಂಗಳ
(ಆಚ್ಛಾದನೆ; ಪೆಸಿಫಿಕ್ ಸಾಗರದಿಂದ ಕಾಣುತ್ತದೆ)
೨೭ ಕೃತ್ತಿಕಾ ನಕ್ಷತ್ರ ಪುಂಜದ ಪಕ್ಕದಲ್ಲಿ ಚಂದ್ರ
೨೮ ಚಾಂದ್ರಮಾಸದ ಪ್ರಥಮ ಪಾದ (ಚಂದ್ರಾಸ್ತ ನಡುರಾತ್ರಿಗೆ)

**ಡಾ|| ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರೂ ತಾರಾಲಯ, ಬೆಂಗಳೂರು - ೫೬೦ ೦೦೧

# ಪದುಮಾವತಿ



**ಆ**ಕಾಶರಾಯನಿಗೊಬ್ಬಳೇ ಮಗಳು
ಇನ್ನಿಲ್ಲದಂಥ ಭಾಗ್ಯವಂತೆ
ಹೆಸರು ಪದುಮಾವತೀ ದೇವಿ
ಮೂಲೋಕ ಬೆರಗಾದ ರೂಪವಂತೆ

ಮುಖವೆಂಬೊ ಕಮಲದಲಿ ಕಣ್ಣೆಂಬೊ ಕಮಲಗಳು
ಕವಿಸಮಯ ಚಾತುರ್ಯ ನಿಜಗೊಂಡಿತೋ
ಅದೃಷ್ಟದೇವತೆಗೆ ಮನೆ ಬದಲು ಸಾಕಾಗಿ
ಈ ಹುಡುಗಿ ಕುಂಡಲಿಯೆ ಸ್ವಸ್ಥಳವಾಯಿತೋ

ನಕ್ಷತ್ರಕನ್ನೆಯರ ಬೆನ್ನು ಕಂಡವರಿಲ್ಲ
ಪದುಮಾವತಿ ಕಣ್ಣೆಂದೂ ನೀರುದುಂಬಿಲ್ಲ
ಕೇಳಿದರೆ ಸಾಕಿವಳು ತನ್ನಿಚ್ಛೆ ತನಿಯನ್ನು
ಪಾತಾಳದಲ್ಲಡಗಿದರೂ ಅದಕುಳಿಗಾಲವಿಲ್ಲ

ಎಲ್ಲಿದ್ದ ಎಲ್ಲಿದ್ದ ಎಲ್ಲಿದ್ದನವ ತಬ್ಬಲಿ ಹುಡುಗ
ನಸೆಹುಲ್ಲ ಗುಡಿಲಲ್ಲಿ ಅಜ್ಜಿತೊಡೆಯಲ್ಲಾಡಿದವನು
ಅರಮನೆಯ ಕಲಶಕ್ಕೆ ಕಣೆಗಲ್ಲ ಎಸೆದವನು
ಸಾಲಮಾಡಿಯಾದರೂ ಸರಿ ತುಪ್ಪ ತಿಂಬುವವನು

ಅರಮನೆಯನ್ನೊದೆದು ಹುತ್ತಮನೆಯಾದವನ ತಬ್ಬಿದಳೇ ಪದುಮಾವತಿ
''ಇರುವುದೆಲ್ಲವ ಬಿಟ್ಟು ಇರದಿದುರೆಡೆಗೆ'' ನಡೆದಳೇ ಪದುಮಾವತಿ
ಯಾವ ಕಾಲದ ಒಗಟು ಯಾರೂ ಒಡೆಯರು ಏಕೋ
ಮೋಹವೆನ್ನುವ ಮೋಹಕ್ಕೇ ಸದಾ ಗೆಲುವು ಏಕೋ

ಜಯವಿಜಯರನು ಹೊರಜಗುಲಿಯಲೆ ಇಟ್ಟು
ಏಳು ದ್ವಾರಗಳಾಚೆ ಅಡಗಿದೆಯೆ ಪರಮಪದ ಗುಟ್ಟು
ಏಳು ಬೆಟ್ಟದ ಬುಡದಲ್ಲಿ ಹಗಲೆಲ್ಲ ಬಿಟ್ಟ ಕಣ್ಣನು ಬಿಟ್ಟು
ಕೂತಿರುವಳೇ ಬಾಲೆ ಮಲೆಯ ತುದಿಗೇ ತನ್ನ ಕಣ್ಣನೆಟ್ಟು

ದೊಡ್ಡಹೆಂಡಿರ ಕಣ್ಣಕಾವಲು ಕಳೆದು ಇಳಿದು ಬಂದಾನೇ ಶ್ರೀನಿವಾಸ
ಇಂದಿನಿರುಳಾದರೂ ನನ್ನ ಅನುನಯಿಸಿಯಾನೆ ನನ್ನ ಶ್ರೀನಿವಾಸ
ಹೇ ಶ್ರೀನಿವಾಸ ಹೇ ಶ್ರೀನಿವಾಸ
ಹೇ ಶ್ರೀನಿವಾಸ ..................

ಲಲಿತಾ ಸಿದ್ದಬಸವಯ್ಯ, ನಂ. ೫೨೧೭, ೨ನೇ ಕ್ರಾಸ್, ಅಶೋಕನಗರ, ತುಮಕೂರು - ೫೭೨ ೧೦೩

**Time table and portion list for the midterm examination 2003**
**Timings 8.30 am to 12.30 pm**

| | |
|---|---|
| 15.09.03 Sanskrit oral | 24.09.03 English written |
| 16.09.03 Story telling | 25.09.03 Preparatory holiday |
| 17.09.03 Rhymes (8) | 26.09.03 Maths oral |
| 18.09.03 Hindi oral | 27.09.03 Sanskrit Slokas 1,2,3 |
| 19.09.03 Preparatory holiday | 28.09.03 Preparatory holiday |
| 20.09.03 General Knowledge | 29.09.03 Kannada oral ಅ...ಅಃ |
| 21.09.03 Preparatory holiday | 30.09.03 Maths written |
| 22.09.03 English oral | 1,2.10.03 Preparatory holiday |
| 23.09.03 Preparatory holiday | 03.10.03 Drawing |

ಸುದೀರ್ಘ ಪಟ್ಟಿಯನ್ನು ನೋಡಿ ನಿಜಕ್ಕೂ ಹೌಹಾರಿದಿರಾ ? ಬೆಚ್ಚಿಬಿದ್ದಿರಾ ? ಇದ್ಯಾವ IAS, IPS ಪರೀಕ್ಷೆಗೆ ಸಿದ್ಧತೆಯಪ್ಪಾ ಎಂದು ತಲೆ ಕೆರೆದುಕೊಂಡಿರಾ ? ಯಾವುದೋ ಅಖಿಲ ಭಾರತ ಸ್ಪರ್ಧಾತ್ಮಕ ಪರೀಕ್ಷೆಯ ವೇಳಾಪಟ್ಟಿ ಎಂದುಕೊಂಡಿರಾ ? ಸ್ವಾಮೀ, ಕ್ಷಮಿಸಿ, ಅದ್ಯಾವುದೂ ಅಲ್ಲ. ಇನ್ನೂ ೩-೪ ವರ್ಷ ಪೂರ್ಣ ತುಂಬದ, ಹಸಿಹಸಿ ಕಣ್ಣುಬಿಡುತ್ತಿರುವ

# ಎಳೆಯ ಮಕ್ಕಳ ಪರೀಕ್ಷೆಗಳೆಂಬ ಆಕ್ಟೋಪಸ್

ಸಿ. ಎಚ್. ಕೃಷ್ಣಶಾಸ್ತ್ರಿ ಬಾಳಿಲ



ಎಲ್‌ಕೆಜಿ ಮಕ್ಕಳು ಇಂದು ಎಲ್ಲ 'ಪ್ರತಿಷ್ಠಿತ' ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಎದುರಿಸಬೇಕಾದ ಮಧ್ಯಾವಧಿ ಪರೀಕ್ಷೆಯ time table ಮತ್ತು portion list. ನಾಲ್ಕು ವಾಕ್ಯ ಕನ್ನಡದಲ್ಲಾಗಲಿ, ಇಂಗ್ಲಿಷಿನಲ್ಲಾಗಲಿ ಸರಿಯಾಗಿ ಹೇಳಲು, ಓದಲು, ಕೇಳಿ ಅರ್ಥೈಸಿಕೊಳ್ಳಲು ಬಾರದ ಮುಗ್ಧ ಹಸುಳೆಗಳ ಮುಂದೆ ಈ ಅಗ್ನಿದಿವ್ಯ. ಅದಕ್ಕೆ ತಯಾರಿ ನಡೆಸಲು ಮಧ್ಯ ಮಧ್ಯದಲ್ಲಿ preparatory holiday. ಇದು ಇಂದಿನ ಯಾವ ಕಾಲೇಜಿನ, ವಿಶ್ವವಿದ್ಯಾನಿಲಯದ ಪರೀಕ್ಷಾ ವೇಳಾಪಟ್ಟಿಗೆ ಕಡಿಮೆ ಇದೆ ಹೇಳಿ ! ಎಲ್‌ಕೆಜಿ ಹಂತದಲ್ಲೇ ೪ ಭಾಷೆಗಳೂ ಸೇರಿ ಒಟ್ಟು ೧೨ ವಿಷಯಗಳು. ಇದಕ್ಕಾಗಿ ಸುಮಾರು ೨೦ ದಿನಗಳ ಕಾಲ ನಡೆಯುವ ಪರೀಕ್ಷಾ ಪ್ರಕ್ರಿಯೆಯ ಅವಧಿಯಲ್ಲಿ ಆ ಮಕ್ಕಳ ಮೇಲಿರುವ ಒತ್ತಡ, ಬಿಗಿತ, ಕಳವಳ, ಇತ್ಯಾದಿಗಳನ್ನು ಊಹಿಸಿಕೊಳ್ಳಿ. ಇಂತಹ ಸನ್ನಿವೇಶದಲ್ಲಿ ಶಾಲೆಗೆ ಹೊರಟ ಮಗುವಿನ ಮುದ್ದಾದ ಕೆನ್ನೆಯ ಮೇಲೆ ಮುತ್ತಿಕ್ಕಿ, Have a nice day ಎಂದು ಮುಗುಳ್ನಕ್ಕು, ಯಾವ ತಾಯಿ ತನ್ನ ಮಗ/ಮಗಳನ್ನು ಶಾಲೆಗೆ ಕಳಿಸಲು ಸಾಧ್ಯ ? ಇದರ ಬದಲಾಗಿ ಪರೀಕ್ಷೆಯ ದಿನ ಗಂಭೀರ ಮುಖ ಮುದ್ರೆಯಿಂದ ತಾಯಿಯ ಪ್ರತಿಕ್ರಿಯೆ ಏನು ? ''ಇಕೋ, ಕಳೆದ ಸಲದ ಹಾಗೆ ಗಡಿಬಿಡಿ ಮಾಡಬೇಡ. ಮಿಸ್ ಕೇಳಿದ ಪ್ರಶ್ನೆಗಳಿಗೆ ಸರಿಯಾಗಿ ಉತ್ತರ ಹೇಳು. ಬರೆಯುವಾಗ ತಪ್ಪು ಮಾಡಬೇಡ. ನೀನು ಈ ಬಾರಿ ಫಸ್ಟ್ ಬರಬೇಕು, ಗೊತ್ತಾಯ್ತೋ ?'' ಎಂದಲ್ಲವೇ ? ಹಾಗಾಗಿಯೇ ಇರಬೇಕು, ಮಕ್ಕಳ ಕಷ್ಟಗಳನ್ನು ಅರ್ಥಮಾಡಿಕೊಂಡ ಡಾ|| ಶಿವರಾಮ ಕಾರಂತರು ಹೇಳುತ್ತಾರೆ, ''ನಾವು ನಮ್ಮ ಮಕ್ಕಳನ್ನು ಇಂತಹ ಹಿಂಸಾಲಯಕ್ಕೆ, ಮರ್ದನಾಲಯಕ್ಕೆ ಕಳಿಸುವ ಶಿಶುಪಾಲರಾಗಬಾರದು.'' (ಅವರು ಆಗಲಿಲ್ಲ ಕೂಡಾ) (Ref : ಶಿವರಾಮ ಕಾರಂತರ ಲೇಖನಗಳು ಸಂಪುಟ-೨. ಸಂಪಾದಕಿ. ಬಿ. ಮಾಲಿನಿ ಮಲ್ಯ. ಪ್ರಕಟಣೆ : ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾನಿಲಯ.)

ಆಡಿ, ಹಾಡಿ, ಕುಣಿದು ಕುಪ್ಪಳಿಸುತ್ತಾ, ಹಕ್ಕಿಗಳ ಕಲರವ ಕೇಳುತ್ತಾ, ಬಣ್ಣ ಬಣ್ಣದ ಚಿಟ್ಟೆಗಳ ಹಾರಾಟ ನೋಡುತ್ತಾ, ಸಾಕು ಪ್ರಾಣಿಗಳನ್ನು ಮುಟ್ಟಿ ಮುದ್ದಿಸುತ್ತಾ, ಪ್ರಕೃತಿಯ ಗಿಡ, ಬಳ್ಳಿ, ಚಿಗುರು, ಎಲೆ, ಹೂ, ಹಣ್ಣುಗಳು ನೀಡುವ ಸ್ಪರ್ಶ ಸುಖವನ್ನು ಅನುಭವಿಸುತ್ತಾ, ಬಾಲ್ಯದ ಸೊಗಸನ್ನು ಖುಷಿ ಪಡುತ್ತಾ ನಲಿಯಬೇಕಾದ ಮಕ್ಕಳು ಶಾಲೆಯ ಪರೀಕ್ಷಾ ಕೊಠಡಿಗಳಲ್ಲಿ ಬಂಧಿತರಾಗಿ, ಶಿಕ್ಷಕರ ಮೇಲ್ವಿಚಾರಣೆಯಲ್ಲಿ ಪರೀಕ್ಷೆ ಎದುರಿಸಬೇಕಾದ ಸನ್ನಿವೇಶವನ್ನು ಊಹಿಸಿದಾಗಲೇ ನನ್ನಲ್ಲಿ ಒಂದು ರೀತಿಯ ನಡುಕ ಉಂಟಾಗುತ್ತಿದೆ. ಮುಂದಿನ ಪರೀಕ್ಷೆಗಳಿಗೆ ತರಾತುರಿಯಿಂದ ತಯಾರು ಮಾಡುವ (advance preparation) ಇಂತಹ ಕ್ರೂರ ವ್ಯವಸ್ಥೆಗೆ ಮಕ್ಕಳು ಸಜ್ಜಾಗುತ್ತಿರುವುದನ್ನು, ಪರಿಣಾಮವಾಗಿ ಅವರ ಬಾಲ್ಯದ ಸೊಗಸುಗಾರಿಕೆಯೇ ಹೊಸಕಿ ಹೋಗುತ್ತಿರುವುದನ್ನು ನೋಡಿ ಗಾಬರಿಯಾಗುತ್ತಿದೆ. ಅಪಾರ ಜ್ಞಾನ ಕುತೂಹಲವನ್ನು ಬೆಳೆಸಿಕೊಳ್ಳುತ್ತಾ, ತಮ್ಮ ಮುಂದಿನ ಬಾಳಿಗೆ ಹಾಗೂ ಶೈಕ್ಷಣಿಕ ಮೆಟ್ಟಿಲುಗಳಿಗೆ ಅವಶ್ಯವಾದ ಬೌದ್ಧಿಕ ಸಿದ್ಧತೆಯನ್ನು (preparedness) ಮಕ್ಕಳು ಹೊಂದಬೇಕೇ ಹೊರತು, ಅದೆಂದೂ ಪರೀಕ್ಷೆಗೆ ನಡೆಸುವ ಯಾಂತ್ರಿಕ ತಯಾರಿಯಾಗಬಾರದು ಎಂಬ ಶಿಕ್ಷಣಶಾಸ್ತ್ರಜ್ಞರ ಮಾತು ಮತ್ತೆ ನೆನಪಾಗುತ್ತಿದೆ.



''ಅಮ್ಮಾ, ಪರೀಕ್ಷೆ ಎಂದರೇನು ? ಅದಕ್ಕೆ ನಾನೇನು ಮಾಡಬೇಕು ? ಅಂದು ಆಟ ಆಡ್ಲಿಕ್ಕೆ ಉಂಟಾ ?'' ಹೀಗೆಲ್ಲಾ ಮಕ್ಕಳು ಮನೆಗೆ ಬಂದು ಸಹಜ ಕುತೂಹಲದಿಂದ ಕೇಳಿದಾಗ, ತಾಯಿ ಏನೆಂದು ಉತ್ತರಿಸಿಯಾಳು ? ಮಕ್ಕಳನ್ನು ಗದರಿಸಿ, ಶಾಲೆಯಲ್ಲಿ ಹೇಳಿದ rhymes, ಸಂಸ್ಕೃತ ಶ್ಲೋಕ, ಹಿಂದಿ, ಕನ್ನಡ

ಪದ್ಯಗಳು ಮತ್ತು ಅಕ್ಷರಗಳು, ಗಣಿತ, ಸಾಮಾನ್ಯಜ್ಞಾನ... ಇತ್ಯಾದಿಗಳನ್ನು ಮಗುವಿಗೆ ಬಾಯಿಪಾಠ ಕಲಿಸುವುದಷ್ಟೇ ಇಲ್ಲಿ ತಾಯಿ ಮಾಡುವ ಕೆಲಸ. ಮತ್ತೆ ಶಾಲೆಯಲ್ಲಿ ಶಿಕ್ಷಕರು ಪ್ರಶ್ನಿಸಿದಾಗ ಜೀರ್ಣವಾಗದೆ ಕಂಠದಲ್ಲೇ ಉಳಿದ, ಅರ್ಥವಾಗದೆ ಮೈಗೂಡದ ಈ 'ವಸ್ತು'ಗಳನ್ನು ಬಲಾತ್ಕಾರವಾಗಿ ಹೊರಗೆ ಹಾಕುವುದಷ್ಟೇ ಮಕ್ಕಳು ಮಾಡುವ ಕೆಲಸ. ಈ ಹಂತದಲ್ಲಿ, ಬಹುತೇಕ ಮುಂದಿನ ಹಂತಗಳಲ್ಲೂ, ಪರೀಕ್ಷೆ ಎಂದರೆ ಸರಿಸುಮಾರಾಗಿ ಇಷ್ಟೇ ತಾನೇ ! ತಮ್ಮ ಸ್ವಂತಿಕೆ, ಸೃಷ್ಟಿಶೀಲತೆ, ಕೌಶಲ, ಆಸಕ್ತಿಗಳನ್ನು ಬೆಳೆಸುವ, ಅರಳಿಸುವ ಅವಕಾಶಗಳು ಮಕ್ಕಳಿಗೆ ಇಂತಹ ಪರೀಕ್ಷೆಗಳಿಂದ ಸಿಗುತ್ತವೆಯೇ ? ಇಂತಹ ಬಿಗು ಶಾಲಾ ವಾತಾವರಣದಿಂದ ಮಕ್ಕಳಿಗೆ ಖುಷಿಯಾಗುತ್ತಿದೆಯೇ ? ಜಪಾನಿನ ಖ್ಯಾತ ಶಿಕ್ಷಣ ಚಿಂತಕ ಮಕಿಗುಚಿ ತನ್ನ ಕೃತಿ Education for creative life (ಸೃಷ್ಟಿಶೀಲ ಬದುಕಿಗಾಗಿ ಶಿಕ್ಷಣ-ಕನ್ನಡಕ್ಕೆ ಡಾ|| ಸುಮತೀಂದ್ರ ನಾಡಿಗ, ಪ್ರಕಟಣೆ. National Book Trust of India)ನಲ್ಲಿ ಹೇಳುವಂತೆ, ಶಿಕ್ಷಣದ ಮೊದಲ ಮತ್ತು ಕೊನೆಯ ಉದ್ದೇಶ ಆನಂದ. ಅದು ಅರಿವಿನಿಂದ, ಅನುಭವದಿಂದ, ಜ್ಞಾನದಿಂದ, ಸಾಧನೆಯಿಂದ, ಸಿದ್ಧಿಯಿಂದ ಸಿಗುವಂತಹದು. ಆ ಸಂತಸವೇ ಬಾಳಿನ ಸೌಂದರ್ಯ. ಅದೇ ಸಾರ್ಥಕ್ಯದ ಭಾವ. ಇದಕ್ಕೆ ಹೊರತಾದ ಶಿಕ್ಷಣವೆಂದರೆ, ಕೇವಲ ಕಸಕಡ್ಡಿಗಳನ್ನು ಒಳಕ್ಕೆ ತುಂಬಿ, ಹೊರಗೆಸೆಯುವ ಅರ್ಥಹೀನ ಕ್ರಿಯೆ ಅಷ್ಟೇ ಹೊರತು ಅದೆಂದೂ ಅರ್ಥಪೂರ್ಣ ಕಲಿಕೆಯಾಗದು.

ಎಳೆಯ ವಯಸ್ಸಿನಿಂದಲೇ ಹೀಗೆ ಹೆಚ್ಚೆಚ್ಚು ಪರೀಕ್ಷೆಗಳನ್ನು ಎದುರಿಸಿದರೆ ಮಕ್ಕಳ ಕಲಿಕಾ ಸಾಮರ್ಥ್ಯ ಹೆಚ್ಚುತ್ತದೆಯೇ ? ಒಂದು ಶೈಕ್ಷಣಿಕ ಅಧ್ಯಯನದ ವರದಿಯ ಪ್ರಕಾರ ಹೆಚ್ಚೆಚ್ಚು ಪರೀಕ್ಷೆಗಳು ಮಕ್ಕಳಲ್ಲಿ ಕಲಿಕಾ ಅಸಾಮರ್ಥ್ಯವನ್ನು (learning disability) ಹೆಚ್ಚಿಸುತ್ತವೆ. ಪರೀಕ್ಷೆಯ 'ಗುಮ್ಮ'ನಿಂದಾಗಿ ಮಕ್ಕಳಲ್ಲಿ ಪುಸ್ತಕ ದ್ವೇಷ ಬೆಳೆಯುತ್ತದೆ. ನಿಜವಾದ ಜ್ಞಾನಾರ್ಜನೆಗೆ, ತಿಳಿವಿಗೆ, ಅರಿವಿಗೆ ಅದು ತಡೆಯನ್ನುಂಟುಮಾಡುತ್ತದೆ. ಈ ಪರೀಕ್ಷೆಗಳ ಭರಾಟೆಯಿಂದಾಗಿ, ಕಲಿಕೆಗೆ ಸಹಾಯಕವಾಗುವ ಕತೆ ಪುಸ್ತಕಗಳ ಓದಿಗೆ, ಚಟುವಟಿಕೆಗಳಿಗೆ ಮಕ್ಕಳಿಗೆ ಸಮಯವಾಗಲಿ, ಅವಕಾಶವಾಗಲಿ ಎಲ್ಲಿ? ಆದ್ದರಿಂದ ಎಲ್‌ಕೆಜಿ ತರಗತಿಯಿಂದಲೇ ತುಂಬ ಗಂಭೀರವಾಗಿ ಇಂತಹ ಪರೀಕ್ಷೆಗಳನ್ನು ನಡೆಸುವುದಕ್ಕೆ ಯಾವ ಶೈಕ್ಷಣಿಕ ಸಿದ್ಧಾಂತದ, ಕಲಿಕಾ ತತ್ವದ ಸಮರ್ಥನೆ ಇದೆ ? ಹೋಗಲಿ; ಇಂತಹ ಪರೀಕ್ಷೆಗಳ ಅಂತಿಮ ಉದ್ದೇಶವಾದರೂ ಏನು ? ಮಕ್ಕಳ ಕಲಿಕಾ ದೌರ್ಬಲ್ಯವನ್ನು ಗುರುತಿಸಿ ಅವರಿಗೆ ನೆರವಾಗುವುದಕ್ಕಲ್ಲ. ಪರಿಹಾರ ಬೋಧನೆಗಾಗಿ ಅಲ್ಲ. ಅವರನ್ನು ಕಲಿಕಾ ಹಳಿಗೆ ತರುವುದಕ್ಕಾಗಿ ಅಲ್ಲ. ಕೇವಲ 'ದಡ್ಡ'ರಾರು, 'ಬುದ್ಧಿವಂತ'ರಾರು ಎಂದು ತೂಗಿ ನೋಡುವುದಕ್ಕೆ; ಅಷ್ಟೆ. ಮಕ್ಕಳನ್ನು ಪರಸ್ಪರ ಸ್ಪರ್ಧೆಗೊಡ್ಡಿ ಚಂದ ನೋಡುವುದಕ್ಕೆ. ರ್‍ಯಾಂಕ್ ಘೋಷಿಸಿ ಒಬ್ಬಿಬ್ಬರನ್ನು ಬಹುಮಾನಿಸಿ, ಉಳಿದವರನ್ನು ಅವಮಾನಿಸುವುದಕ್ಕೆ. ಅವರ ಬಾಳನ್ನು ಗೋಳಾಗಿಸುವುದಕ್ಕೆ. ಇದರ ಹೊರತಾದ ಇನ್ಯಾವ ಉದ್ದೇಶವಿದೆ ಹೇಳಿ ! ಆಧುನಿಕ ಶಿಕ್ಷಣ ಪರಿಕಲ್ಪನೆಯಾದ ಸಹಕಾರದ ಕಲಿಕೆ, ಸಹಯೋಗದ ಕಲಿಕೆ (collaborative learning) ಇಂತಹ ಪರೀಕ್ಷಾ ವ್ಯವಸ್ಥೆಯಲ್ಲಿ ಹೇಗೆ ಸಾಧ್ಯ ?

ಇನ್ನು ಪರೀಕ್ಷೆಯ ಮುಂದಿನ ಹಂತವಾಗಿ ಮಕ್ಕಳನ್ನು ನಲುಗಿಸುವ ಅಭಿವೃದ್ಧಿ ಪತ್ರ. ಅದರಲ್ಲಿ ಕಡಿಮೆ ಅಂಕಗಳು ಬಂದಾಗ ಕೆಂಪು ಗೆರೆ. ಪೋಷಕರ ಸಹಿ. ಮನೆಯಲ್ಲಿ, ಶಾಲೆಯಲ್ಲಿ ಗದರಿಕೆ, ಶಿಕ್ಷೆ, ಬೈಗುಳ ಇತ್ಯಾದಿ. ಒಟ್ಟು ಈ ಪರೀಕ್ಷಾ ಪ್ರಕ್ರಿಯೆಯೇ ಎಂತಹ ಒಂದು ಭಯಾನಕ ಸನ್ನಿವೇಶವನ್ನು ಸೃಷ್ಟಿಸುತ್ತದೆಂದರೆ, ಮಕ್ಕಳು ಮುಂದೆ ಕಲಿಕೆಯನ್ನೇ ದ್ವೇಷಿಸಿ, ಪುಸ್ತಕ ಪ್ರೀತಿಯಿಂದ ದೂರ ಸರಿಯುತ್ತಾರೆ. ಕೇವಲ ಪರೀಕ್ಷೆಗಷ್ಟೇ ತಯಾರಿ ನಡೆಸಿ, ಕಲಿಕೆಯ ಸಂತಸದಿಂದ ವಂಚಿತರಾಗುತ್ತಾರೆ. ಆದ್ದರಿಂದಲೇ ಕರ್ನಾಟಕ ಸರ್ಕಾರ ೪ನೇ ತರಗತಿಯವರೆಗೆ ಯಾವುದೇ ಹಂತದ ಪರೀಕ್ಷೆಗಳನ್ನು ಮಾಡದೆ ಮಕ್ಕಳಲ್ಲಿ ಕೌಶಲ, ಸಾಮರ್ಥ್ಯಗಳನ್ನು ಬೆಳೆಸಬೇಕೆಂದೂ, ಅದರ ಮೌಲ್ಯಮಾಪನಕ್ಕೆ-ಪರೀಕ್ಷೆಗಲ್ಲ-ಹೊಸ ವಿಧಾನಗಳನ್ನು ಅಳವಡಿಸಿಕೊಳ್ಳಬೇಕೆಂದೂ ಈಗೆರಡು ವರ್ಷಗಳ ಹಿಂದೆಯೇ ಆದೇಶ ನೀಡಿದೆ.

After all, KG (Kinder Garten) ಎಂಬ ಮಕ್ಕಳ ಶಾಲೆಯ ಪರಿಕಲ್ಪನೆಯೇನು ? ಜರ್ಮನಿಯ ಫ್ರೆಡ್ರಿಕ್ ಫ್ರೋಬೆಲ್ (Frederic Froebel) ಎಂಬ ಶಿಕ್ಷಣ ಚಿಂತಕನ ಬಹು ಸುಂದರ ಪರಿಕಲ್ಪನೆ ಇದು. ಆತನ ಪ್ರಕಾರ ಅದು ಹೊರಜಗತ್ತನ್ನು ಕಾಣುವ ಮಕ್ಕಳ ವನ; (ಡಾ|| ಕಾರಂತರು ಹೇಳುವ ಬಾಲವನ) ಮಕ್ಕಳ ಹೂದೋಟ. ಇತರ ಮಕ್ಕಳೊಡನೆ ಬೆರೆತು ಆಡುತ್ತಾ, ನೋಡುತ್ತಾ, Socialise ಆಗುತ್ತಾ, ತಮಗಿಷ್ಟವಾದ್ದನ್ನು ಮುಟ್ಟಿ, ತಟ್ಟಿ, ಮೂಸಿ, ಹಿರಿಯರ ಮಾರ್ಗದರ್ಶನದೊಂದಿಗೆ ಸ್ವಕಲಿಕೆಯ ದಾರಿಯಲ್ಲಿ ಮುಂದೆ ಸಾಗುವುದು. ಮಗು ಹೆತ್ತಬ್ಬೆಯ ಕೈಯಿಂದ ಬೆತ್ತಬ್ಬೆಯ ಕೈಗೆ, ಮನೆಯ ಮೂರ್ತ ವಾತಾವರಣದಿಂದ ಶಾಲೆಯ ಅಮೂರ್ತ ವಾತಾವರಣಕ್ಕೆ ತೆರೆದುಕೊಂಡಾಗ ಆಗುವ ಸ್ಥಿತ್ಯಂತರ ಆಘಾತ (transitional shock)ವನ್ನು ತಡೆದುಕೊಳ್ಳಲು ಸಾಧ್ಯವಾಗಿಸುವ ಒಂದು ತಾಣವೇ KG. ಮನೆಯ ಪರಿಚಿತ ಪರಿಸರದಿಂದ ಶಾಲೆಯ ಅಪರಿಚಿತ ಪರಿಸರಕ್ಕೆ ಹೊಂದಿಕೊಳ್ಳುವವರೆಗಿನ ಆಘಾತವನ್ನು ಮಿದುಗೊಳಿಸುವ (to ease the shock) ಇನ್ನೊಂದು ಮಧುರ ಮನೆಯೇ ಕೆಜಿ. ಅಲ್ಲಿ ಮಕ್ಕಳಿಗೆ ಆಟ ಬೇಕು, ನಗೆ ಬೇಕು, ಹಾಡು ಕುಣಿತ ಬೇಕು, ಅಭಿನಯ ಬೇಕು, ಚಿತ್ರ ಬೇಕು; ಜೊತೆಗೆ ಸುತ್ತಲೂ ಪ್ರೀತಿಯ ಸೆಲೆ ಬೇಕು, ಆಪ್ತತೆಯ ಸ್ಪರ್ಶ ಬೇಕು, ತನ್ನ ಚಟುವಟಿಕೆಗಳಿಗೆ ಹಿರಿಯರ ಅನುಮೋದನೆ ಬೇಕು; ತನ್ನ ಸಾಧನೆಗೆ ಗುರುತಿಸುವಿಕೆ ಬೇಕು; ತಾನು ಸಾಗುತ್ತಿರುವ ದಾರಿ ಸರಿಯಾದುದೆಂಬುದರ ಬಗೆಗೆ ದೃಢೀಕರಣ ಬೇಕು; ಹಿರಿಯರಿಂದ ಸ್ವೀಕರಣ ಬೇಕು; ತನ್ನ ಪ್ರಯತ್ನಗಳಿಗೆ ಪ್ರೋತ್ಸಾಹ ಬೇಕು; ಮೆಚ್ಚುಗೆ ಬೇಕು; positive strokes ಬೇಕು; ಸುತ್ತಲೂ ಮುಗುಳ್ನಗೆಯ ವಾತಾವರಣ ಬೇಕು. ಒಟ್ಟಿನಲ್ಲಿ ಮಗುವಿಗೆ ತನ್ನ ಮನೆಯ ವಿಸ್ತರಣೆಯಾಗಿ ಶಾಲೆ ಕಂಡು ಬರಬೇಕು. ಇದರ ಬದಲಾಗಿ ಶಾಲೆಯಲ್ಲಿ ಇಂಗ್ಲಿಷ್ ಅಕ್ಷರ ಮಾಲೆ (೨೬ ಸಣ್ಣ + ೨೬ ದೊಡ್ಡ), ಗಣಿತ, ಸಂಸ್ಕೃತ ಶ್ಲೋಕ, ಸಾಮಾನ್ಯಜ್ಞಾನ... ಸ್ವಾಮೀ ಏನಿದೆಲ್ಲಾ ? ಮಕ್ಕಳ ನಗೆ ಚೆಲ್ಲುವ ಹೂ ಮನಸ್ಸು ಇದನ್ನೆಲ್ಲ ಹೊರಬಲ್ಲುದೇ ? (ಯಾಕಾಗಿ ಹೊರಬೇಕು ?) ಹೊತ್ತರೂ ತಾಳಿಕೊಳ್ಳಬಲ್ಲುದೇ ? ತಾಳಿಕೊಂಡರೂ ಬಾಳಬಲ್ಲುದೇ ? ಇಂದು ಎಳೆಯ ಮಕ್ಕಳ ಮೇಲಾಗುತ್ತಿರುವ ಈ ಶೈಕ್ಷಣಿಕ ಹಿಂಸೆ, ಕ್ರೌರ್ಯ, ಮರ್ದನಗಳ ಬಗೆಗೆ, ಅವರು ಮೌನವಾಗಿ ಅನುಭವಿಸುತ್ತಿರುವ ನರಕಯಾತನೆಗಳ ಬಗೆಗೆ ನೀವೇ ಒಂದು ಕ್ಷಣ ನಿಂತು ಯೋಚಿಸಿ. ಕಿರು, ಮರಿ, ಮಧ್ಯಾವಧಿ, ವಾರ್ಷಿಕ ಪರೀಕ್ಷೆಗಳು, ಮಾರ್ಕುಗಳು, ರ್‍ಯಾಂಕುಗಳು ಇತ್ಯಾದಿಗಳಿಂದ ವಿಜೃಂಭಿಸುತ್ತಿರುವ ಕೆಜಿ ತರಗತಿಗಳು ಇಂದು ಮಕ್ಕಳ ವನವೂ ? ಅಲ್ಲ ಸೆರೆಮನೆಯೊ ? ಇಲ್ಲಿ ಮಕ್ಕಳ ಸೃಷ್ಟಿಶೀಲ ಬದುಕಿನ ನಿರ್ಮಾಣವೂ ? ಅಲ್ಲ ನಿರ್ನಾಮವೋ ? ಫ್ರೋಬೆಲ್‌ನ ಮಕ್ಕಳ ವನ (KG)ದ ಪರಿಕಲ್ಪನೆಯ ಪ್ರಕಾರ ಈಗ ಪ್ರಚಲಿತವಿರುವ LKG, UKGಗಳೆಂಬ ತರಗತಿಗಳಲ್ಲ. (ಇತ್ತೀಚೆಗೆ ಇವೆರಡಕ್ಕೆ MKG ಎಂದರೆ Middle KG ಎಂಬ ಇನ್ನೊಂದು ಪಿಡುಗೂ ಸೇರಿಕೊಂಡಿದೆ) ಮೂಲತಃ ಇದು ಕೇವಲ ಒಂದೇ ವರ್ಷಕ್ಕಷ್ಟೇ ಸೀಮಿತವಾದ್ದು (just a shock absorber). ಅಲ್ಲಿ ಅಕ್ಷರಾಭ್ಯಾಸವಿಲ್ಲ, ಪರೀಕ್ಷೆಗಳಿಲ್ಲ, ಅಭಿವೃದ್ಧಿ ಪತ್ರಗಳಿಲ್ಲ, portion list ಇಲ್ಲ, ಬೆಲ್ ಇಲ್ಲ, ಮಕ್ಕಳಿಗೆ ಮನಕಳುಕಿರದ ಮುಕ್ತ, ನಿರ್ಭಯ ವಾತಾವರಣ. ಇನ್ನೊಂದು ಮುಖ್ಯ ವಿಶೇಷವೆಂದರೆ ಅಲ್ಲಿ ಇಂಗ್ಲಿಷ್ ಮೀಡಿಯಂ ಇಲ್ಲ. ಹಾಗಾದರೆ ಸಂವಹನ ಮಾಧ್ಯಮ ? ಮಕ್ಕಳು ಗ್ರಹಿಸುವ, ಅವರಿಗೆ ಅರ್ಥವಾಗುವ, ಅವರ ಅಭಿವ್ಯಕ್ತಿಗೆ ಸುಲಭವಾಗಿ ನಿಲುಕುವ ಮೀಡಿಯಂ. ಇಲ್ಲಿಯ ಸಂದರ್ಭದಲ್ಲಿ ಅದು ಕನ್ನಡ ಇರಬಹುದು; ಇನ್ನೊಂದೂ ಇರಬಹುದು; ಅಥವಾ ಮಿಶ್ರಭಾಷೆಯೂ ಇರಬಹುದು. ಒಟ್ಟು, ಮಕ್ಕಳಿಗೆ ಹಿತವಾಗುವ ಸನ್ನಿವೇಶ ಇರಬೇಕಷ್ಟೆ.

ಎಳೆಯ ಮಕ್ಕಳ ಆರಂಭಿಕ ಶಿಕ್ಷಣದ ಕುರಿತು ಸಾಕಷ್ಟು ಆಳವಾಗಿ ಚಿಂತನೆ ನಡೆಸದೆ, ಕೇವಲ ಪರೀಕ್ಷೆಯೊಂದೇ ಪ್ರಧಾನವಾಗಿರುವ ಇಂತಹ ಅಮಾನವೀಯ, ಅವೈಜ್ಞಾನಿಕ ವ್ಯವಸ್ಥೆಗೆ ಮಕ್ಕಳನ್ನು ಒಡ್ಡುವುದು ಅವರಿಗೆ ಒಂದು ಅತ್ಯಂತ ಕೆಟ್ಟ ಶೈಕ್ಷಣಿಕ ಶಿಕ್ಷೆಯಾಗುತ್ತದೆ. ಇದು ಮಕ್ಕಳ ಮುಂದಿನ ವ್ಯಕ್ತಿತ್ವ ಬೆಳವಣಿಗೆಯ ದೃಷ್ಟಿಯಿಂದ ತುಂಬ ಅಪಾಯಕಾರಿಯಾದ್ದು ಮತ್ತು ಹಾನಿಕಾರಕವಾದ್ದು. ಪರೀಕ್ಷೆಯ ಭಯ, ಅದರಲ್ಲಾಗುವ ಸೋಲಿನ ಭಯ, ಅವಮಾನಗಳು ಮುಂದೆ ಮಕ್ಕಳಲ್ಲಿ ಖಿನ್ನತೆ, ಕೀಳರಿಮೆ, ಮಾನಸಿಕ ಸಮಸ್ಯೆ ಇತ್ಯಾದಿಗಳಿಗೆ ದಾರಿ ಮಾಡಿಕೊಡಬಹುದು. ಮಕ್ಕಳ ಮನೋವಿಜ್ಞಾನದಲ್ಲಿ ಇಂದು ಇಷ್ಟೆಲ್ಲ ಬೆಳವಣಿಗೆಯಾಗುತ್ತಿದ್ದರೂ, ಶಿಕ್ಷಣ ಕ್ಷೇತ್ರದಲ್ಲಿ ಇಷ್ಟೊಂದು ಅಧ್ಯಯನ, ಸಂಶೋಧನೆ, ಪ್ರಯೋಗಗಳು ನಡೆಯುತ್ತಿದ್ದರೂ, ಶಿಕ್ಷಕರಾಗಲಿ, ಪೋಷಕರಾಗಲಿ ಮಕ್ಕಳ ಮನಃಸ್ಥಿತಿಯನ್ನು ಅರಿತುಕೊಂಡು, ಅವರನ್ನೇಕೆ ಇಂತಹ ಪರೀಕ್ಷಾ ಬಂಧನಗಳಿಂದ, ಶೈಕ್ಷಣಿಕ ಆತ್ಮಹತ್ಯೆಯಿಂದ ಬಿಡುಗಡೆ ಮಾಡುವುದಿಲ್ಲವೆಂಬುದು ನನ್ನಲ್ಲಿ ಅಪಾರ ಸೋಜಿಗವನ್ನುಂಟುಮಾಡಿದೆ.

ಒಂದುಕಡೆ ನಮ್ಮ ಸರಕಾರ ೪ನೇ ತರಗತಿವರೆಗೆ ಪರೀಕ್ಷೆಗಳನ್ನೇ ರದ್ದುಗೊಳಿಸಿ, ಮುಂದಿನ ತರಗತಿಗಳಲ್ಲಿ ಪರೀಕ್ಷಾವಧಿಯನ್ನೂ, ಪಠ್ಯಾಧಾರಿತ ಪ್ರಶ್ನೆಗಳನ್ನೂ ಕಡಿತಗೊಳಿಸಿ, ಒಂದು ಸ್ವಾಗತಾರ್ಹ ಬದಲಾವಣೆಯನ್ನು ಶೈಕ್ಷಣಿಕ ವ್ಯವಸ್ಥೆಯಲ್ಲಿ ತರಲು ಮುಂದಾಗಿರುವಾಗ, ಇನ್ನೊಂದು ಕಡೆ ನಮ್ಮ ಆಂಗ್ಲ ಮಾಧ್ಯಮಶಾಲೆಗಳ ಎಲ್‌ಕೆಜಿ ತರಗತಿಗಳೇ ಪರೀಕ್ಷೆಯೆಂಬ ಆಕ್ಟೋಪಸ್ ಹಿಡಿತಕ್ಕೆ ಸಿಕ್ಕಿರುವುದು ಮಕ್ಕಳ ದೌರ್ಭಾಗ್ಯವಲ್ಲದೆ ಮತ್ತೇನು ?

ಪಿ. ಎಚ್. ಕೃಷ್ಣಶಾಸ್ತ್ರಿ ಬಾಳಿಲ
ಹೊಸಮನೆ, ಅಡ್ಯನಡ್ಕ, ಮೂಡಂಬೈಲು - ೫೭೪ ೨೬೦

# ನಗು

## ಜ್ಯೇಷ್ಠ ನಾಗರಿಕರಿಗೆ ಸರ್ವೋತ್ಕೃಷ್ಟ ಆರೋಗ್ಯವರ್ಧಕ

ಎನ್. ಆರ್. ದೇಶಪಾಂಡೆ



ಜೀವ ಜಗತ್ತಿನಲ್ಲಿ ಮಾನವ ಜನ್ಮವೇ ಅತಿ ಮುಖ್ಯವಾದದ್ದು. ಮಾನವನು ಬಹಳ ಬುದ್ಧಿವಂತ ಪ್ರಾಣಿ ಎಂದು ಹೇಳುತ್ತಾರೆ. ಮಾನವ ಜನ್ಮ ದೊಡ್ಡದು. ಇದು ಹಾನಿ ಮಾಡಬೇಡಿರಿ ಹುಚ್ಚಪ್ಪಗಳಿರಾ ಎಂದು ಪುರಂದರದಾಸರು ಹೇಳಿದ್ದಾರೆ. ಮಾನವನಿಗೆ ಮಾತ್ರ ದೇವರು ಬುದ್ಧೀಂದ್ರಿಯಗಳನ್ನು, ವಿಚಾರಮಾಡಿ ನಿರ್ಣಯ ತೆಗೆದುಕೊಳ್ಳುವ ಶಕ್ತಿ ಕೊಟ್ಟಿದ್ದಾನೆ. ನಗು, ದುಃಖ, ಕೋಪಾದಿಗಳನ್ನು ವ್ಯಕ್ತಪಡಿಸಲು ವಿಶೇಷ ವರವನ್ನು ಮಾನವ ಹುಟ್ಟಿನಿಂದಲೇ ಪಡೆದು ಬಂದಿದ್ದಾನೆ. ಇವೇ ಮಾನವ ಮತ್ತು ಪ್ರಾಣಿಗಳಲ್ಲಿರುವ ವ್ಯತ್ಯಾಸ.

ನಮ್ಮ ಮನಸ್ಸಿನ ಭಾವನೆಗಳಿಗೆ ನಾವು ರೂಪು ಕೊಡಲು ನಮ್ಮ ಮುಖವೇ ಒಂದು ಪರದೆ. ಅದಕ್ಕೇ Face is the index of mind ಎಂದು ಹೇಳುತ್ತಾರೆ. ಮುಖದ ಮೇಲೆ ಮೂಡುವ ಗೆರೆಗಳಿಂದಲೇ ಒಬ್ಬರು ನಗುತ್ತಿರುವರೋ, ಕೋಪಗೊಂಡಿರುವರೋ ಎಂದು ದೂರದಿಂದಲೇ ತಿಳಿಯಬಹುದು. ಮಗುವನ್ನು ಒಲಿಸಿಕೊಳ್ಳಲು ನಮ್ಮ ಮುಗುಳು ನಗೆ ಸಾಕು. ಅದೇ ಕೋಪಗೊಂಡವರ ಹತ್ತಿರ ಮಗು ಎಂದೂ ಬರಲಾರದು.

ಹಾಗಾದರೆ ನಗುವಿಗೆ ಏಕೆ ಇಷ್ಟು ಮಹತ್ವ ? ಆಯಾ ಎಲ್ಲ ವಿಕಾರಗಳಿಗೂ ಆರೋಗ್ಯಕ್ಕೂ ನಿಕಟ ಸಂಬಂಧವಿದೆ. ಮನಸ್ಸಿನ ಭಾವನೆಗಳನ್ನು ವ್ಯಕ್ತಪಡಿಸಲು ನಮ್ಮ ನರಮಂಡಲದಲ್ಲಿ ಅನೇಕ ಬದಲಾವಣೆಗಳಾಗುತ್ತವೆ. ಕೋಪ ಬಂದಾಗ ಅದೂ ಅತಿ ಶೀಘ್ರ ಕೋಪಿಗಳಲ್ಲಿ ಮುಖದ ಬದಲಾವಣೆಗಳೊಂದಿಗೆ ದೇಹವೂ ಕೂಡ ಗಡಗಡ ನಡುಗ ತೊಡಗುತ್ತದೆ. ಇದು ಅತಿರೇಕಕ್ಕೆ ಮುಟ್ಟಿದಾಗ ಹೃದಯಾಘಾತ ಇಲ್ಲವೇ ಅರ್ಧಾಂಗ ವಾಯುವಿಗೆ ತುತ್ತಾಗುವ ಸಂಭವವಿರುತ್ತದೆ. ಮುಖದ ಮೇಲಿನ ಎಲ್ಲ ಸ್ನಾಯುಗಳು ರಕ್ತದೊತ್ತಡದಿಂದ ಬಿಗಿಗೊಂಡು ಮುಖ ಕೆಂಪೇರುತ್ತದೆ. ಆದ್ದರಿಂದ ಇಲ್ಲಿ ದೈಹಿಕ ಅನಾರೋಗ್ಯಕ್ಕೆ ದಾರಿಯಾಗುತ್ತದೆ. ಮನಸ್ಸಿನ ಹತೋಟಿ ತಪ್ಪುತ್ತದೆ. ಅಂದರೆ ಮನುಷ್ಯನ ಜೀವಕ್ಕೆ ಅಪಾಯ.

ಮನುಷ್ಯನು ಆರೋಗ್ಯದಿಂದ ಬಾಳಲು ಮನಸ್ಸು ನಿರ್ಮಲವಾಗಿರಬೇಕಾಗುತ್ತದೆ. ಅಲ್ಲಿ ಯಾವುದೇ ಕ್ಲೇಶಕ್ಕೆ ಆಸ್ಪದವಿರಬಾರದು. ತಿಳಿಗೊಳದ ನೀರು ಹೇಗೆ ಅದರೊಳಗಿನ ಪ್ರತಿಬಿಂಬಗಳನ್ನು ಸ್ಪಷ್ಟವಾಗಿ ತೋರಿಸುತ್ತದೆಯೋ ಹಾಗೆ ಮನುಷ್ಯನ ಆರೋಗ್ಯವೂ ನಿಶ್ಚಿಂತತೆಯ ಮೇಲೆ ಅವಲಂಬಿಸಿರುತ್ತದೆ. ಚಿಂತೆ, ದುಗುಡ ಮನುಷ್ಯನ ಆರೋಗ್ಯದ ಮೇಲೆ ದುಷ್ಪರಿಣಾಮವುಂಟುಮಾಡುತ್ತವೆ. ಇವುಗಳನ್ನು ನಗುವು ಬಲ್ಲ ಮನುಷ್ಯ ಯಶಸ್ವಿಯಾಗಿ ಎದುರಿಸಬಲ್ಲನು.

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ।<br>
ಪ್ರಸನ್ನವದನಂ ಧ್ಯಾಯೇತ್ ಸರ್ವ ವಿಘ್ನೋಪ<br>
ಶಾಂತಯೇ ॥

ಎಂದು, ದೇವರು ಕೂಡ ಪ್ರಸನ್ನ ವದನ ಹೊಂದಿರುವವನೆಂದು ಅವನ ಶ್ಲಾಘನೆಯನ್ನು ಹೇಳಿದೆ. ಆ ನಗು ಮುಖವು ಎಲ್ಲ ಕಷ್ಟಗಳಿಂದ ಪಾರುಮಾಡಬಲ್ಲದು. ಎಲ್ಲ ಅನಾರೋಗ್ಯಕ್ಕೂ ಮಾನಸಿಕ ಕಷ್ಟಗಳೇ ಮೂಲ ಕಾರಣಗಳು.

''ಅಯ್ಯಾ ಎಂದರೆ ಸ್ವರ್ಗ ಎಲವೋ ಎಂದರೆ ನರಕ'' ಎಂದು ಬಸವಣ್ಣನವರು ಹೇಳಿದ್ದಾರೆ. ಇಲ್ಲಿ ಕಷ್ಟ, ಸುಖ ಎಂದರೆ ನರಕ ಮತ್ತು ಸ್ವರ್ಗ.

ಕತ್ತಲೆ, ಬೆಳಕು – ಇವುಗಳನ್ನು ಹೀಗೆ ವಿಶ್ಲೇಷಿಸಬಹುದು.

ನಳನಳಿಸು-ಬಾಡು. ಬೆಳದಿಂಗಳು-ಕವು ನೆರಳು.

ಹೂವು ಅರಳಿದಾಗ, ಚಿಗುರೆಲೆ ನೋಡಿದಾಗ, ಹೂಬಿಸಿಲು ಬಿದ್ದಾಗ ನಮಗೆ ಹೇಗೆ ಆಹ್ಲಾದಕರವೆನಿಸುವದೋ ಹಾಗೆ ನಗುವ ಧ್ವನಿ ಕೇಳಿದಾಗ ಸಂತೋಷಗೊಳ್ಳುತ್ತೇವೆ. ಒದರಾಟ, ಚೀರಾಟ, ಬಡಿದಾಟ ಕೇಳಿದಾಗ ನಮ್ಮ ಎದೆಯೂ ಬಡಿದುಕೊಳ್ಳುವದು, ನಾವು ಆ ಜಾಗದಿಂದಲೇ ಓಡಿ ಹೋಗುವ ಆಶೆಯಾಗುವದು.

---

ಮನುಷ್ಯನು ನಗುವದಕ್ಕಿಂತ ನಗುವಂತೆ ಮಾಡುವದು ಬಹು ಕಷ್ಟ. ಅದಕ್ಕೆ ಒಂದು ವಿಶಿಷ್ಟ ಆಟವಿದೆ. ವ್ಯಾಯಾಮ, ಆಟ ಆಡುವದು ಇತ್ಯಾದಿಗಳಂತೆ ಯೋಗಾಸನವೂ ಒಂದು ಕ್ರಮ. ಅದರಲ್ಲಿ ನಗುವದನ್ನು ಈಗ ಹೇಳಿಕೊಡುತ್ತಾರೆ. ವಯಸ್ಸಾದವರೂ ಈ ಉಪಕ್ರಮವನ್ನು ಮಾಡಿ ಸಾಧಿಸಬಹುದು. ಬೇಜಾರು ಬಂದಾಗ ಒಬ್ಬರೇ ಕುಳಿತಾಗ ಸಹ ತಮ್ಮಷ್ಟಕ್ಕೆ ತಾವೇ ಈ ರೀತಿ ನಗುವದನ್ನು ಅಭ್ಯಾಸ ಮಾಡಬಹುದು.

ಈ ನಗುವೆಂಬ ಔಷಧಿ ಜ್ಯೇಷ್ಠ ನಾಗರಿಕರಿಗೆ ಮಾತ್ರ ಏಕೆ ಅವಶ್ಯ ಎಂಬುದನ್ನು ವಿಚಾರಿಸೋಣ :-

ಯುವಕರಿಗೆ ಯಾವದೇ ಸನ್ನಿವೇಶವನ್ನು ಎದುರಿಸಲು ಸಾಧ್ಯವಾಗುವಂತೆ ಅವರಲ್ಲಿ ಮಾನಸಿಕವಾಗಿ ತಾಳ್ಮೆಯಿರಬಹುದು. ಇದೇನು ನಿಯಮವಲ್ಲ, ಎಷ್ಟೋ ಯುವಕರು ಈಗಿನ ಪರಿಸರ, ಸಂಸಾರದ ಜಂಜಾಟದಲ್ಲಿ ಮಾನಸಿಕವಾಗಿ ದುರ್ಬಲರಿರುತ್ತಾರೆ. ಅಂಥವರು ಕೂಡ ಮೊದಲಿನಿಂದಲೂ ತಾಳ್ಮೆ ವಹಿಸುವಂತೆ ಕಲಿಯಬೇಕಾಗುತ್ತದೆ. ವಿನಾ ಕಾರಣ ಜಗಳ ಮಾಡುವದು, ಕ್ಷುಲ್ಲಕ ವಿಷಯಕ್ಕೂ ಹೊಡೆದಾಡುವದು ಸಲ್ಲದು. ಈಗಿನ ದಿನಗಳಲ್ಲಿ ಎಲ್ಲ ವಯಸ್ಕರಿಗೂ ಸರಿಸಮಾನ ಪಥ್ಯೆಯಾದ ಮನಃಪ್ರಸನ್ನತೆಯಿಂದಿರುವ ಉಪಚಾರದ ಅಗತ್ಯವಿದೆ. ಇದಕ್ಕೆ ನಾವಿರುವ ಮನೆಗಳಿಂದ ಹಿಡಿದು ನಮ್ಮ ಪರಿಸರ, ಊರು, ನಾಡು ಹಾಗೂ ದೇಶವನ್ನೊಳಗೊಂಡು ಸರ್ವಜಗತ್ತೆ ವಿಪ್ಲವಕಾರಿ ಘಟನೆಗಳಿಂದ ಕೂಡಿದೆ.

ಹಳ್ಳಿಯೇ ಇರಲಿ, ಶಹರವೇ ಇರಲಿ ಎಲ್ಲೆಲ್ಲೂ ಗಡಿಬಿಡಿಯ ಓಡಾಟ, ಜನ ಸಂದಣಿ, ತುಂಬಿದ ವಾಹನಗಳು, ವಾಹನಗಳಿಂದ ತುಂಬಿದ ರಸ್ತೆಗಳು. ಇಂಥ ಜೀವನದಲ್ಲಿ ಸ್ವಸ್ಥವಾದ ಮನಸ್ಸು ಹೊಂದಿರುವವರು ಸಾವಿರಕ್ಕೊಬ್ಬರು ಸಿಗಬಹುದು.

ಒಂದು ಕುಟುಂಬದ ಸ್ವಾಸ್ಥ್ಯ ಅದರ ಎಲ್ಲ ಸದಸ್ಯರು–ಗಂಡು ಹೆಣ್ಣು ಹಾಗೂ ಮಕ್ಕಳ ಸ್ವಭಾವದ ಮೇಲೆ ಅವಲಂಬಿಸಿರುತ್ತದೆ. ಅದು ಈ ಶ್ಲೋಕದಲ್ಲಿ ಬಿಂಬಿತವಾಗಿದೆ –

ವದನಾನಿ ಪ್ರಸನ್ನಾನಿ ಸ್ನಿಗ್ಧಾನ್ಯಕ್ಷೀಣಿ ಯತ್ರಚ।
ಪ್ರೀಯಂತೇ ಬಾಂಧವಾ ಯತ್ರ ರಮಂತೇ ತತ್ರ ಹರಿಃ॥

ಎಲ್ಲಿ ಮನೆತನದ ಎಲ್ಲರೂ ಪರಸ್ಪರ ಪ್ರೀತಿವಿಶ್ವಾಸದಿಂದ ಕೂಡಿ ನಲಿಯುವರೋ ಅಲ್ಲಿ ದೇವರು (ಶ್ರೀಹರಿಯು) ಖಂಡಿತಾ ಇರುತ್ತಾನೆ ಎಂದು ಹೇಳಿದೆ.

ಸುಖದಿಂದ ಇರುವುದು ಎಂದರೆ ನಗುತ್ತ ನಗುತ್ತ ಇರುವುದು, ಏನೇ ಭಿನ್ನಾಭಿಪ್ರಾಯವಿದ್ದರೂ ಪರಸ್ಪರ ತಿಳಿವಳಿಕೆಯಿಂದ ಬಗೆಹರಿಸಿಕೊಳ್ಳುವುದು.

ಆದರೆ ಕುಟುಂಬದ ಜವಾಬ್ದಾರಿ ಹೊತ್ತವರು ಎಲ್ಲರೊಡನೆ ವಿನಯದಿಂದ ನಗುತ್ತ ಇರುವವರು ಅಪರೂಪ. ಯಾಜಮಾನ್ಯ ಹೊತ್ತವರು ಸಹಸಾ ಗಂಭೀರ ಮುಖದವರಾಗಿರುವದೇ ಹೆಚ್ಚು. ಕೆಲಸದ ಒತ್ತಡ ಅಥವಾ ಆರ್ಥಿಕ ಸಮಸ್ಯೆ ಎದುರಿಸಲಾಗದವರೋ, ದುರ್ವ್ಯಸನಕ್ಕೆ ದಾಸರಾಗಿರುವವರೋ ಅಪರೂಪಕ್ಕೊಮ್ಮೆ ನಗುವರು. ಅವರ ನಗುವು ಮಳೆಗಾಲದಲ್ಲಿ ಮೋಡದ ಮರೆಯಿಂದ ಸೂರ್ಯನ ದರ್ಶನವಾದಂತಿರುತ್ತದೆ. ಇಂಥವರು ತಮ್ಮ ಮಕ್ಕಳಿಂದಲೆ "ಹಿಟ್ಲರ" ಎಂಬ ಪದವಿಯನ್ನು ಪಡೆದಿರುತ್ತಾರೆ. ಅಂದ್ರೆ ಸರ್ವಾಧಿಕಾರಿಯಂತೆ ವರ್ತಿಸುವವರು ಎಂದು ಅರ್ಥ. ಆ ಮನೆಯಲ್ಲಿ ಯಾರಿಗೂ ನಗಲಿಕ್ಕು ಕೂಡ ಸ್ವಾತಂತ್ರ್ಯವಿರುವದಿಲ್ಲ. ಆದರೆ ಇಂಥ ಹಿರಿಯರು ಸದಾ ಡಯಾಬಿಟೀಸ್, ರಕ್ತದೊತ್ತಡ ಮುಂತಾದ ಕಾಯಿಲೆಗಳಿಂದ ಬಳಲುವಂಥವರಿರುತ್ತಾರೆ. ಈ ಸ್ವಭಾವದವರು ದೊಡ್ಡ ಅಧಿಕಾರಿಯಾಗಿದ್ದರೆ ತಮ್ಮ ಅಧೀನ ಗುಮಾಸ್ತರನ್ನು ಒಳ್ಳೇ ದರ್ಪದಿಂದ ನಡೆಸಿಕೊಳ್ಳುತ್ತಾರೆ. ಆಗ ಆ ಗುಮಾಸ್ತರೂ ನಗುವದನ್ನು ರೂಢಿಸಿಕೊಂಡಿರುವದಿಲ್ಲ. ಅವರು ಮನೆಯಲ್ಲಿ ಪುಕ್ಕಲು ಸ್ವಭಾವದಿಂದ ಇರುವದರಿಂದ ಅವರೂ ಮಧುಮೇಹ, ರಕ್ತದೊತ್ತಡದಿಂದ ನರಳುತ್ತಿರುತ್ತಾರೆ. ಈ ತರದವರಿಗೆ ನಗುವು ಒಳ್ಳೇ ಔಷಧಿಯಾಗುತ್ತದೆ.




ಡಾ॥ ಪಿ. ಎಸ್. ಶಂಕರ ಪ್ರತಿಷ್ಠಾನದ ೪ನೇ ವಾರ್ಷಿಕೋತ್ಸವ ಜನವರಿ ೧, ೨೦೦೪ರಂದು ಗುಲ್ಬರ್ಗಾದ ವೀರಶೈವ ಕಲ್ಯಾಣಮಂಟಪದಲ್ಲಿ ನಡೆಯಿತು. ಇದೇ ಸಂದರ್ಭದಲ್ಲಿ ಏರ್ಪಡಿಸಲಾಗಿದ್ದ ನವಕರ್ನಾಟಕ ಪ್ರಕಾಶನ ಸಂಸ್ಥೆಯ ವೈದ್ಯಕೀಯ ಪುಸ್ತಕಗಳ ಪ್ರದರ್ಶನವನ್ನು ಗುಲ್ಬರ್ಗಾ ವಿಶ್ವವಿದ್ಯಾಲಯದ ಉಪಕುಲಪತಿ ಪ್ರೊ॥ ವಿ. ಬಿ. ಕುಟಿನೋ ಉದ್ಘಾಟಿಸಿದರು.

ಮನುಷ್ಯನು ನಗುವದಕ್ಕಿಂತ ನಗುವಂತೆ ಮಾಡುವದು ಬಹು ಕಷ್ಟ. ಅದಕ್ಕೆ ಒಂದು ವಿಶಿಷ್ಟ ಆಟವಿದೆ. ವ್ಯಾಯಾಮ, ಆಟ ಆಡುವದು ಇತ್ಯಾದಿಗಳಂತೆ ಯೋಗಾಸನವೂ ಒಂದು ಕ್ರಮ. ಅದರಲ್ಲಿ ನಗುವದನ್ನು ಈಗ ಹೇಳಿಕೊಡುತ್ತಾರೆ. ವಯಸ್ಸಾದವರೂ ಈ ಉಪಕ್ರಮವನ್ನು ಮಾಡಿ ಸಾಧಿಸಬಹುದು. ಬೇಜಾರು ಬಂದಾಗ, ಒಬ್ಬರೇ ಕುಳಿತಾಗ ಸಹ ತಮ್ಮಷ್ಟಕ್ಕೆ ತಾವೇ ಈ ರೀತಿ ನಗುವದನ್ನು ಅಭ್ಯಾಸ ಮಾಡಬಹುದು.

ಕುಳಿತುಕೊಂಡಾಗಲೀ, ನಿಂತಾಗಲೀ ಎರಡೂ ಕೈಗಳನ್ನೆತ್ತಿಹಿಡಿದು ಒಳ್ಳೇ ಜೋರಾಗಿ ಧ್ವನಿ ತೆಗೆಯದೇ ನಗುತ್ತ ಹೋಗಬೇಕು. ಹಾಗೆ ಮತ್ತೆ ಬಿದ್ದು ಬಿದ್ದು ನಗುವಂತೆ ಉಸಿರು ಒಳಗೆ ಹೊರಗೆ ಎಳೆದಾಡುತ್ತಾ ನಗಬೇಕು. ಯಾರಾದರೂ ನೋಡಿದರೆ ಹುಚ್ಚು ಹಿಡಿದಂತೆ ಅನಿಸಬಹುದು. ಆದರೆ ಇದರಿಂದ ಹೊಟ್ಟೆಯ ತಳಭಾಗದ ಸ್ನಾಯುಗಳು ಮೊದಲ್ಗೊಂಡ ಪ್ರತಿಯೊಂದು ಅವಯವದ ಸ್ನಾಯುಗಳೂ ಆಕುಂಚನ ಪ್ರಸರಣಗೊಂಡು ಒಳ್ಳೆ ಉತ್ಸಾಹವನ್ನುಂಟುಮಾಡುತ್ತದೆ. ಹೀಗೆ ದಿನಾಲು ವಯಸ್ಸಾದವರು ಬೆಳಿಗ್ಗೆ ಅರ್ಧ ಗಂಟೆ ಸಾಯಂಕಾಲ ಅರ್ಧ ಗಂಟೆಯಂತೆ ಮಾಡಿ ಸಾಧಿಸಬಹುದು. ಇದನ್ನು ಮನೆಯೊಳಗೆ ಕುಳಿತೇ ಅಥವಾ ಸ್ವಚ್ಛ ಗಾಳಿ, ಬೆಳಕು ಬರುವ ಸ್ಥಳದಲ್ಲಿ ನಿಂತು ಮಾಡಬಹುದು. ಈ ಬಗೆಯ ನಗುವನ್ನು ನಮಗೆ ಪುಣೆಯ ಡಾ॥ ಫಡ್ನೀಸ ಎಂಬವರು ಯೋಗಾಸನದ ಜೊತೆಗೆ ಮಾಡಲು ಕಲಿಸಿದರು.

ಎಂಥ ಗಂಭೀರ ನಾಟಕಗಳಿರಲಿ ಅದರಲ್ಲಿ ನಗುವ ಸನ್ನಿವೇಶಗಳನ್ನು ಹಾಕಿದರೆ ಆ ನಾಟಕಗಳನ್ನು ಜನರು ನೋಡುತ್ತಾರೆ. ಅಳು ಎಂದು ಯಾರೂ ಹೇಳುವದಿಲ್ಲ ಆದರೆ ನಗುವುದನ್ನು ಮಾತ್ರ ಯಾರೂ ಆಕ್ಷೇಪಿಸುವದಿಲ್ಲ.

ಮನುಷ್ಯನಿಗೆ ಸಂಗತಿ ಮತ್ತು ಸಂಗದೋಷದಿಂದ ಯಾವದೇ ದುಶ್ಚಟಗಳು ಅಂಟುತ್ತವೆ. ಹಾಗೆಯೇ ನಾವು ಸಜ್ಜನಸಂಗ ಮಾಡಿದರೆ ಒಳ್ಳೆಯ ವಿಚಾರಗಳನ್ನು ಮಾಡಲು ಕಲಿಯುತ್ತೇವೆ. ಈಗಿನ ಟಿ.ವಿ., ವಿಡಿಯೋ ಯುಗದಲ್ಲಿ ಚಿಕ್ಕಂದಿನಿಂದಲೇ ಟಿ.ವಿ. ಜೊತೆ ಸಂಪರ್ಕವೇರ್ಪಟ್ಟು ಸಣ್ಣಸಣ್ಣ ಮಕ್ಕಳನ್ನು ಅಡ್ಡ ಹಾದಿಗೆ ಎಳೆಯುತ್ತವೆ. ನಾಲ್ಕು ಮಕ್ಕಳು ಸೇರಿ ನೀತಿ ಕತೆ ಅಥವಾ ತಮ್ಮ ತಮ್ಮ ಹಿರಿಯರ ಚರಿತ್ರೆಯಲ್ಲಿ ಬರುವ ರೋಮಾಂಚನಗೊಳ್ಳುವ ಸನ್ನಿವೇಶನಗಳನ್ನು ನೆನೆದು ಆನಂದಿಸುವ ದಿನಗಳಂತೂ ದೂರವಾದವು.

ಮೂರು ವರ್ಷದ ಬುದ್ಧಿ ನೂರು ವರ್ಷದ ತನಕ ಎಂಬಂತೆ ನಾವು ಚಿಕ್ಕಂದಿನಿಂದಲೇ ರೂಢಿಸಿಕೊಂಡ ಸ್ವಭಾವ ನಮ್ಮ ವಯಸ್ಸಿನುದ್ದಕ್ಕೂ ಹಿಂಬಾಲಿಸುತ್ತದೆ. ಅದಕ್ಕೆ ನಾಲ್ಕು ಜನರ ಮಧ್ಯೆ ಅದೂ ತಮ್ಮ ಕುಟುಂಬದಲ್ಲಿಯೆ ಬೆರೆತು ಸ್ನೇಹದಿಂದ ನಕ್ಕು ನಲಿದು ಸಂತೋಷದ ಅಲೆಗಳನ್ನೆಬ್ಬಿಸುತ್ತ ಹೊತ್ತು ಕಳೆಯುವ ಪರಿಪಾಠವನ್ನು ಮಾಡಬೇಕು. ಅದನ್ನು ಬಿಟ್ಟು ವೇಳೆಯನ್ನು ಕಳೆಯಲಿಕ್ಕೆ (Time-kill) ಎಂದು ತಂದೆ ಒಂದು Clubಗೆ ಹೋಗಿ ಜೂಜಾಡಿ ಕುಡಿದು ಬರುವದು, ತಾಯಿ Ladies Clubಗೆ ಹೋಗಿ Social Worker ಅಂತಾ ಮನೆಯನ್ನು ನಿರ್ಲಕ್ಷ್ಯ ಮಾಡಿದರೆ, ಮಕ್ಕಳ ಮೇಲೆ ಅದರ ಕೆಟ್ಟ ಪರಿಣಾಮ ಆಗುವುದು ಸಹಜ. ಅವರೂ ತಮ್ಮ ಸಂಗಾತಿಗಳೊಡನೆ Datingಗೋ, Brown Sugar ಸೇವಿಸುವುದಕ್ಕೋ ಹೋಗುತ್ತಾರೆ. ಅಂದರೆ ಮನೆಯ ಸ್ವಾಸ್ಥ್ಯ ಹೇಗೆ ಉಳಿಯುವುದು ?

ವಯಸ್ಸಾದವರಿಗೆ ನಗಬೇಕೆಂದು ಹೇಳುವದು ಅವರಿಗೆ ತಾತ್ಪೂರ್ತಿಕ ಉಪಚಾರವಾಗುವದು ಮಾತ್ರ. ಮುದುಕರಾದಮೇಲೆ ಯಾವುದನ್ನೂ ಸಾಧಿಸಲು ಸಾಧ್ಯವಾಗದ ಮಾತು. ಅದು ಸ್ವಭಾವಜನ್ಯವಾಗಬೇಕು. ಅದು ಒತ್ತಾಯದ ಮಾಘಸ್ನಾನವಾಗಬಾರದು.

ದೈಹಿಕ ಆರೋಗ್ಯಕ್ಕೆ ಮನಸ್ಸಿನ ಆರೋಗ್ಯ ಮುಖ್ಯ.

ಮಾನಸಿಕ ಆರೋಗ್ಯಕ್ಕೆ ಮನೆಯಲ್ಲಿ ಶಾಂತ ವಾತಾವರಣ ಅತಿ ಮುಖ್ಯ. ನಿರ್ಮಲ ಮನಸ್ಸಿಗೆ ನಿರ್ಮಲ ವಾತಾವರಣ, ಸಾತ್ವಿಕ ಆಹಾರ ಸೇವನೆ; ಇವು ನಮ್ಮ ಆಯುಷ್ಯವನ್ನು ಹೆಚ್ಚಿಸದಿದ್ದರೂ ಇರುವಷ್ಟು ದಿನಗಳಾದರೂ ಸಂತೋಷದಿಂದ ನಗು ನಗುತ್ತ ಬಾಳು ಬೆಳಗಬಹುದು.

ಎನ್. ಆರ್. ದೇಶಪಾಂಡೆ
೩೩/೪, ಮಹಡಿ, ೧೭ನೇ ಕ್ರಾಸ್, ರಂಗನಾಥಪುರ, ಮಲ್ಲೇಶ್ವರಂ, ಬೆಂಗಳೂರು - ೫೬೦ ೦೦೩

ಇವತ್ತು ವಿಮರ್ಶೆಯ ಹೆಸರಿನಿಂದ ಕರೆಯಲ್ಪಡದ, ಆದರೆ ವಿಮರ್ಶೆಯ ಕೊಡೆ ಕೆಳಗೇ ಬರುವ ಎರಡು ಬರಹಗಳೆಂದರೆ ಮುನ್ನುಡಿ ಮತ್ತು ಬೆನ್ನುಡಿಗಳು. ಇವು ಪ್ರತ್ಯೇಕ ಸಾಹಿತ್ಯ ಪ್ರಕಾರಗಳೇ ಆಗುವತ್ತ ಹೊರಟಿರುವುದು ಸ್ಪಷ್ಟ ಕಾಣುತ್ತದೆ. ಇವು ಇಂದಿನ ಬಹುಪಾಲು ಯುವ ಬರಹಗಾರರನ್ನು ಕಾಡಿಸುತ್ತಿರುವ ಭ್ರಮೆಗಳಾಗಿವೆ. ಕಿರಿಯರಂತೆ ಅನೇಕ ಹಿರಿಯರು ಕೂಡ ಇವುಗಳಿಂದ ಬಿಡುಗಡೆ ಪಡೆದಿಲ್ಲವೆಂಬುದು ನಿಜವೆ.

ನಮ್ಮಲ್ಲಿ ಮುನ್ನುಡಿ ಬೆನ್ನುಡಿಗಳನ್ನು ಬರೆಸಿಕೊಂಡ ಕೂಡಲೇ ಆಶೀರ್ವಾದವನ್ನು ಪಡೆದಂತೆ, ಕೃತಕೃತ್ಯರಾದಂತೆ ಆಡುವವರಿದ್ದಾರೆ. ಸಾಹಿತ್ಯ ವ್ಯವಸ್ಥೆಯೊಳಕ್ಕೆ ಅಧಿಕೃತ ಪ್ರವೇಶಕ್ಕೊಂದು ಪರವಾನಿಗೆ ಪಡೆದುಕೊಂಡವರಂತೆ, ಇಲ್ಲವೆ ಸಾಹಿತ್ಯವಾಹಿನಿಯಲ್ಲೊಂದು ಶಹಬ್ಬಾಸ್‌ಗಿರಿಯ ಸರ್ಟಿಫಿಕೇಟು ಗಿಟ್ಟಿಸಿಕೊಂಡಂತೆ ಆಡುವವರೂ ಇದ್ದಾರೆ. ಹಾಗೇ ತಿಂಗಳಾನುಗಟ್ಟಳೆ, ವರ್ಷಾನುಗಟ್ಟಳೆ ಮುನ್ನುಡಿ ಬೆನ್ನುಡಿಗಳಿಗಾಗಿ ಖ್ಯಾತನಾಮರಿಗೆ ದುಂಬಾಲುಬಿದ್ದು, ಅವರು ಅವರದೇ ಕಾರಣಗಳಿಗೆ ಬರೆದುಕೊಡದಿದ್ದಾಗ, ಶಾಪಕ್ಕೆ ಗುರಿಯಾದವರಂತೆ ನರಳುತ್ತ ಇಲ್ಲವೆ ಕಂಟು ಕಟ್ಟಿಕೊಂಡು ಸಿನಿಕರಾದವರೂ ಇದ್ದಾರೆ. ಇಲ್ಲೆಲ್ಲ ಒಂದು ರೀತಿಯ ಕೃಪಾಪೋಷಣೆ ನೀಡುವ ಗುರು ಮತ್ತು ಭಿಕ್ಷಾರ್ಥಿಯ ರೀತಿಯ ಶಿಷ್ಯ ಪಾತ್ರವಿರುತ್ತದೆ. ಇಂಥ ಹಿನ್ನೆಲೆಯಿಂದ ಬರೆದ-ಬರೆಸಿಕೊಂಡ ನುಡಿಗಳು ವಸ್ತುನಿಷ್ಠವಾಗಿ ಇರಲು ಹೇಗೆ ಸಾಧ್ಯ ?

ಇದಲ್ಲದೆ ಸ್ನೇಹ ಪ್ರೀತಿ ವಿಶ್ವಾಸಗಳಿಗೆ ಕಟ್ಟುಬಿದ್ದು ತಮ್ಮ ಸಮಕಾಲೀನರಿಗೆ ಇಲ್ಲವೇ ಕೆಲವೊಮ್ಮೆ ಕಿರಿಯರು ಹಿರಿಯರಿಗೂ ಇವನ್ನು ಬರೆದುಕೊಡುವ ಪರಿಪಾಠ ನಮ್ಮಲ್ಲಿದೆ. ಇಲ್ಲಿಯೂ ಕೃತಜ್ಞತೆಯೋ ಋಣಭಾವವೋ ಇದ್ದೇ ಇರುತ್ತದೆ. ಕೆಲವೊಮ್ಮೆ ಇಂಥಾ

# ಮುನ್ನುಡಿ ಬೆನ್ನುಡಿಗಳೆಂಬ ಪ್ರೋಟುಗಲ್ಲುಗಳು

ಸಮಕಾಲೀನರ ವಲಯಗಳಲ್ಲಿ ಈ ಮುನ್ನುಡಿ ಬೆನ್ನುಡಿಗಳು ನೀನೆನಗಿದ್ದರೆ ನಾನಿನಗೆ ಅನ್ನೋ ಥರಾ, ಅವರ ಬೆನ್ನು ಇವರು ಕೆರೆಯುವ, ಇವರ ಬೆನ್ನು ಅವರು ಕರೆಯುವ ಅನ್ಯೋನ್ಯ ಮುಯ್ಯಿ ಕೆಲಸಗಳಂತೆಯೂ ಆಗಿರುವುದುಂಟು – ಆಗುತ್ತಿರುವುದುಂಟು. ಈ ರೀತಿಯ ವರ್ತನೆಗಳಿಂದ ಸಾಂಸ್ಕೃತಿಕ ಗ್ರಹಿಕೆಗಳ ಬಗೆಗಿನ ಕಲ್ಪನೆಗಳೇ ಅಪಕಲ್ಪನೆಗಳಾಗಿ ರೂಪಗೊಳ್ಳುವ ಸಾಧ್ಯತೆ ಇರುತ್ತದೆ. ಇದು ಇಡೀ ಸಾಹಿತ್ಯ ಸಂಸ್ಕೃತಿಯನ್ನೇ ಹುಸಿ ನಂಬಿಕೆಗಳಲ್ಲಿ ಇರಿಸುವ ಬೆಳವಣಿಗೆ. (ಇಲ್ಲಿ ಯಾವ ಮಾತುಗಳಿಗೂ ಉದಾಹರಣೆ ಸಮರ್ಥನೆ ಕೊಟ್ಟಿಲ್ಲ. ಯಾಕೆಂದರೆ ಇದು ವ್ಯಕ್ತಿನಿಂದೆ ಆಗಬಾರದು ಎಂಬ ಕಾರಣಕ್ಕೆ).

ನಮ್ಮಲ್ಲಿಂದು ಮುನ್ನುಡಿ ಬೆನ್ನುಡಿಗಳನ್ನು ಬರೆಸಿಕೊಳ್ಳುವುದು ಒಂದು ಶಾಸ್ತ್ರ ಆಗಿಬಿಟ್ಟಿದೆ. ಅಂದರೆ ಸರಿಸುಮಾರು ಇದೊಂದು ಇವತ್ತಿನ ಶಾಬ್ದಿಕ ರಾಜಕಾರಣದ ಕಲ್ಚರಲ್ ರಿಚುವಲ್ ರೀತಿ ಆಗಿಬಿಟ್ಟಿದೆ. ಈ ಥರದ ರಿಚುವಲ್ಲುಗಳಿಂದ ಅನುಕೂಲಗಳಾಗುವುದಕ್ಕಿಂತ ಅಪಾಯಗಳಾಗುವುದೇ ಜಾಸ್ತಿ. ಹೇಗಾದರೂ ಮಾಡಿ ನಾಕು ಸಾಲು ಖ್ಯಾತನಾಮರಾದವರಿಂದಲೇ ಮುನ್ನುಡಿ ಬೆನ್ನುಡಿ ಬರೆಸಬೇಕೆಂಬ ಆಸೆ, ಹಠ, ಕನಸುಗಳಂಥ ರಿಚುವಲ್ಲುಗಳು ಕಿರಿಯರನ್ನು ಹಲವಾರು ಸರ್ಕಸ್ಸುಗಳಿಗೆ ವ್ಯಾಧಿಗಳಿಗೆ ಇಂದು ತಳ್ಳಿವೆ. ಇದರಿಂದ ಸಾಹಿತ್ಯ ಪರಿಸರದ ಮೇಲೆ ಖಂಡಿತಾ ಗಾಢ ದುಷ್ಪರಿಣಾಮ ಆಗಬಲ್ಲದು. ಇದೆಲ್ಲ ಯಾಕೆ ಹೀಗೆ ? ಇದಕ್ಕೆ ಇದರ ಹಿಂದೆ ಇರುವ ಕಾರಣಗಳಲ್ಲಿ ಇದರ ಬಗೆಗೆ ಇರುವ ನಂಬಿಕೆಗಳ ಪಾಲು ದೊಡ್ಡದು.

ಇಂದು ಪ್ರಚಲಿತವಿರುವ ಹಲವು ಮುನ್ನುಡಿ ಬೆನ್ನುಡಿಗಳ ಬಗೆಗಿನ ನಂಬಿಕೆಗಳು ಗಾಬರಿ ಹುಟ್ಟಿಸುತ್ತವೆ. ಅವುಗಳಲ್ಲಿ ಕೆಲವು ಹೀಗಿವೆ : ಮುನ್ನುಡಿ ಬೆನ್ನುಡಿಗಳು ಸಾಹಿತ್ಯ ವ್ಯವಸ್ಥೆಯೊಳಕ್ಕೆ ಪ್ರವೇಶ ಪಡೆಯಲು (ಸ್ವೀಕೃತವಾಗಲು) ಒಪ್ಪಿಗೆ ಮುದ್ರೆಗಳಿದ್ದ ಹಾಗೆ. ಇವುಗಳಿದ್ದರೆ ಸಾಹಿತ್ಯ ವ್ಯವಸ್ಥೆಯ ಬಾಗಿಲುಗಳು ಬೇಗ ತೆರೆದುಕೊಳ್ಳುತ್ತವೆ. ಇದಕ್ಕೆ ಪೂರಕವಾದ ಇನ್ನೊಂದು ನಂಬಿಕೆಯೆಂದರೆ ವಿದ್ವಾಂಸರು-ಖ್ಯಾತನಾಮರ ಮುನ್ನುಡಿ ಬೆನ್ನುಡಿಗಳಿದ್ದರೆ ಅದರಿಂದ ಕೃತಿಗೆ, ಕೃತಿಕಾರನಿಗೆ ತೂಕ ಹೆಚ್ಚಾಗುತ್ತದೆ ಎಂಬುದು. ಇದರಿಂದ ಕೃತಿಯನ್ನು ಬೇರೆಯದೇ ದೃಷ್ಟಿಯಿಂದ ಜನ-ವಿಮರ್ಶಕರು ನೋಡುವಂತೆ ಆಗುತ್ತದೆ. ಹಾಗೇ ಮುನ್ನುಡಿ ಬೆನ್ನುಡಿಗಳು ಕೃತಿಯ ಹಣೆಬರಹ (ಭವಿಷ್ಯ)ದ ಮೇಲೆ ಪ್ರಭಾವ ಬೀರಬಲ್ಲವು ಎಂಬ ನಂಬಿಕೆಯೂ ಇದೆ. (ಅನೇಕರು ಮುನ್ನುಡಿ ಬೆನ್ನುಡಿಗಳನ್ನಷ್ಟೇ ಓದಿ ಕೃತಿಯ ಬಗೆಗೆ ಒಂದು ಅಭಿಪ್ರಾಯಕ್ಕೆ ಬರುವವರೂ ಇದ್ದಾರೆ. ಅವಸರಕ್ಕೆ ಬೆನ್ನುಡಿಯನ್ನಷ್ಟೇ ಓದಿ ಇನ್ನೆಂದೂ ಕೃತಿಯನ್ನೇ ಓದದವರೂ ಇದ್ದಾರೆ.) ಮುನ್ನುಡಿ ಬೆನ್ನುಡಿಗಳು ಹೊಸ ಬರಹಗಾರರಿಗೆ ಬೆನ್ನುತಟ್ಟಿ ಪ್ರೋತ್ಸಾಹಿಸುವ ಕೆಲಸ ಮಾಡುತ್ತವೆ, ತಿದ್ದಿಕೊಂಡು ಬೆಳೆಯಲು ಸಹಾಯ ಮಾಡುತ್ತವೆ ಎಂಬ ನಂಬಿಕೆಗಳೂ ಇವೆ. ಹಾಗೇ ಇಂದು ಯಾರು ಯಾರಿಂದ ಮುನ್ನುಡಿ ಬೆನ್ನುಡಿ ಬರೆಸಿಕೊಂಡಿದ್ದಾರೆ ಎನ್ನುವುದು ಒಂದು ಅಂತಸ್ತಿನ ವಿಚಾರ ಆಗಿದೆ. ಅದೇರೀತಿ ಯಾರು ಯಾರಿಗೆ ಮುನ್ನುಡಿ ಬರೆದಿದ್ದಾರೆ ಎಂಬುದು ಕೂಡ ಬರೆದವರ ಅಂತಸ್ತಿನ ವಿಚಾರವೂ ಹೌದು. (ಅಂದರೆ ಕನ್ನಡದವನೊಬ್ಬ ಪ್ಯಾನಿಂಡಿಯನ್ ಅಥವಾ ಅಂತಾರಾಷ್ಟ್ರೀಯ ಬರಹಗಾರನಿಂದ ಮುನ್ನುಡಿ ಬೆನ್ನುಡಿ ಬರೆಸಿಕೊಂಡಿದ್ದಾನೆ ಎಂಬುದು ಹೇಗೆ ಬರೆಸಿಕೊಂಡವನ ಕಿರೀಟವೋ ಹಾಗೇ ನಮ್ಮ ಕನ್ನಡದವನೊಬ್ಬ ಪ್ಯಾನಿಂಡಿಯನ್ ಅಥವಾ ಅಂತಾರಾಷ್ಟ್ರೀಯ ಖ್ಯಾತಿಯ ಬರಹಗಾರನೊಬ್ಬನಿಗೆ ಬರೆದಿದ್ದರೆ ಅದು ಬರೆದವನ ಅಂತಸ್ತಿನ ಬಿಂಬ ಎಂಬ ನಂಬಿಕೆಯೂ ಇದೆ).

ಈ ನಂಬಿಕೆಗಳ ಹಿಂದಿನ ರಾಜಕಾರಣವನ್ನು ಶೋಧಿಸಿದರೆ ನಿಜವಾಗಿಯೂ ನಮ್ಮ ಸಾಹಿತ್ಯ ಸಂಸ್ಕೃತಿಯ ಊನಗಳು, ಒಳ ರಾಜಕೀಯಗಳು ಬಯಲಾಗಬಲ್ಲವು. ಈ


ನಮ್ಮಲ್ಲಿಂದು ಮುನ್ನುಡಿ ಬೆನ್ನುಡಿಗಳನ್ನು ಬರೆಸಿಕೊಳ್ಳುವುದು ಒಂದು ಶಾಸ್ತ್ರ ಆಗಿಬಿಟ್ಟಿದೆ. ಅಂದರೆ ಸರಿಸುಮಾರು ಇದೊಂದು ಇವತ್ತಿನ ಶಾಬ್ದಿಕ ರಾಜಕಾರಣದ ಕಲ್ಚರಲ್ ರಿಚುವಲ್ ರೀತಿ ಆಗಿಬಿಟ್ಟಿದೆ. ಈ ಥರದ ರಿಚುವಲ್ಲುಗಳಿಂದ ಅನುಕೂಲಗಳಾಗುವುದಕ್ಕಿಂತ ಅಪಾಯಗಳಾಗುವುದೇ ಜಾಸ್ತಿ.


ನಂಬಿಕೆಗಳು ಇರುವ ರೀತಿಯಲ್ಲಿಯೇ ನಮ್ಮಲ್ಲಿಂದು ಮುನ್ನುಡಿ ಬೆನ್ನುಡಿಗಳು ಹೇಗಿರಬೇಕೆಂಬ ಬಗೆಗೂ ಕೆಲವು ಅಲಿಖಿತ ನಿಯಮಗಳಿವೆ. ಅವುಗಳಲ್ಲಿ ಕೆಲವು ಹೀಗಿವೆ : ಹೊಸಬರಿಗೆ ಬರೆಯುವ ಮುನ್ನುಡಿಗಳು ಆಶೀರ್ವಾದದ ರೀತಿ ಇರಬೇಕು. (ಬೆನ್ನುತಟ್ಟುವ ರೀತಿ ಇರಬೇಕು) ಬರಹದಲ್ಲಿ ಕಟು ವಿಮರ್ಶೆ ಇರಬಾರದು. ಗುಣಗ್ರಹಣ ಮಾತ್ರ ಇರಬೇಕು. ಹಿರಿಯರಿಗೆ ಸ್ಥಾಪಿತರಿಗೆ ಬರೆಯುವಾಗಂತೂ ಅವರ ಇಮೇಜಿಗೆ ತಕ್ಕ ವಿನಯ, ಸ್ನೇಹಗಳೇ ಇರಬೇಕು. ವಸ್ತುನಿಷ್ಠತೆಯೆಂದರೆ ಉದ್ಧಟತನವೆಂದೇ ದ್ರೋಹವೆಂದೇ ತಿಳಿಯಬೇಕು. ಮುನ್ನುಡಿ ಬೆನ್ನುಡಿಗಳು ದೀರ್ಘವಾಗಿರಬಾರದು. ಒಂದೆರಡು ಮಾತುಗಳಲ್ಲೇ ಲೇಖಕನ ವಿಶ್ವರೂಪ ದರ್ಶನವಾಗುವಂತೆ ಹೇಳಬೇಕು. ದೋಷಗಳನ್ನು, ದೌರ್ಬಲ್ಯಗಳನ್ನು ಹೇಳಲೇಬೇಕೆಂದರೆ ಆತ್ಮೀಯ ಉಪದೇಶದ ರೀತಿ ಹೇಳಬೇಕು. ಇಲ್ಲದಿದ್ದರೆ ಬಚ್ಚಿಟ್ಟು ಭಾಷಿಕ ಮುಸುಕಿನಲ್ಲಿ ಹೇಳಬೇಕು. ಇತ್ಯಾದಿ. (ಇಂಥ ಕಡೆ ಅರ್ಥ ಮತ್ತು ಸಂವಹನದ ನೆಲೆಯಲ್ಲಿ ನಡೆಯಬಹುದಾದ ಭಾಷಿಕ ರಾಜಕಾರಣದ ನಾಟ್ಯೀಕರಣ ಬಹಳ ಚೆನ್ನಾಗಿರುತ್ತದೆ.)

ಈ ಮೇಲಿನ ನಂಬಿಕೆ ಮತ್ತು ನಿಯಮಗಳನ್ನು ಮೀರಿದ ವ್ಯಕ್ತಿತ್ವಗಳೂ ಕನ್ನಡದಲ್ಲಿ ಇವೆ. ಆದರೂ ಅವು ತೀರಾ ಅಲ್ಪಸಂಖ್ಯಾತ. ಹಾಗೇ ಈ ಟಿಪ್ಪಣಿಯ ಎಲ್ಲ ಮಾತುಗಳಿಗೂ ಅಪವಾದಗಳಿವೆ ಎಂಬುದು ಕೂಡ ನಿಜ. ಈ ಎಲ್ಲ ನಂಬಿಕೆ ಮತ್ತು ನಿಯಮಗಳು ಭ್ರಮಾತ್ಮಕವಾದುವೇ ಆಗಿವೆ. ಈ ಭ್ರಮೆಗಳನ್ನು ಪೋಷಿಸುವ ವಾತಾವರಣವೂ ನಮ್ಮಲ್ಲಿದೆ. ಈ ಭ್ರಮೆಗಳಿಂದ ಕೆಲವರಿಗೆ ಕೆಲವು ರೀತಿಯ ಲಾಭಗಳೂ ಇವೆ. ಇವುಗಳಿಂದ ತಪ್ಪಿಸಿಕೊಳ್ಳಬೇಕೆಂಬ ಹಂಬಲ ಹಲವಾರು ಬರೆಸಿಕೊಳ್ಳುವ ಮತ್ತು ಬರೆಯುವವರಿಬ್ಬರಿಗೂ ಇದ್ದರೂ ಮತ್ತೆ ಆ ಸುಳಿಗೆ ಬೀಳುವ ಒತ್ತಡದ ಸ್ಥಿತಿ ನಮ್ಮಲ್ಲಿಂದು ಇದೆ. ಹೊಸದಾಗಿ ಸೃಜನಶೀಲ ಲೋಕವನ್ನು ಪ್ರವೇಶಿಸುವ ಪಳಗಂತೂ ಈ ಭ್ರಮೆಗಳಿಂದ ಬಿಡುಗಡೆಯಾಗಲು ಸಾಕಷ್ಟು


ರಾಮಲಿಂಗಪ್ಪ ಟಿ. ಬೇಗೂರು

ಕಾಲವೇ ಹಿಡಿಯಬಹುದು.

ಬಹುಪಾಲು ಮುನ್ನುಡಿ ಬೆನ್ನುಡಿಗಳು ಕಾಂತಾ ಸಂಮಿತ ಧಾಟಿಯಲ್ಲಿ ಲೇಖಕನ ಸೃಜನಶೀಲತೆಯೊಳಕ್ಕೆ ಪ್ರವೇಶಿಸಿ ಪ್ರಭಾವಿಸುವ ಕೆಲಸ ಮಾಡುತ್ತಿರುತ್ತವೆ. ಇದರಿಂದ ಬರೆಸಿಕೊಂಡವರ ಸೃಜನಶೀಲ ಕ್ರಮ ಮತ್ತು ಧೋರಣೆಗಳೆರಡರ ಮೇಲೂ ಅಡ್ಡ ಪರಿಣಾಮಗಳಾಗುವ ಸಾಧ್ಯತೆಯೇ ಹೆಚ್ಚಾಗಿರುತ್ತದೆ. ಉದಾಹರಣೆಗೆ ಕವಿಯೊಬ್ಬನ ಮೊದಲ ಸಂಕಲನಕ್ಕೆ ಬರೆದ ಮುನ್ನುಡಿಯಲ್ಲಿನ ವಿಚಾರಗಳು (ಅಥವಾ ಅಲ್ಲಿನ ಆತ್ಮೀಯ ಸಲಹೆಗಳು) ಆತನ ಮುಂದಿನ ಸಂಕಲನದಲ್ಲಿ ತಲೆ ಹಾಕಿರುತ್ತವೆ. ಇಲ್ಲೆಲ್ಲ ಮುಂಬೆನ್ನುಡಿಯ ಮೂಲಕ ಸ್ಥಾಪಿತ ವಿಮರ್ಶಾ ಮಾರ್ಗದ ಮೌಲ್ಯಗಳು ಸೂಕ್ಷ್ಮವಾಗಿ ಹೇರಿಕೆ ಆಗುತ್ತಿರುತ್ತವೆ. ಎರಡು ಸಾಹಿತ್ಯ ಪ್ರಕಾರಗಳಲ್ಲಿನ ಆದಾನ ಪ್ರಧಾನವು ಪ್ರಧಾನಾಧೀನ ನೆಲೆಯಲ್ಲಿ ನಿರ್ವಚನೆಗೊಳ್ಳುವ ಸೂಚನೆಗಳು ಇಂಥ ಕಡೆ ಇರುತ್ತವೆ. ಇಲ್ಲೆಲ್ಲ ಮಾರ್ಗದರ್ಶಿ ಮತ್ತು ಮಾರ್ಗಾಕಾಂಕ್ಷಿ ನೆಲೆಗಳೇ ಕೆಲಸ ಮಾಡುತ್ತಿರುತ್ತವೆ. (ವಿಮರ್ಶೆ ದೊಡ್ಡದೋ ಸಾಹಿತ್ಯ ದೊಡ್ಡದೋ ಎಂಬ ಹುಲು ಘರ್ಷಣೆಯೂ ಇಲ್ಲಿ ತೆರೆಮರೆಯಲ್ಲಿ ನಡೆಯುತ್ತಿರುತ್ತದೆ.)

ಇದಕ್ಕೆ ಸಂಬಂಧಿಸಿದಂತೆ ಒಂದು ಉದಾಹರಣೆಯನ್ನಿಲ್ಲಿ ಕೊಡಲೇಬೇಕು ಎನ್ನಿಸುತ್ತಿದೆ. ಎಚ್. ಎಸ್. ರಾಘವೇಂದ್ರರಾವ್ ಅವರು ಎಸ್. ಜಿ. ಸಿದ್ಧರಾಮಯ್ಯನವರ ಸಂಕಲನ 'ಅವಳೆದೆಯ ಜಂಗಮ'ಕ್ಕೆ (೧೯೯೩) ಬರೆದಿರುವ ಮುನ್ನುಡಿಯ ಬೋಧೆಗಳು ಅವರ ಮುಂದಿನ ಸಂಕಲನ 'ಸೊಲ್ಲು ಫಲವಾಗಿ' (೧೯೯೭)ಯಲ್ಲಿ ಕಾಣುತ್ತವೆ. ಹಾಗೇ ಈ ಸೊಲ್ಲು ಫಲವಾಗಿ ಸಂಕಲನಕ್ಕೆ ಚಂದ್ರಶೇಖರ ನಂಗಲಿಯವರು ಬರೆದಿರುವ ಹಸಿರು ಮುನ್ನುಡಿಯ ವಿಚಾರಗಳು ಇವರ ಮುಂದಿನ ಸಂಕಲನ 'ಮರು ಜೇವಣಿ' (೨೦೦೦)ಯಲ್ಲಿ ತಲೆಹಾಕಿವೆ. (ಆಸಕ್ತರು ಸಂಕಲನಗಳನ್ನು ಅಧ್ಯಯನ ಮಾಡಬಹುದು)

ಈ ನುಡಿಗಳು ಬರೆಸಿಕೊಳ್ಳುವವರಿಗೆ ಹೇಗೋ ಹಾಗೇ ಬರೆದವರ ಮೇಲೂ ಅಡ್ಡ ಪರಿಣಾಮಗಳನ್ನು ಬೀರುವ ಸಾಧ್ಯತೆಗಳು ಇಲ್ಲದಿಲ್ಲ. ಈಗ ಈ ಮುನ್ನುಡಿ ಬೆನ್ನುಡಿ ಬರೆಯುವವರು ವಿಮರ್ಶಕರು ಎಂದಿಟ್ಟುಕೊಂಡರೆ – ಮುನ್ನುಡಿಗಳನ್ನೇ ಹೆಚ್ಚು ಬರೆಯುತ್ತ ಹೋದಂತೆ ಈ ಮುನ್ನುಡಿಗೆ ಇರಬಹುದಾದ ಮಿತಿಗಳೂ ಸಂಬಂಧಿಸಿದ ವಿಮರ್ಶಕನ ವಿಮರ್ಶೆಗೂ ತಗಲಿಕೊಳ್ಳುತ್ತವೆ. ಆತನಿಗೇ ಗೊತ್ತಿಲ್ಲದಂತೆ ಗುಣಗ್ರಹಣ, ಆಶೀರ್ವಾದ, ಹರಕೆ, ಪ್ರೋತ್ಸಾಹ, ಅಭಿಪ್ರಾಯ, ಪ್ರೀತಿ (ಹಿರಿಯರಿಗೆ-ಗುರುಗಳಿಗೆ ಬರೆಯುವಾಗ) ವಿನಯ, ಭಕ್ತಿ ಮೊದಲಾದವು ಆತನ ಅಭಿರುಚಿ-ದೃಷ್ಟಿಕೋನದ ಮೇಲೇ ಪ್ರಭಾವ ಬೀರುತ್ತವೆ.

ಯಾವುದೇ ಸದಾಶಯವೊಂದು ಆಚರಣೆಯಾಗಿ ಮಾರ್ಪಟ್ಟಾಗ ಆಗುವ ದುರಂತವಿದು. ಇದರಿಂದ ತಪ್ಪಿಸಿಕೊಳ್ಳುವ ಬೇರೆ ಬೇರೆ ಪ್ರಯತ್ನಗಳನ್ನು ನಮ್ಮವರು ಮಾಡುತ್ತಿದ್ದಾರೆ. ಈ ಪ್ರಯತ್ನಗಳಿಂದಲೂ ಕೆಲವು ಅಡ್ಡ ಪರಿಣಾಮಗಳಾಗುತ್ತಿವೆ. ಇದಕ್ಕೆ ಉದಾಹರಣೆಯೆಂಬಂತೆ ನಮ್ಮಲ್ಲಿ ಕೆಲವರು ಕೆಲವೊಮ್ಮೆ ಮುಂಬೆನ್ನುಡಿಗಳನ್ನು ಬರೆಯುವುದನ್ನೇ ನಿರಾಕರಿಸುತ್ತಿದ್ದಾರೆ. ಅಥವಾ ಸತಾಯಿಸಿ, ಸತಾಯಿಸಿ ಮುನ್ನುಡಿ ಕೇಳಲು ಬಂದವರೇ ಅದೃಶ್ಯರಾಗಿಬಿಡುವಂತೆ ಮಾಡುತ್ತಿದ್ದಾರೆ. ಕೆಲವರು ಶಿಸ್ತಾಗಿ, ನೇರವಾಗಿ ನಾನು ಇನ್ನು ಮೇಲೆ ಮುನ್ನುಡಿ ಬೆನ್ನುಡಿ ಬರೆಯುವುದಿಲ್ಲ. ಕೇಳಿದವರಿಗೆಲ್ಲ ಬರೆದು ನನ್ನನ್ನು ಜನ 'ಮುನ್ನುಡಿ ವಿಮರ್ಶಕ' ಎನ್ನಲಾರಂಭಿಸಿದ್ದಾರೆ ಎಂದು ಸಂಕಲ್ಪ ಮಾಡಿದ್ದರೆ, ಕೆಲವರು ಇದೊಂದೇ ಒಂದು ಇನ್ನು ಬರೆಯುವುದಿಲ್ಲ ಎಂದು ಒಂದೊಂದೇ ಬರೆಯುವವರಿದ್ದಾರೆ. ಕೆಲವರು ಬರೆಸಲು ಶಿಫಾರಸು ನೀಡುವ ಕೆಲಸ ಮಾಡಿದರೆ, ಕೆಲವರು ಕೃತಿ-ಕೃತಿಕಾರರನ್ನು ನೋಡಿ (ಮುಖ

## ಸಾದರ ಸ್ವೀಕಾರ

**ಕನ್ನಡ ಮನಸ್ಸುಗಳೊಂದಿಗೆ** (ಲೇಖನ ಸಂಗ್ರಹ) *ಡಾ|| ಜಿ. ಎನ್. ಉಪಾಧ್ಯ*
**ಪುಟ : ೧೩೪** **ಬೆಲೆ : ರೂ. ೯೦**
**ಸುವರ್ಣಗಿರಿ ಪ್ರಕಾಶನ**, ೩೦, ಮಾರುತಿ ಲೇನ್, ಫೋರ್ಟ್, ಮುಂಬಯಿ - ೧

**ಬಿಡಿ ಹರಳು** (ಹನಿಗವನಗಳ ಸಂಕಲನ) *ಲಲಿತಾ ಸಿದ್ದಬಸವಯ್ಯ*
**ಪುಟ : ೧೨೯** **ಬೆಲೆ : ರೂ. ೬೦**
**ಮೊದಲ ಸಿರಿ** (ಕವನ ಸಂಕಲನ) *ಲಲಿತಾ ಸಿದ್ದಬಸವಯ್ಯ*
**ಪುಟ : ೬೪** **ಬೆಲೆ : ರೂ. ೪೨**
**ಇಹದ ಸ್ವರ** (ಕವನ ಸಂಕಲನ) *ಲಲಿತಾ ಸಿದ್ದಬಸವಯ್ಯ*
**ಪುಟ : ೫೨** **ಬೆಲೆ : ರೂ. ೬೦**
**ಮಿ|| ಛತ್ರಪತಿ** (ನಗೆಬರಹಗಳ ಸಂಕಲನ) *ಲಲಿತಾ ಸಿದ್ದಬಸವಯ್ಯ*
**ಪುಟ : ೯೮** **ಬೆಲೆ : ರೂ. ೪೦**
*ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು*
**ಚಿನ್ಮಯ ಪ್ರಕಾಶನ**, ನಂ. ೫೨೧೭, ಎರಡನೇ ತಿರುವು, ಅಶೋಕ ನಗರ, ತುಮಕೂರು - ೫೭೨ ೧೦೩

**ನಿತ್ಯ ಆನಂದ ವಚನ ೨೦೦೩** (ವಚನಗಳ ಸಂಕಲನ) *ಶಿಮುಂಜೆ ಪರಾರಿ*
**ಪುಟ : ೩೪** **ಬೆಲೆ : ರೂ. ೨೫**
**ಮನುಕುಲ ಪ್ರಕಾಶನ**, ೧೭, ಉಪಾಕ್ರಮ, ಲಿಬರ್ಟಿ ಗಾರ್ಡನ್, ಮಲಾಡ್ (ಪ) ಮುಂಬಯಿ - ೪೦೦ ೦೬೪

**ಮನಸ್ಸಿಗೊಂದು ಬೆಳದಿಂಗಳು** (ಕವನ ಸಂಕಲನ) *ಊರ್ಮಿಳಾ ರಾವ್*
**ಪುಟ : ೯೬** **ಬೆಲೆ : ರೂ. ೪೦**
**ಪುಸ್ತಕ ನಿಧಿ**, ಲಕ್ಷ್ಮಿ ಸದನ, ಗಾಳವೆ, ಹಳ್ನಾಡಿ - ವರ್ಕಾಡಿ ಅಂಚೆ, ಕುಂದಾಪುರ - ೫೭೭ ೨೧೧

**ಹೀಗಿದ್ದರು ಚಾಚಾ** (ನೆಹರೂ ಜೀವನ ಪ್ರಸಂಗಗಳು)
*ಸಂ. ಟಿ. ವಿ. ವೆಂಕಟರಮಣಯ್ಯ*
**ಪುಟ : ೪೮** **ಬೆಲೆ : ರೂ. ೨೦**
**ಹಿರಿಯರ ಹಾದಿ** (ರಸಪ್ರಸಂಗಗಳ ಸಂಗ್ರಹ) *ಸಂ. ಟಿ. ವಿ. ವೆಂಕಟರಮಣಯ್ಯ*
**ಪುಟ : ೨೦೦** **ಬೆಲೆ : ರೂ. ೮೦**
*ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು*
**ಟಿ. ವಿ. ವೆಂಕಟರಮಣಯ್ಯ**, ಇ.ಡಬ್ಲ್ಯು.ಎಸ್. ಕೆ.ಎಚ್.ಬಿ. ಕಾಲೊನಿ, ೨ನೇ ಹಂತ, ೫ನೇ ಕ್ರಾಸ್, ಬಸವೇಶ್ವರ ನಗರ, ಬೆಂಗಳೂರು - ೫೬೦ ೦೭೯

**ಕೌಜಲಗಿ ನಿಂಗಮ್ಮ** (ಜೀವನ ಪರಿಚಯ) *ಡಾ|| ಅಶೋಕ ನರೋಡೆ*
**ಪುಟ : ೫೨** **ಬೆಲೆ : ರೂ. ೩೦**
**ಅಪೂರ್ವ ಪ್ರಕಾಶನ**, ನಂ. ೧೭, ಬಸವನಗರ, ಮಹಾಲಿಂಗಪುರ-೫೮೭೩೧೨

**ನಿಮ್ಮ ವರ್ತನೆ ; ನಿಮ್ಮ ವ್ಯಕ್ತಿತ್ವ** (ಲೇಖನ ಸಂಗ್ರಹ) *ಎನ್. ವಿಶ್ವರೂಪಾಚಾರ್*
**ಪುಟ : ೬೪** **ಬೆಲೆ : ರೂ. ೧೫**
**ವಿಶ್ವರೂಪ ಪ್ರಕಾಶನ**, ಬಿಲ್ಡಿಂಗ್ ನಂ. ೧೬೮, ೨ನೇ ಮಹಡಿ, ಕೆ.ಎಚ್.ಬಿ. ಕಾಲೊನಿ, ಕೆಂಗೇರಿ ಉಪನಗರ, ಬೆಂಗಳೂರು - ೫೬೦ ೦೬೦

**ಕೊಳವೆ ಬಾವಿಗೆ ಜಲ ಮರುಪೂರಣ** (ತಂತ್ರಜ್ಞಾನ)
*ಎನ್. ಜೆ. ದೇವರಾಜ ರೆಡ್ಡಿ*
**ಪುಟ : ೬೪** **ಬೆಲೆ : ರೂ. ೨೫**
**ಶಾಲೆಯಲ್ಲಿ ಹಿಂದುಳಿಯುವಿಕೆ** (ಮನೋವಿಜ್ಞಾನ)
*ಡಾ|| ಜಿ. ಪುರುಷೋತ್ತಮ*
**ಪುಟ : ೪೮** **ಬೆಲೆ : ರೂ. ೨೦**
**ಆತಂಕ, ಖಿನ್ನತೆ ಮತ್ತು ಗೀಳು ಮನೋರೋಗ** (ಲೇಖನ ಸಂಗ್ರಹ)
*ಡಾ|| ಸಿ. ಆರ್. ಚಂದ್ರಶೇಖರ್*
**ಪುಟ : ೭೨** **ಬೆಲೆ : ರೂ. ೩೦**
**ಮುತ್ತಿನ ಕುಂಚಿಗೆ** (ಮಕ್ಕಳ ಪದ್ಯಗಳು) *ಪ. ಗು. ಸಿದ್ದಾಪುರ*
**ಪುಟ : ೪೮** **ಬೆಲೆ : ರೂ. ೧೮**
**ಟೂ ಟೂ ಬಿಟ್ಟೇನಿ** (ಮಕ್ಕಳ ಕವಿತೆಗಳು) *ಚಂದ್ರಗೌಡ ಕುಲಕರ್ಣಿ*
**ಪುಟ : ೪೦** **ಬೆಲೆ : ರೂ. ೧೫**
**Mind Matters 100 Questions and Answers**
*Dr. C. R. Chandrashekar*
**Pages : 72** **Price : Rs. 35**
*ಮೇಲಿನ ಆರು ಪುಸ್ತಕಗಳ ಪ್ರಕಾಶಕರು*
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿಮಿಟೆಡ್**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ನೋಡಿ ಮಣೆ ಹಾಕುವುದು ಎನ್ನುತ್ತಾರಲ್ಲ ಹಾಗೆ) ಬರೆದುಕೊಡುತ್ತಾರೆ. ಕೆಲವರು ಮೂರು ತಿಂಗಳು ಆರು ತಿಂಗಳು ಕಾಯಿಸಿ, ಬೇಳಾಡಿಸಿಕೊಂಡು ಏನೋ ಪೀಡೆ ತೊಲಗಲಿ ಎಂದು ಗೀಚುವವರಿದ್ದಾರೆ. ಇನ್ನೂ ಕೆಲವರು ಇಂಥಾವರಿಗೆ ಮುನ್ನುಡಿ ಬರೆಯುವ ಅವಕಾಶ ಸಿಕ್ಕಿದ್ದೇ ನಮ್ಮ ಪುಣ್ಯ ಎಂದು ಭಾವಿಸಿ ಭಕ್ತಿ ಆದರಗಳಿಂದ ಬರೆದುಕೊಡುವವರಿದ್ದಾರೆ. ಅಥವಾ ಈ ಎಲ್ಲವನ್ನೂ ಒಬ್ಬರೇ ಪ್ರಸಂಗವಶದಿಂದಾಗಿ ಆಗಾಗ ಅನುಸರಿಸಿರುವವರೂ ಇರಬಹುದು. ಇನ್ನೂ ಕೆಲವರು ದಾಕ್ಷಿಣ್ಯಕ್ಕೆ ಬಸಿರಾಗಲು ಇಷ್ಟಪಡದೇ ಮುನ್ನುಡಿಯೆಂಬ ಹೆಸರಿನಲ್ಲಿ (ಅದರ ಮಿತಿಗಳನ್ನು ದಾಟಲು) ತಮ್ಮದೇ ಆದ ಪ್ರಕಾರ ಚಿಂತನೆಯನ್ನೋ, ತಾತ್ವಿಕ ವಿಶ್ಲೇಷಣೆಯನ್ನೋ ಒಂಚೂರು ಬರೆದುಬಿಡುತ್ತಾರೆ.

ಆಧುನಿಕ ಬರೆಹಕ್ಕೆ ಮಾತ್ರ ಅಂಟಿಕೊಂಡ ವ್ಯಾಧಿ ಇದು. ಇದರ ಉಪಾಧಿ ನಮ್ಮ ಪ್ರಾಚೀನ ಸಾಹಿತ್ಯಕ್ಕೆ ಇಲ್ಲ. ಆದರೆ ಪ್ರಾಚೀನ ಸಾಹಿತ್ಯ ಕೂಡ ತಾನು ಸೃಷ್ಟಿಯಾದ ನಂತರ ಅದಾಗಲೇ ಇರುವ ಸಾಹಿತ್ಯ ಕೋಟೆಗೆ ಪ್ರವೇಶ ಪಡೆಯಬೇಕಾದರೆ (ಸ್ವೀಕೃತವಾಗ ಬೇಕಾದರೆ, ಒಪ್ಪಿಗೆ ಮುದ್ರೆ ಪಡೆಯಬೇಕಾದರೆ, ಸ್ಥಾಪಿತವಾಗಬೇಕಾದರೆ) ಬಗೆ ಬಗೆಯ ಅಗ್ನಿ ಪರೀಕ್ಷೆಗಳಿಗೆ ಗುರಿಯಾಗಬೇಕಾಗಿತ್ತು ಎಂಬುದು ಮಾತ್ರ ನಿಜ. (ಈ ವಿಚಾರದ ಚರ್ಚೆ ಈ ಟಿಪ್ಪಣಿಯ ವ್ಯಾಪ್ತಿಗಿಲ್ಲ). ಆದರೆ ಪ್ರಾಚೀನ ಸಾಹಿತ್ಯಕ್ಕೆ ತಾನು ಸಾಹಿತ್ಯ ವ್ಯವಸ್ಥೆಯೊಳಕ್ಕೆ ಸ್ವೀಕೃತಗೊಂಡು, ಗುರ್ತಿಸಿಕೊಳ್ಳಲು ಈ ಆಧುನಿಕ ಮುನ್ನುಡಿ ಬೆನ್ನುಡಿ ರೀತಿಯ ಯಾವುದೇ ಶಿಫಾರಸು ಪ್ರಮಾಣ ಪತ್ರಗಳು ಬೇಕಾಗಿರಲಿಲ್ಲ ಎಂಬುದು ಮಾತ್ರ ನಿಜ. ಮುದ್ರಣ ಮಾಧ್ಯಮದ ಹೊಸ ಸಾಹಿತ್ಯಕ ಪರಿಣಾಮಗಳಲ್ಲಿ ಇದೂ ಒಂದು.

ಆಧುನಿಕ ಕನ್ನಡ ಮುನ್ನುಡಿ ಬೆನ್ನುಡಿಗಳನ್ನೆಲ್ಲ ಸಮಗ್ರ ಪರಿಶೀಲನೆಗೆ ಒಡ್ಡಿ ಅವುಗಳ ಮೆತೆಡ್ಡು ಏನು, ಅವುಗಳ ಅಡ್ಡಪರಿಣಾಮಗಳೇನು ಎಂಬುದನ್ನು ತತ್ಸಂಬಂಧಿ ಬರಹಗಳೊಂದಿಗೆ ಮತ್ತು ಆನಂತರದ ಬರಹಗಳೊಂದಿಗೆ ತುಲನಾತ್ಮಕವಾಗಿ ಅಧ್ಯಯನ ಮಾಡಿದರೆ ಅದು ಒಂದು ದೊಡ್ಡ ಪಿಎಚ್.ಡಿ.ಯೇ ಆಗಬಹುದು. ಇದರಿಂದ ಆಧುನಿಕ ಕನ್ನಡ ಸಾಹಿತ್ಯದ ದಿಕ್ಕು ದೆಸೆಗಳು ಹೇಗೆಲ್ಲ ಪಲ್ಲಟಗೊಂಡಿವೆ ಮತ್ತು ಈ ಶಾಪ ಆಶೀರ್ವಾದಗಳಿಂದ ನಿಯಂತ್ರಿತಗೊಂಡಿವೆ ಎಂಬುದನ್ನು ಸಮಗ್ರವಾಗಿ ತಿಳಿಯಬಹುದು. ಅಲ್ಲದೆ ಇಂದು ಬರೆಯುತ್ತಿರುವ ಕಿರಿ-ಹಿರಿ ಬರೆಹಗಾರರ ಪ್ರಾಮಾಣಿಕ ಅಭಿಪ್ರಾಯಗಳನ್ನು ಈ ಮುನ್ನುಡಿ ಬೆನ್ನುಡಿಗಳ  ಬಗೆಗೆ ಕಲೆ ಹಾಕಿದರೂ ಇವುಗಳ ಇಂದಿನ ರಾಜಕೀಯ ಸ್ವರೂಪದ ಪರಿಚಯ ಸಿಗಬಹುದು.

ಮುನ್ನುಡಿಗಳು ಬರೀ ಕೆಡುಕನ್ನೇ ಉಂಟುಮಾಡಿವೆ ಎಂದೇನೂ ನನ್ನ ಅಭಿಪ್ರಾಯವಲ್ಲ. ಈಗೀಗ ಈ ಪ್ರಕಾರಗಳು ಒಳಿತಿಗಿಂತಲೂ ಹೆಚ್ಚು ಕೆಡುಕನ್ನೇ ಉಂಟುಮಾಡುವತ್ತ ಬೆಳೆಯುತ್ತಿವೆ ಎಂಬುದು ಇಲ್ಲಿ ನನ್ನ ಅಭಿಪ್ರಾಯ. ನಮ್ಮ ಮುನ್ನುಡಿ ಪರಂಪರೆಯ ಒಂದಿಷ್ಟು ಹಿನ್ನೋಟ ನೋಡಿದರೆ, ಅಲ್ಲಿ ಸಾಹಿತ್ಯ ಸಂಸ್ಕೃತಿಯನ್ನು ರೂಪಿಸಿದ, ಬೆಳೆಸಿದ ಅನೇಕ ಉದಾಹರಣೆಗಳು ಸಿಗುತ್ತವೆ. ಕೆ.ಎಸ್.ನ. ಅವರ 'ಶಿಲಾಲತೆ'ಗೆ ಡಿ.ಎಲ್.ಎನ್. ಬರೆದಿರುವ ಮುನ್ನುಡಿ, ಬೇಂದ್ರೆಯವರ 'ಗರಿ'ಗೆ ಮಾಸ್ತಿಯವರು ಬರೆದಿರುವ ಮುನ್ನುಡಿ, ಕಣವಿಯವರ 'ನೆಲಮುಗಿಲು'ಗೆ ಬೇಂದ್ರೆ ಬರೆದಿರುವ ಮುನ್ನುಡಿ ಇನ್ನು ಮುಂತಾದವು ಇಂಥಾ ಕೆಲ ಉದಾಹರಣೆಗಳು.

ನಮ್ಮಲ್ಲಿರುವ ಮುನ್ನುಡಿಗಳನ್ನು ಸ್ಥೂಲವಾಗಿ ಎರಡು ಬಗೆಗಳಲ್ಲಿ ಕಾಣಬಹುದು.

೧. ಇತರೆಯವರಿಗೆ ಬರೆದ ಮುನ್ನುಡಿಗಳು.

೨. ತಮಗೆ . ತಾವೇ ಬರೆದುಕೊಂಡ ಮುನ್ನುಡಿಗಳು (ಮುನ್ನುಡಿಯಿಂದಲೇ ಬೆನ್ನಿಗೊಂದಿಷ್ಟು ಎತ್ತಿ ಹಾಕಿಕೊಂಡಿರುವವೂ ಉಂಟು). ಇತರೆಯವರಿಗೆ ಬರೆದ ಮುನ್ನುಡಿಗಳ ಬಗೆಗೇನೇ ಈ ಟಿಪ್ಪಣಿಯಲ್ಲಿ ಇದುವರೆಗೆ ಮಾತನಾಡಲಾಗಿದೆ. ಆದರೆ ತಮಗೆ ತಾವೇ ಬರೆದುಕೊಂಡ ಮುನ್ನುಡಿಗಳು ಸ್ವಲ್ಪ ಭಿನ್ನ. ಇವು ಸಾಹಿತ್ಯ ಸಂಸ್ಕೃತಿಯನ್ನು ತಿಳಿಯಲು ಇರುವ ಕೀಲಿಕೈಗಳೂ ಆಗಿವೆ. ಕೆಲವೊಮ್ಮೆ ಸಾಹಿತ್ಯ ಸಂಸ್ಕೃತಿಯ ದಿಕ್ಕು ದೆಸೆಗಳನ್ನೆ ಪಲ್ಲಟಿಸುವಂಥಾ ಕೆಲಸವನ್ನೂ ಮಾಡಿವೆ. ಹಾಗಾದರೆ ಮೊದಲ ಮತ್ತು ಎರಡನೇ ಬಗೆಯ ನುಡಿಗಳಲ್ಲಿ ಪರಸ್ಪರ ವೈರತ್ವ ಇದೆಯಾ ಎಂದರೆ ಹಾಗೇನೂ ಇಲ್ಲ. ಅಡಿಗರು ನಡೆದು ಬಂದ ದಾರಿಗೆ ತಾವೇ ಬರೆದುಕೊಂಡಿರುವ ಮುನ್ನುಡಿ, ತೇಜಸ್ವಿಯವರು ಅಬಚೂರಿನ ಪೋಸ್ಟಾಫೀಸು ಸಂಕಲನಕ್ಕೆ ತಾವೇ ಬರೆದುಕೊಂಡಿರುವ ಮುನ್ನುಡಿ, ಡಿ. ಆರ್. ನಾಗರಾಜರು ಸಾಹಿತ್ಯ ಕಥನಕ್ಕೆ ಬರೆದುಕೊಂಡಿರುವ ಮುನ್ನುಡಿ ಮೊದಲಾದವು ಇಂಥಾ ಕೆಲ ಉದಾಹರಣೆಗಳು.

ನಮ್ಮ ಒಂದನೇ ಬಗೆಯ ನುಡಿಗಳು ಸ್ಥಾಪಿತ ವಿಮರ್ಶಾ ಮೌಲ್ಯಗಳ ಮತ್ತು ಸ್ಥಾಪಿತ (ಸಾಹಿತ್ಯ) ಕಾವ್ಯ ಮಾರ್ಗಗಳ ಹೇರಿಕೆಯ ಕೆಲಸವನ್ನೇ ಹೆಚ್ಚಾಗಿ ಮಾಡುತ್ತಾ ಬಂದಿವೆ. ಸ್ಥಾಪಿತ ಭೂತಕ್ಕೆ ಹೊಸ ಬೆಳೆಯನ್ನು ಬಗ್ಗಿಸುವ ಮತ್ತು ಒಟ್ಟಂದಕ್ಕೆ ಏಕರೂಪಾತ್ಮಕ ಸೃಜನಶೀಲ ಆಕೃತಿಯನ್ನು ನಿರ್ಮಿಸುವ ಕೆಲಸವನ್ನಿವು ಮಾಡುತ್ತಾ ಬಂದಿವೆ. ಅಂದರೆ ಭಾರತೀಯ ಸಂಸ್ಕೃತಿಯ ಬಹುಮುಖ್ಯ ಅನನ್ಯತೆಗಳಲ್ಲೊಂದಾದ 'ವಿವಿಧತೆಯಲ್ಲಿ ಏಕತೆ' ತತ್ವದ ರೂಪಣೆಯ ಕಾರ್ಯವನ್ನು ಸಾಹಿತ್ಯದಲ್ಲಿ ಇವು ಯಶಸ್ವಿಯಾಗಿ ನಿರ್ವಹಿಸುತ್ತಾ ಬಂದಿವೆ. ಸಾಹಿತ್ಯ ನಿರ್ಮಾಣ ಕ್ರಮವನ್ನು ಪ್ರಭಾವಿಸುವ ಅನೇಕ ಆಧುನಿಕ ಸಲಕರಣೆಗಳಲ್ಲಿ ಇವು ಬಹು ಮುಖ್ಯವಾದ ಸಲಕರಣೆಗಳಾಗಿವೆ. ಸಮನ್ವಯ ದೃಷ್ಟಿಯ ಸಾಹಿತ್ಯ ಮಾರ್ಗವೊಂದರ ನಿರ್ಮಾಣ (ಕವಿರಾಜಮಾರ್ಗದ ನಿರ್ಮಾಣ) ಇಂಥ ನುಡಿಗಳ ಮೂಲಕ ಪರೋಕ್ಷವಾಗಿ ಆಗುತ್ತ ಬಂದಿದೆ. ಇಂದು ಬಂಡಾಯೋತ್ತರ ಕಾಲಘಟ್ಟದಲ್ಲಿ ಶೂನ್ಯವೊಂದು ನಿರ್ಮಾಣವಾಗಿದೆ ಎಂದು ಹೇಳುತ್ತಿದ್ದಾರಲ್ಲ (ಇದು ನಿಜವಲ್ಲವಾದರೂ) ಇಂಥಾ ಈ ಸ್ಥಿತಿಗೆ ಈ ಮುಂಬೆನ್ನುಡಿಗಳು ಎಷ್ಟರಮಟ್ಟಿಗೆ ತಮ್ಮದೇ ಕಾಣಿಕೆ ನೀಡಿವೆ ಎಂಬುದನ್ನೂ ಸಂಶೋಧನೆಯಿಂದ ತಿಳಿಯಬೇಕಾಗಿದೆ.

ನಮ್ಮ ಎಲ್ಲ ಮುಂಬೆನ್ನುಡಿಗಳ ಐತಿಹಾಸಿಕ ಬೆಳವಣಿಗೆ, ಬದಲಾವಣೆ, ಪ್ರಭಾವ, ಪರಿಣಾಮಗಳನ್ನು ಅಧ್ಯಯನ ಮಾಡುವುದು ಈ ಟಿಪ್ಪಣಿಯ ವ್ಯಾಪ್ತಿಗೆ ಹೊರತು. ಆದರೆ ಮುಂಬೆನ್ನುಡಿಗಳು (ಮೊದಮೊದಲಿಗೆ ಆರೋಗ್ಯಕಾರಿ ಬೆಳವಣಿಗೆಗಳಾಗಿ ಹುಟ್ಟಿ, ಪೋಷಕ ದ್ರವ್ಯಗಳಾಗಿ ಕೆಲಸ ಮಾಡಿದ್ದರೂ) ಕ್ರಮೇಣ ರೋಗರೂಪಿ ಆಚರಣೆಗಳಾಗಿ ಬದಲಾಗಿದ್ದಾವೆ ಎಂಬುದು ಮಾತ್ರ ಖಚಿತ. ಇವು ಸೃಜನಶೀಲತೆಯ ಹಾದಿಯಲ್ಲಿ ಮೆಟ್ಟಿಲುಗಳಾಗುವುದಕ್ಕಿಂತ ಇಂದು ಪೋಟುಗಲ್ಲುಗಳಾಗುತ್ತಿರುವುದೇ ಹೆಚ್ಚು. ಹೀಗಾಗಿ ಇಂತಹ ಆಚರಣೆಗಳ ಬಗ್ಗೆ ಹೊಸ ಪೀಳಿಗೆ ಸ್ವಲ್ಪ ವಿವೇಕಶೀಲರಾಗದಿದ್ದರೆ ಹೇಗೆ ?

ರಾಮಲಿಂಗಪ್ಪ ಟಿ. ಬೇಗೂರು
ಉಪನ್ಯಾಸಕ, ಸರ್ಕಾರಿ ಬಾಲಕರ ಕಾಲೇಜು, ಕೋಲಾರ - ೫೬೩ ೧೦೧

ಕರ್ನಾಟಕ ಸರ್ಕಾರ

# ಕನ್ನಡ ಪುಸ್ತಕ ಪ್ರಾಧಿಕಾರ

ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - 560 018
ದೂರವಾಣಿ : 6674138 ಫ್ಯಾಕ್ಸ್ : 6603812

## ಪ್ರಾಧಿಕಾರದ ಕೆಲವು ಪ್ರಕಟಣೆಗಳು

### ಜನಪ್ರಿಯ ಪುಸ್ತಕ ಮಾಲೆ

| | ಬೆಲೆ |
|---|---|
| 1. ಅಪೂರ್ಣ ವರ್ತಮಾನಕಾಲ | 14-00 |
| 2. ಭಾರತೀಯ ಚಿತ್ರಕಲೆ | 40-00 |
| 3. ಕನ್ನಡ-ಕನ್ನಡಿಗ-ಕರ್ನಾಟಕ | 40-00 |
| 4. ಸಾಹಿತ್ಯ ಮತ್ತು ರಾಜಕಾರಣ | 55-00 |
| 5. ಹೆತ್ತೊಡಲು | 50-00 |
| 6. ಪುರಾಣ ಭಾರತಕೋಶ | 200-00 |
| 7. ಕನ್ನಡ ಸಿನಿಮಾ ಇತಿಹಾಸ ಪುಟಗಳಲ್ಲಿ | 275-00 |
| 8. ಭುಜಂಗಯ್ಯನ ದಶಾವತಾರಗಳು | 85-00 |
| 9. ಸಟೀಕಿನ ಶಬ್ದಮಂಜರಿ ಕೋಶ | 110-00 |
| 10. ಸಿರಿಗನ್ನಡ ಗ್ರಂಥಕರ್ತರ ಚರಿತ್ರಕೋಶ | 70-00 |
| 11. ಪ್ರೊ॥ ಬಿ. ಕೃಷ್ಣಪ್ಪನವರ ಚಿಂತನೆಗಳು ಮತ್ತು ಬರಹಗಳು | 50-00 |
| 12. ಬೆಳ್ದಿಂಗ್ಳಪ್ಪನ ಪೂಜೆ | 18-00 |
| 13. ಡಾ॥ ಶಂ.ಬಾ. ಜೋಶಿಯವರ ಸಮಗ್ರ ಸಂಪುಟಗಳು (6ಸಂ) | 750-00 |
| 14. ಸರ್ವಜ್ಞನ ವಚನಗಳು | 60-00 |

### ಜಾಗತಿಕ ಚಿಂತಕರ ಮಾಲೆ

| | |
|---|---|
| 1. ಗುರುನಾನಕ್ | 25-00 |
| 2. ಡೆರಿಡಾ | 40-00 |
| 3. ಫ್ರೆಡರಿಕ್ ಏಂಗೆಲ್ಸ್ | 40-00 |
| 4. ನಾರಾಯಣಗುರು | 25-00 |
| 5. ಸಿ.ಜಿ. ಯೂಂಗ್ | 40-00 |
| 6. ಎಡ್ವರ್ಡ್ ಸೈದ್ | 40-00 |

### ಪಂಪ ಪ್ರಶಸ್ತಿ ಮಾಲೆ

| | |
|---|---|
| 1. ಸುವರ್ಣ ಪುತ್ಥಳಿ | 15-00 |
| 2. ಶ್ರೀಹರಿ ಚರಿತೆ | 15-00 |

### ಗ್ರಾಮ ಸಂಸ್ಕೃತಿ ಮಾಲೆ

| | |
|---|---|
| 1. ಗ್ರಾಮೀಣ ಉಡುಗೆ ತೊಡುಗೆಗಳು | 60-00 |
| 2. ಕೊಪ್ಪಳ ಜಿಲ್ಲೆಯ ಜಾತ್ರೆಗಳು | 40-00 |
| 3. ಮಂಡ್ಯ ಜಿಲ್ಲೆಯ ಜಾತ್ರೆಗಳು | 45-00 |

### ಅನುವಾದ ಮಾಲೆ

| | |
|---|---|
| 1. ಆಧುನಿಕ ವಿಜ್ಞಾನಕ್ಕೆ ಗಾಂಧಿಯ ಸವಾಲು | 40-00 |
| 2. ಮೈಸೂರಿನ ಚಾಮುಂಡೇಶ್ವರಿ ದೇವಸ್ಥಾನ | 25-00 |
| 3. ಕಲೇವಾಲ - ಜನಪದ ಮಹಾಕಾವ್ಯ | 70-00 |
| 4. ಪರಿಸರ ನ್ಯಾಯದ ತಕ್ಕಡಿಯಲ್ಲಿ | 80-00 |
| 5. ಆಧುನಿಕ ಇಂಗ್ಲಿಷ್ ಕವಿತೆಗಳು | 50-00 |

### ಮೂಲಭೂತ ಶೈಕ್ಷಣಿಕ ಮಾಲೆ

| | ಬೆಲೆ |
|---|---|
| 1. ರತ್ನಗಳು | 18-00 |
| 2. ಜನಸಂಖ್ಯೆ - ಒಂದು ಅಧ್ಯಯನ | 20-00 |
| 3. ಭೂಮಿ, ಸೂರ್ಯ, ಆಕಾಶ, ನಕ್ಷತ್ರ | 40-00 |
| 4. ಲೇಸರ್ ಕಿರಣ | 100-00 |
| 5. ಕನ್ನಡ ತಾಂತ್ರಿಕ ಚಿತ್ರ ರಚನಾಭ್ಯಾಸ | 150-00 |

### ಮಕ್ಕಳ ಪುಸ್ತಕ ಮಾಲೆ

| | |
|---|---|
| 1. ಸಂತಮಣ್ಣ | 200-00 |
| 2. ಶಿಶು ಸಂಗಮೇಶ ಆಯ್ದ ಮಕ್ಕಳ ಸಾಹಿತ್ಯ | 200-00 |
| 3. ಗ್ರೀಂ ಸಹೋದರರ ಕಿನ್ನರ ಕಥೆಗಳು- ಭಾಗ 2,4 | 60-00, 120-00 |

### ವಿಜ್ಞಾನ ದೀಪಮಾಲೆ

| | |
|---|---|
| 1. ಜೀವವಿಕಾಸ | 50-00 |
| 2. ಸಲೀಂ ಅಲಿ | 40-00 |

### ಜಾನಪದ ಮಾಲೆ

| | |
|---|---|
| 1. ಉಜ್ಜನಿ ಚೌಡಮ್ಮ | 70-00 |
| 2. ಜಾನಪದ-ಶಿಷ್ಟಪದ | 120-00 |
| 3. ಜಾನಪದ ಕೈಪಿಡಿ | 100-00 |
| 4. ಜಾನಪದ ಸಾಂಸ್ಕೃತಿಕ ಆಯಾಮಗಳು | 60-00 |
| 5. ಮಲೆನಾಡ ವೈಷ್ಣವ ಒಕ್ಕಲಿಗರ ಸಂಸ್ಕೃತಿ | 100-00 |
| 6. ಜಾನಪದ ಹಾಲುಮತ ಮಹಾಕಾವ್ಯ | 220-00 |

### ಹೊರನಾಡ ಕನ್ನಡ ಸಂಸ್ಕೃತಿ ಮಾಲೆ

| | |
|---|---|
| 1. ಮಿಥಿಲೆಯನ್ನಾಳಿದ ಕರ್ನಾಟರು | 100-00 |
| 2. ಶ್ರೀ ವಿಠ್ಠಲ - ಒಂದು ಮಹಾಸಮನ್ವಯ | 200-00 |

### ಆಕರ ಗ್ರಂಥಮಾಲೆ

| | |
|---|---|
| 1. ಲಿಪಿಯ ಹುಟ್ಟು ಮತ್ತು ಬೆಳವಣಿಗೆ | 150-00 |
| 2. ಬದ್ದವಣ | 100-00 |
| 3. ಜೀವನಪ್ರೀತಿ (ಕೊಡಗಿನ ಗೌರಮ್ಮನ ಕತೆಗಳು) | 100-00 |
| 4. ಶಾಸ್ತ್ರಭಾರತಿ | 100-00 |
| 5. ಡಿ. ಆರ್. ನಾಗರಾಜ್ ಸಂಸ್ಕೃತಿ ಕಥನ | 200-00 |
| 6. ಶೇಕ್ಸ್‌ಪಿಯರ್ - ಎರಡು ನಾಟಕಗಳ ಅಧ್ಯಯನ | 100-00 |
| 7. ಪು.ತಿ.ನ. ಸಮಗ್ರ ಗದ್ಯಸಂಪುಟ | 400-00 |
| 8. ಕರ್ನಾಟಕ ನಾಣ್ಯ ಪರಂಪರೆ | 150-00 |
| 9. ದಾಸಸಾಹಿತ್ಯ ಮತ್ತು ಸಂಸ್ಕೃತಿ | 150-00 |

***ಪುಸ್ತಕ ಕೊಳ್ಳುವವರಿಗೆ ಸೂಚನೆ :*** ಪುಸ್ತಕಗಳನ್ನು ಕೊಳ್ಳುವವರು ಬೇಕಾದ ಪುಸ್ತಕಗಳನ್ನು ಪಟ್ಟಿಯಲ್ಲಿ ಗುರುತು ಮಾಡಿ, ಆಡಳಿತಾಧಿಕಾರಿಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು - ೫೬೦ ೦೧೮ ಇವರಿಗೆ ಡಿ. ಡಿ. ಅಥವಾ ಎಂ.ಓ. ಮೂಲಕ ಹಣವನ್ನು ಕಳುಹಿಸಬೇಕು. ಸಾಗಣಿಕೆ ವೆಚ್ಚ ಪ್ರತ್ಯೇಕ

**ರಿಯಾಯಿತಿ :** ಪಂಪಪ್ರಶಸ್ತಿ ಮಾಲೆಯಲ್ಲಿ ಪ್ರಕಟವಾಗಿರುವ ಪುಸ್ತಕಗಳಿಗೆ ಹಾಗೂ ಸಮಗ್ರ ವಚನ ಸಂಪುಟಗಳಿಗೆ ರಿಯಾಯಿತಿ ಇರುವುದಿಲ್ಲ. ಶಂಬಾ ಜೋಶಿಯವರ ಸಮಗ್ರ ಸಂಪುಟಗಳಿಗೆ (6 ಸಂಪುಟ) ಶೇ. 20, ಉಳಿದೆಲ್ಲ ಪ್ರಕಟಣೆಗಳಿಗೆ ಕಾಲಕಾಲಕ್ಕೆ ನಿಯಮಾನುಸಾರ ರಿಯಾಯಿತಿ ಇರುತ್ತದೆ.

ಪ್ರೊ॥ ಮಲ್ಲೇಪುರಂ ಜಿ ವೆಂಕಟೇಶ
(ಅಧ್ಯಕ್ಷರು)

ಎನ್. ತಿಪ್ಪೇಸ್ವಾಮಿ
(ಆಡಳಿತಾಧಿಕಾರಿಗಳು)

# ಫ್ಲೋರೈಡ್
# ಜಾಗತಿಕ ಸಮಸ್ಯೆ

ಮನುಷ್ಯನ ಆರೋಗ್ಯಕ್ಕೆ ಫ್ಲೋರೈಡ್ ಅಗತ್ಯ. ಆದರೆ ಅತಿಯಾದರೆ ಅನಾರೋಗ್ಯಕ್ಕೆ ಕಾರಣ. ಇಂತಹ ಒಂದು ಮಹತ್ವದ ವಸ್ತು ಇತ್ತೀಚೆಗೆ ಭಾರಿ ಸುದ್ದಿ ಮಾಡುತ್ತಿದೆ. ನೀರು, ಆಹಾರ ಮುಖಾಂತರ ಫ್ಲೋರೈಡ್ ನಿಗದಿತ ಮಟ್ಟಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ದೇಹವನ್ನು ಸೇರುತ್ತಿರುವುದರಿಂದ ಹಲವಾರು ದುಷ್ಪರಿಣಾಮ ಬೀರಿ ಆತಂಕ ಹುಟ್ಟಿಸಿದೆ. ದೇಶದಲ್ಲಿ ಬಹುತೇಕ ರಾಜ್ಯಗಳಲ್ಲಿ ಈ ಸಮಸ್ಯೆ ಕಾಣಿಸಿಕೊಂಡಿರುವುದಲ್ಲದೇ, ಕರ್ನಾಟಕದ ಹಲವಾರು ಪ್ರದೇಶಗಳಲ್ಲಿ ಈ ಸಮಸ್ಯೆ ತಲೆದೋರಿದೆ. ಹಾಗೆಂದ ಮಾತ್ರಕ್ಕೆ ಇದು ಭಾರತಕ್ಕೆ ಸೀಮಿತವಾದ ಸಮಸ್ಯೆಯೇನಲ್ಲ, ವಿಶ್ವದ ಅಭಿವೃದ್ಧಿ ಹೊಂದಿದ ಹಾಗೂ ಅಭಿವೃದ್ಧಿ ಹೊಂದುತ್ತಿರುವ, ಜೊತೆಗೆ ಹಿಂದುಳಿದ ರಾಷ್ಟ್ರಗಳು ಸಹ ಈ ಸಮಸ್ಯೆಯನ್ನು ಎದುರಿಸುತ್ತಿವೆ. ಇದರಿಂದ ಇದು ಜಾಗತಿಕ ಸಮಸ್ಯೆ ಎಂದೇ ಗುರುತಿಸಿಕೊಂಡಿದೆ. ೧೯೩೭ರಲ್ಲಿ ಮದ್ರಾಸ್ ಪ್ರೆಸಿಡೆನ್ಸಿ ಮಿಶಾರ್ಟ್ ಮತ್ತು ಅವರ ಸಹಕಾರಿಗಳು ಫ್ಲೋರೊಸಿಸ್ ರೋಗದ ಸಮಸ್ಯೆ ಕಂಡುಹಿಡಿದರು. ದೇಶದಲ್ಲಿ ಅತ್ಯಧಿಕ ಪ್ರಮಾಣದಲ್ಲಿ ಆಂಧ್ರಪ್ರದೇಶ, ಕರ್ನಾಟಕದಲ್ಲಿ ಈ ಸಮಸ್ಯೆ ಕಂಡುಬರುತ್ತಿದೆ.

ಫ್ಲೋರೈಡ್, ಫ್ಲೋರಿನ್ ಎನ್ನುವ ಮೂಲ ವಸ್ತುವಿನ ಲವಣ – ಫ್ಲೋರಿನ್ ಹೆಲೋಜಿನ್ ಗುಂಪಿಗೆ ಸೇರಿದ ಅತ್ಯಂತ ಕ್ರಿಯಾಶೀಲ ಮೂಲವಸ್ತು. ಇದು ಭೂಮಿಯ ಹೊರ ಕವಚದಲ್ಲಿ ಅತ್ಯಧಿಕ ಪ್ರಮಾಣದಲ್ಲಿ ದೊರೆಯುವ ೧೮ನೆಯ ಮೂಲವಸ್ತು. ಸಾಮಾನ್ಯವಾಗಿ ಇತರ ವಸ್ತುಗಳೊಂದಿಗೆ ಅಂದರೆ ಕ್ಯಾಲ್ಸಿಯಂ, ತಾಮ್ರ, ಸೀಸ, ರಂಜಕ ಇತ್ಯಾದಿಗಳೊಂದಿಗೆ ಸಂಯುಕ್ತಗೊಂಡು ಫ್ಲೋರೈಡ್ ಉತ್ಪತ್ತಿಯಾಗುತ್ತದೆ.

ಫ್ಲೋರೈಡ್‌ನ ನಿಗದಿತ ಪ್ರಮಾಣ ಕುಡಿಯುವ ನೀರಿನಲ್ಲಿರುವ ಫ್ಲೋರೈಡ್‌ನ ಪ್ರಮಾಣವನ್ನು ಅವಲಂಬಿಸಿರುತ್ತದೆ. ಉಷ್ಣವಲಯದ ಹಾಗೂ ಸಮಶೀತೋಷ್ಣವಲಯದ ದೇಶಗಳಿಗೂ ಈ ಪ್ರಮಾಣ ಭಿನ್ನವಾಗಿರುತ್ತದೆ. ದೇಶದಲ್ಲಿ ಈ ಪ್ರಮಾಣ ದಶಲಕ್ಷ ಪ್ರಮಾಣಕ್ಕೆ ೦.೫ರಿಂದ ೧.೫ರಷ್ಟು ಅಂದರೆ ಪ್ರತಿ ಲೀಟರ್‌ಗೆ ೦.೫ರಿಂದ ೧.೫ ಮಿ.ಗ್ರಾಂನಷ್ಟು. ಆದರೆ, ಕೃಷಿ ಬೆಳೆಗಳು ಮತ್ತಿತರ ಆಹಾರ ವಸ್ತುಗಳು ಹೆಚ್ಚು ಹೆಚ್ಚು ಪ್ರಮಾಣದಲ್ಲಿ ಫ್ಲೋರೈಡ್‌ಗಳನ್ನು ಹೊಂದುತ್ತಿರುವುದರಿಂದ ಈ ಬಗ್ಗೆ ಕಾಳಜಿ ಹೆಚ್ಚುತ್ತಿದೆ. ಈ ಪ್ರಮಾಣ ಲೀಟರಿಗೆ ೦.೫ ಮಿ.ಗ್ರಾಂ.ದಷ್ಟಕ್ಕೆ ಇಳಿಸಲಾಗಿದೆ.

**ಮೂಲಗಳು**

ಫ್ಲೋರೈಡ್ ಖನಿಜಗಳನ್ನು ಮುಖ್ಯವಾಗಿ ೩ ರೂಪದಲ್ಲಿ ವರ್ಗೀಕರಿಸಬಹುದು :

೧. ಫ್ಲೋರೋಸ್ಪಾರ್ ೨. ಅಪೆಟ್ಯಾಟ್ ಮತ್ತು ಶಿಲಾಫಾಸ್ಫೇಟ್ ೩. ಫಾಸ್ಪರೀಸ್

**೧) ಫ್ಲೋರೋಸ್ಪಾರ್** : ಇದನ್ನು ಕ್ಯಾಲ್ಸಿಯಂ ಫ್ಲೋರ್ಯಾಡ್ ಎಂದು ಕರೆಯುತ್ತಿದ್ದು ಸುಣ್ಣ ಕಲ್ಲು, ಮರಳುಕಲ್ಲು, ಬೆಣಚುಕಲ್ಲು, ಬಿಳೀಕಲ್ಲು, ಕ್ಯಾಲ್ಸಟ್, ಬೈರಾಟ್‌ಗಳಲ್ಲಿ ದೊರೆಯುತ್ತದೆ.

**೨) ಅಪೆಟ್ಯಾಟ್ ಮತ್ತು ಶಿಲಾಫಾಸ್ಫೇಟ್** : ಕ್ಯಾಲ್ಸಿಯಂ ೪ ಫಾಸ್ಪೇಟ್ ಫ್ಲೋರೈಡ್‌ಗಳ ಸಂಯುಕ್ತದಿಂದ ಉತ್ಪತ್ತಿಯಾಗುತ್ತಿದ್ದು, ದೇಶದಲ್ಲಿ ಅಧಿಕ ಪ್ರಮಾಣದಲ್ಲಿ ದೊರೆಯುತ್ತದೆ.

**೩) ಫಾಸ್ಪರೀಸ್** : ಫಾಸ್ಫೋರೈಟ್ ಎಂದು ಕರೆಯಿಸಿಕೊಳ್ಳುವ ಈ ಮೂಲವಸ್ತು ಪದರು ಪದರಾಗಿ ಸಂಗ್ರಹವಾಗಿರುವ ಫಾಸ್ಫೇಟ್ ನಿಕ್ಷೇಪವೇ ಈ ಫಾಸ್ಪರೀಸ್. ಇದು ಸಹ ಅಧಿಕ ಪ್ರಮಾಣದಲ್ಲಿ ಕಂಡುಬರುತ್ತದೆ.

ಹೀಗೆ ಭೂಮಿಯಲ್ಲಿ ದೊರೆಯುವ ಫ್ಲೋರೈಡ್‌ಗಳು ಶರೀರಕ್ಕೆ ನೀರಿನ ಮೂಲಕ ಹಾಗೂ ಇತರ ವಸ್ತುಗಳ ಮೂಲಕ ದೇಹದೊಳಗೆ ಸೇರಿ ವಿವಿಧ ರೀತಿಯ ಕೆಟ್ಟ ಪರಿಣಾಮ ಬೀರುತ್ತವೆ. ಮಣ್ಣು ನದಿಯ ನೀರು ಅಂತರ್ಜಲ ಹಾಗೂ ವಾತಾವರಣಗಳಲ್ಲಿ ಈ ಫ್ಲೋರೈಡ್ ಸಂಯುಕ್ತಗೊಂಡು ವಿವಿಧ ರೀತಿಯಲ್ಲಿ ಹರಿದು ಹೋಗುವುದನ್ನು ಮುಖ್ಯವಾಗಿ ೩ ರೀತಿಯಲ್ಲಿ ವರ್ಗೀಕರಿಸಬಹುದು. ೧) ನೀರು, ೨) ಆಹಾರ, ೩) ಔಷಧಿ.

**೧) ನೀರು** : ನೀರಿನಲ್ಲಿ ಫ್ಲೋರೈಡ್‌ಗಳ ಪ್ರಮಾಣ ದಶಲಕ್ಷಕ್ಕೆ ೦.೨ರಿಂದ ೩೮.೦೦ ಭಾಗದಷ್ಟಿರುವುದು ದೃಢಪಟ್ಟಿದೆ. (ದಶಲಕ್ಷ ಪ್ರಮಾಣವೆಂದರೆ ಪ್ರತಿ ಲೀಟರ್‌ಗೆ ಮಿ.ಗ್ರಾಂದಷ್ಟು). ಈ ನೀರನ್ನು ಸಾಮಾನ್ಯ ಅಗತ್ಯತೆಗಳಿಂದಲ್ಲದೇ ನೀರಾವರಿಗೆ, ಜಾನುವಾರಗಳಿಗೆ ಅಲ್ಲದೇ ಕುಡಿಯುವುದಕ್ಕೆ ಅಡುಗೆಗೆ ಬಳಸಲಾಗುತ್ತದೆ. ನೀರಿನಲ್ಲಿ ಫ್ಲೋರೈಡ್ ಪ್ರಮಾಣ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶದಲ್ಲಿ ಭಿನ್ನವಾಗಿರುತ್ತದೆ.

ಕ್ಷಾರಯುಕ್ತ ನೀರಿನಲ್ಲಿ ಫ್ಲೋರೈಡ್ ಅಧಿಕವಾಗಿದ್ದರೆ, ಬಾವಿಯಲ್ಲಿ ಸ್ವಲ್ಪ ಕಡಿಮೆ, ಕೆರೆಗಳಲ್ಲಿ ಇನ್ನೂ ಕಡಿಮೆ. ನದಿಯಲ್ಲಿನ ಹರಿಯುತ್ತಿರುವ ನೀರಿನಲ್ಲಿ ಶೇ. ೦.೫ ಮಿ.ಗ್ರಾಂ. ದಷ್ಟಿರುತ್ತದೆ. ಸಮುದ್ರ ನೀರಿನಲ್ಲಿ ೦.೫ರಿಂದ ೨.೪ ಮಿ.ಗ್ರಾಂ. ಇರಬಲ್ಲದು.

**೨) ಆಹಾರ** : ಮಣ್ಣು ಮತ್ತು ನೀರು ಹೆಚ್ಚು ಹೆಚ್ಚಾಗಿ ಫ್ಲೋರೈಡ್ ಕೂಡಿ ಕಲುಷಿತವಾದಂತೆಲ್ಲ ಬೆಳೆ ಮತ್ತು ಜಾನುವಾರುಗಳಲ್ಲಿ ಮೇವುಗಳ ಫ್ಲೋರೈಡ್‌ಯುಕ್ತ ಲವಣಗಳನ್ನು ಹೆಚ್ಚಾಗಿ ಹೀರಿಕೊಳ್ಳುವ ಪ್ರವೃತ್ತಿ ಕಂಡುಬರುತ್ತದೆ. ಸಸ್ಯದ ಬೇರೆ ಬೇರೆ ಭಾಗಗಳಲ್ಲಿ ಫ್ಲೋರೈಡ್ ಸಂಗ್ರಹಗೊಂಡಿದ್ದರ ಪರಿಣಾಮವಾಗಿ ಬೇರೆ ಬೇರೆ ಸಸ್ಯಗಳು ಬೇರೆ ಬೇರೆ ರೀತಿಯಲ್ಲಿ ವರ್ತಿಸುತ್ತವೆ. ಕೆಲವು ಸಸ್ಯಗಳು ಫ್ಲೋರೈಡ್‌ಗಳನ್ನು ಎಲೆ, ಹಣ್ಣು, ಬೀಜ, ಕಾಂಡ ಮತ್ತು ಬೇರುಗಳಲ್ಲಿ ಸಂಗ್ರಹಿಸುವುದು ಕಂಡುಬರುತ್ತದೆ.

ಎಣ್ಣೆ ಬೀಜಗಳು, ತರಕಾರಿ, ಮಸಾಲೆ ವಸ್ತುಗಳು, ಎಣ್ಣೆ, ಮೃದು ಪಾನೀಯಗಳು, ಹಣ್ಣು, ಮೀನು, ಮಾಂಸ, ಸಕ್ಕರೆ, ಉಪ್ಪು, ಒಣಗಿಸಿದ ಹಣ್ಣು ಹಾಗೂ ಮತ್ತಿತರ ಆಹಾರ ಪದಾರ್ಥಗಳನ್ನು ವಿಜ್ಞಾನಿಗಳು ಪರೀಕ್ಷಿಸಿ ಫ್ಲೋರೈಡ್ ಇರುವಿಕೆಯನ್ನು ದೃಢಪಡಿಸಿದ್ದಾರೆ. ಬೇಯಿಸದ ಪದಾರ್ಥಗಳಿಗಿಂತ ಬೇಯಿಸಿದ ಪದಾರ್ಥಗಳಲ್ಲಿ ಅಧಿಕ ಪ್ರಮಾಣದಲ್ಲಿ ಫ್ಲೋರೈಡ್ ಇರುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾರೆ.

ಮಸಾಲೆ ಪದಾರ್ಥಗಳಲ್ಲಿ ಅಧಿಕವಾಗಿ ಈ ಫ್ಲೋರೈಡ್ ಇರುತ್ತದೆ. ನಗರ ಪ್ರದೇಶದ ಜನತೆ ಈ ಸಮಸ್ಯೆ ಎದುರಿಸುತ್ತಾರೆ. ಗ್ರಾಮಾಂತರ ಪ್ರದೇಶದ ಜನತೆ ಹೆಚ್ಚು ಹೆಚ್ಚು ಮಸಾಲೆ ಪದಾರ್ಥಗಳನ್ನು ಬಳಸದೇ ಇರುವುದರಿಂದ ಈ ಮೂಲಕ ಅವರಿಗೆ ಕಡಿಮೆ ಪ್ರಮಾಣದ ಫ್ಲೋರೈಡ್ ಸೇವಿಸಿದರೂ ಅತಿಯಾಗಿ ಬಳಸುವ ಎಲೆ, ಅಡಿಕೆ, ಹೊಗೆಸೊಪ್ಪುಗಳಲ್ಲಿ ಫ್ಲೋರೈಡ್ ಪ್ರಮಾಣ ಅಧಿಕವಾಗಿರುತ್ತದೆ.

**೩) ಔಷಧಿಗಳು** : ಫ್ಲೋರಿನ್ ವಿವಿಧ ರಾಸಾಯನಿಕ ಪರಮಾಣುಗಳಲ್ಲಿ ಕ್ರಿಯಾಶೀಲತೆಯನ್ನು ಹೆಚ್ಚಿಸಬಲ್ಲದು. ಫ್ಲೋರಿನ್‌ನ ಈ ಗುಣದಿಂದಾಗಿ ಈ ಮೂಲವಸ್ತು ಔಷಧ ವಸ್ತುಗಳ ಕೈಗಾರಿಕೆಯಲ್ಲಿ ವ್ಯಾಪಕವಾಗಿ ಬಳಸಲ್ಪಡುತ್ತಿದೆ. ಔಷಧವೊಂದರ ಉಪಯುಕ್ತತೆ ಅನೇಕ ಬಾರಿ ಅದು ಎಷ್ಟು ಬೇಗ ದೇಹದಲ್ಲಿ ಚಯಾಪಚಯ ಕ್ರಿಯೆಗೆ ಒಳಪಡುತ್ತದೆ, ಮತ್ತು ಎಷ್ಟು ಬೇಗ ನಿರೀಕ್ಷಿತ ಪರಿಣಾಮ ಉಂಟುಮಾಡಬಲ್ಲದು ಎನ್ನುವುದರ ಮೇಲೆ ನಿರ್ಧರಿಸಲ್ಪಡುತ್ತದೆ. ಔಷಧ ವಸ್ತುವಿನ ರಚನೆಯ ವಿನ್ಯಾಸದ ದುರ್ಬಲ ಜಾಗದಲ್ಲಿ ಫ್ಲೋರಿನ್ ಅಳವಡಿಸಿ ಅದು ಬೇಗ ವಿಭಜನೆಗೊಳಗಾದಂತೆ ಅದರಲ್ಲಿ ಸ್ಥಿರತೆಯನ್ನುಂಟುಮಾಡಿ ಅದರ ಸಾಮರ್ಥ್ಯವನ್ನು ಹೆಚ್ಚಿಸುವಲ್ಲಿ ರಾಸಾಯನಶಾಸ್ತ್ರಜ್ಞರು ಯಶಸ್ವಿಯಾಗಿದ್ದಾರೆ. ಫ್ಲೋರೋ ಸ್ಟಿರ್ಯಾಡ್, ಫ್ಲೋರೋಯುರೆಸಿಲ್, ಫ್ಲೋರ್ಯಾಡ್‌ಯುಕ್ತ ಪ್ರತಿ ಹಿಸ್ಟಮಿನಿಕ್ಸ್ ಇವು ಫ್ಲೋರೈಡ್‌ಗಳನ್ನೊಳಗೊಂಡ ಕೆಲವು ಔಷಧ ಚಿಕಿತ್ಸೆಗಳು. ಇದಲ್ಲದೆ ಮೂಳೆಗಳ ಕ್ಷೀಣತೆ ಇರುವ ರೋಗಿಗಳಿಗೆ ಸೋಡಿಯಂ ಫ್ಲೋರ್ಯಾಡ್‌ನ್ನು ಪ್ರತ್ಯೇಕವಾಗಿ ಅಥವಾ ಕ್ಯಾಲ್ಸಿಯಂ 'ಡಿ' ಜೀವಸತ್ವ ಮತ್ತು ಏಸ್ಟ್ರೋಜಿನ್‌ನೊಂದಿಗೆ ಸೇರಿಸಿ ಕೊಡಲಾಗುತ್ತದೆ. ಹಲ್ಲು ಕೊರೆತಕ್ಕೆ ಫ್ಲೋರೈಡ್ ವಾರ್ನಿಕ್ ಮತ್ತು ಫ್ಲೋರೈಡ್ ಟೂತ್‌ಪೇಸ್ಟ್‌ಗಳನ್ನು ಉಪಯೋಗಿಸಲು ಸಲಹೆ ಕೊಡಲಾಗುತ್ತದೆ.

**ಅಪಾಯಗಳು**

ಮಾನವನ ದೇಹದಲ್ಲಿ ವಿವಿಧ ಮೂಲಗಳಿಂದ ಸೇರಿಕೊಳುವ ಈ ಫ್ಲೋರೈಡ್ ಒಂದು ವೇಳೆ ನಿಗದಿತ ಪ್ರಮಾಣಕ್ಕಿಂತಲೂ ಅಧಿಕವಾಗಿದ್ದರೆ ಅನೇಕ ಅಪಾಯಗಳಿಗೆ ಎಡೆ ಮಾಡಿ ಕೊಡುತ್ತದೆ. ಇದು ವ್ಯಕ್ತಿಯಿಂದ ವ್ಯಕ್ತಿಗೆ ವ್ಯತ್ಯಾಸವಾಗುತ್ತದೆ. ಅಸ್ಥಿಪಂಜರ, ದಂತ ಸಂಬಂಧಿ ರೋಗಲಕ್ಷಣಗಳು ಕಂಡುಬರುತ್ತವೆ.

ನರ ಸಂಬಂಧಿ ಲಕ್ಷಣಗಳನ್ನು ಅವಲೋಕಿಸಿದಾಗ, ನರದೌರ್ಬಲ್ಯ, ಮಾನಸಿಕವಾಗಿ ಕುಗ್ಗುವುದು, ಕೈಬೆರಳು, ಕಾಲ್ಬೆರಳುಗಳಲ್ಲಿ ನೋವು, ಅತಿ ಬಾಯಾರಿಕೆ, ಪದೇ ಪದೇ ಮೂತ್ರ ಬಂದಂತನಿಸುವುದು ಇಂಥವುಗಳಾಗಿವೆ.

'ಅಲರ್ಜಿ' ಸಂಬಂಧಿ ಲಕ್ಷಣಗಳಾದರೆ, ರಕ್ತನಾಳಗಳ ಉರಿ ಚರ್ಮದ ಮೇಲೆ ಗುಳ್ಳೆಗಳು ಮಕ್ಕಳಲ್ಲಿ ಕಾಣಿಸಿಕೊಳ್ಳುವುದೂ ಸ್ನಾಯು ಸಂಬಂಧಿ ಲಕ್ಷಣಗಳೆಂದರೆ ಸ್ನಾಯು ದೌರ್ಬಲ್ಯ, ಗಡಸುತನ, ಸ್ನಾಯು ಸೆಳೆತ, ಸ್ನಾಯುಗಳಲ್ಲಿ ನೋವು ಇವೇ ಮೊದಲಾದವುಗಳು. ಕರುಳು ಸಂಬಂಧಿ ಲಕ್ಷಣಗಳೆಂದರೆ, ಡಯೋರಿಯಾ, ಮಲಬದ್ಧತೆ, ತೀವ್ರ ಹೊಟ್ಟೆನೋವು ಮತ್ತು ವಾಂತಿ ಪಿತ್ತೋದ್ರೇಕ ಮುಂತಾದವುಗಳು. ಈ ತೊಂದರೆಗಳು ಅಸ್ಥಿಪಂಜರಕ್ಕೆ ಸಂಬಂಧಿಸಿದ್ದಾದರೂ ನಿಖರವಾಗಿ ಫ್ಲೋರೈಡಿನಿಂದ ಸಂಬಂಧಿಸಿದೆಂದು ಹೇಳಲಾಗದು. ಏಕೆಂದರೆ ಇತರ ಕಾರಣಗಳಿಂದಲೂ ಮೇಲಿನ ತೊಂದರೆ ಕಾಣಿಸಿರಬಹುದು. ಆದರೆ ಇತ್ತೀಚಿನ ಸಂಶೋಧನೆಗಳಲ್ಲಿ ಈ ಫ್ಲೋರೈಡ್‌ನಿಂದ ಈ ಮೇಲಿನ ಕಾಯಿಲೆಗಳು ಉದ್ಭವಿಸುತ್ತವೆಂದು ದೃಢಪಟ್ಟಿದೆ.

ಅಸ್ಥಿಪಂಜರದ ಫ್ಲೋರೋಸಿಸ್ ಕೂಡಾ ಮಕ್ಕಳನ್ನೂ ಮುದುಕರನ್ನೂ

ಹೆಚ್. ಪುಟ್ಟು

ಒಂದೇ ರೀತಿ ಬಾಧಿಸುತ್ತದೆ. ತಾಯಿಯ ಹೊಟ್ಟೆಯಲ್ಲಿ ಸಂಗ್ರಹವಾಗಿದ್ದ ಫ್ಲೋರೈಡ್ ಬೆಳೆಯುತ್ತಿರುವ ಭ್ರೂಣದ ಮೇಲೆ ದುಷ್ಪರಿಣಾಮವುಂಟುಮಾಡಬಹುದು. ಏಕೆಂದರೆ ಫ್ಲೋರೈಡ್‌ಗೆ ಯಾವ ನಿರ್ಬಂಧವೂ ಇಲ್ಲ. ರಕ್ತನಾಳಾದ್ಯಂತ ಕ್ಯಾಲ್ಸಿಯಂ ಸೇರಿ ಹುಟ್ಟಿದ ಕೂಡಲೇ ಮಗು ಸಾಯುತ್ತಿರುವ ಬಗ್ಗೆ ಅನೇಕ ಉದಾಹರಣೆಗಳಿವೆ.

**ಹಲ್ಲಿನ ಫ್ಲೋರೋಸಿಸ್ :** ಹಲ್ಲಿನ ಮೇಲೆ ಕಾಣಿಸಿಕೊಳ್ಳುವ ಬಿಳಿ ಅಥವಾ ಹಳದಿ ಕಲೆಗಳಿಂದ ಹಲ್ಲಿನ ಫ್ಲೋರೋಸಿಸ್‌ನ್ನು ಗುರುತಿಸಬಹುದು. ಈ ಕಲೆಗಳು ಕ್ರಮೇಣ ಕಂದು ಬಣ್ಣಕ್ಕೆ ತಿರುಗುತ್ತವೆ. ಇವು ಕ್ರಮೇಣ ಇಡೀ ಹಲ್ಲನ್ನು ಕಪ್ಪಾಗಿಸಿ ಕೊನೆಗೆ ಕತ್ತರಿಸಿಹಾಕುತ್ತವೆ. ಫ್ಲೋರೋಸಿಸ್ ತೊಂದರೆಯಲ್ಲಿ ಹುಟ್ಟಿ ಬೆಳೆದ ಮಕ್ಕಳಲ್ಲಿ ಇದು ವಿಶೇಷವಾಗಿ ಕಂಡುಬರುತ್ತದೆ. ಇಂತಹ ಪಿಡುಗಿಗೆ ಒಳಗಾಗದೆ ಬೆಳೆದ ಮಕ್ಕಳು ತಾರುಣ್ಯದಲ್ಲಿ ಫ್ಲೋರೊಸಿಸ್ ತೊಂದರೆಯಿಲ್ಲದ ಜಾಗಗಳಿಗೆ ಹೋದರೆ ಅವರಲ್ಲಿ ಹಲ್ಲಿನ ಫ್ಲೋರೋಸಿಸ್ ಬಾಧೆ ಕಂಡುಬರುವುದಿಲ್ಲ. ಆದರೆ ಮೂಳೆ ಸಂಬಂಧಿ ಅಥವಾ ಮೂಳೆರಹಿತ ಫ್ಲೋರೋಸಿಸ್ ಬಾಧೆ ಕಂಡುಬರಬಹುದು.

ಈ ಫ್ಲೋರೋಸಿಸ್ ಅಸಹ್ಯವನ್ನುಂಟುಮಾಡುವುದಷ್ಟೇ ಅಲ್ಲ, ಗಂಭೀರ ಸಾಮಾಜಿಕ ಸಮಸ್ಯೆಯನ್ನೂ ಉಂಟುಮಾಡಬಹುದು.

**ವರ್ತನೆ ಹೇಗೆ ?**

ಫ್ಲೋರೈಡ್ ದೇಹದ ಅಂಗಾಂಗಗಳ ಮೇಲೆ ವಿವಿಧ ರೀತಿಯಲ್ಲಿ ವರ್ತಿಸುತ್ತದೆ. ಆಹಾರ ಅಥವಾ ಇತರೆ ಮೂಲಗಳಿಂದ ದೇಹದೊಳಗೆ ಸೇರಿದ ಫ್ಲೋರೈಡ್ ಎಲ್ಲಾ ಅಂಗಾಂಗಗಳಲ್ಲಿ ಸಂಗ್ರಹವಾಗಿ ಮೃದು ಎಲುಬಿನ ಅಂಗಾಂಶದಲ್ಲಿ ಅಧಿಕವಾಗಿ ಸಂಗ್ರಹವಾಗುತ್ತದೆ. ಪ್ರೋಟಿನ್ ಸಂಸ್ಕರಣಕ್ಕೆ ಆತಂಕ ಒಡ್ಡಬಹುದು. ಇದರಿಂದ ದೇಹದಲ್ಲಿ ಪ್ರೋಟಿನ್ ಉತ್ಪತ್ತಿ ಕುಂಠಿತಗೊಳ್ಳುತ್ತದೆ. ಹಲ್ಲು ಮತ್ತು ಎಲುಬುಗಳು ಗಟ್ಟಿಯಾಗಿರಲು ಕಾರಣ ಅವುಗಳ ಅಂಗಾಂಶಗಳಲ್ಲಿ ಕೊಲ್ಲಾಜಿನ್ ಪ್ರೋಟಿನ್ ಎನ್ನುವ ರೀತಿಯ ನಾರಿನಂತಹ ವಸ್ತು ಇರುವುದು. ಇವುಗಳ ಮೇಲೆ ಕ್ಯಾಲ್ಸಿಯಂ ಸೂಕ್ಷ್ಮಕಣಗಳು ವ್ಯವಸ್ಥಿತ ರೀತಿಯಲ್ಲಿ ಸಂಗ್ರಹವಾಗುತ್ತವೆ. ಫ್ಲೋರೈಡ್ ಕೊಲ್ಲಾಜಿನ್-ಪ್ರೋಟಿನ್‌ನ ರಚನೆಯನ್ನು ವ್ಯತ್ಯಯಗೊಳಿಸುತ್ತದೆ. ಇದರಿಂದ ಕ್ಯಾಲ್ಸಿಯಂ ಅದರ ಮೇಲೆ ಸಂಗ್ರಹವಾಗುವ ರೀತಿ ಅವ್ಯವಸ್ಥಿತಗೊಂಡು ಹಲ್ಲು ಮತ್ತು ಮೂಳೆಗಳ ಬೆಳವಣಿಗೆ ಮತ್ತು ಕಾರ್ಯಗಳೂ ಅಸ್ತವ್ಯಸ್ತಗೊಳ್ಳುತ್ತವೆ.

ದೇಹದಲ್ಲಿ ಉತ್ಪತ್ತಿಯಾಗುವ ಕಿಣ್ವಗಳಿಗೂ ಆತಂಕವುಂಟುಮಾಡಿ ಚಯಾಪಚಯ ಕ್ರಿಯೆಗಳನ್ನೂ ಅಸ್ತವ್ಯಸ್ತಗೊಳಿಸುತ್ತದೆ. ಇದರಿಂದ ದೇಹದಲ್ಲಿ ಅನೇಕ ರಾಸಾಯನಿಕಗಳು ಅಗತ್ಯವಾದುದಕ್ಕಿಂತಲೂ ಕಡಿಮೆ ಪ್ರಮಾಣದಲ್ಲಿ ಉತ್ಪತ್ತಿಯಾಗುತ್ತವೆ. ಇದು ಅನಾರೋಗ್ಯಕ್ಕೆ ಕಾರಣವಾಗಬಹುದು.

ರಕ್ತದಲ್ಲಿನ ಹೆಪ್ಟೋಗ್ಲೋಬಿನ್, ವ್ಯಕ್ತಿ ಎಷ್ಟರಮಟ್ಟಿಗೆ ಫ್ಲೋರೈಡ್‌ನ ದುಷ್ಪರಿಣಾಮಕ್ಕೆ ಒಳಗಾಗಬಹುದೆಂಬುದನ್ನು ತೋರಿಸುತ್ತದೆ. ಹೆಪ್ಟೋಗ್ಲೋಬಿನ್ ಹೆಚ್ಚಾಗಿದ್ದಷ್ಟೂ ಆತ ಫ್ಲೋರೈಡ್‌ನ ದುಷ್ಪರಿಣಾಮಕ್ಕೆ ಈಡಾಗುವ ಸಾಧ್ಯತೆ ಹೆಚ್ಚು. ಹೆಪ್ಟೋಗ್ಲೋಬಿನ್ ಕಡಿಮೆಯಿದ್ದರೆ ಅಧಿಕ ಪ್ರಮಾಣದಲ್ಲಿ ಸೇರಿಕೊಂಡರೂ ಆತನಲ್ಲಿ ರೋಗದ ಬಾಧೆ ಕಂಡು ಬರಲಿಕ್ಕಿಲ್ಲ. ಸಾಮಾನ್ಯವಾಗಿ ಗಂಡಸರಲ್ಲಿ ಹೆಪ್ಟೋಗ್ಲೋಬಿನ್‌ನ ಉತ್ಪತ್ತಿಯನ್ನು ಪ್ರಚೋದಿಸುವುದೇ ಇದಕ್ಕೆ ಕಾರಣ. ಸ್ತ್ರೀಯರಲ್ಲಿ ಇದಕ್ಕೆ ವಿರುದ್ಧವಾಗಿ ಕಿಣ್ವಗಳು ಹೆಪ್ಟೋಗ್ಲೋಬಿನ್ ಉತ್ಪತ್ತಿಯನ್ನು ನಿರೋಧಿಸುತ್ತವೆ. ಇದರಿಂದಲೇ ಹೆಂಗಸರಿಗಿಂತ ಹೆಚ್ಚಾಗಿ ಗಂಡಸರೇ ಈ ಬಾಧೆಗೆ ತುತ್ತಾಗುತ್ತಾರೆ.

ಹೀಗೆ ಈ ಫ್ಲೋರೈಡ್ ಮಾನವನ ದೇಹದ ಮೇಲೆ ವ್ಯಾಪಕ ಪರಿಣಾಮ ಬೀರುತ್ತಿದೆ. ಇತ್ತೀಚೆಗೆ ಇದರ ವ್ಯಾಪ್ತಿ ವಿಸ್ತಾರಗೊಳ್ಳುತ್ತಿದೆ. ಈ ಹಿಂದೆ ದೇಶದಲ್ಲಿ ಕೆಲವೇ ರಾಜ್ಯಗಳಲ್ಲಿ ಕಂಡುಬಂದ ಈ ಸಮಸ್ಯೆ ಇಂದು ಪ್ರತಿಯೊಂದು ರಾಜ್ಯಗಳಲ್ಲೂ ಕಂಡುಬರುತ್ತಿದೆ. ವಿಶ್ವದಲ್ಲಿನ ಬಹುತೇಕ ದೇಶಗಳು ಈ ಫ್ಲೋರೈಡ್ ಸಮಸ್ಯೆಯನ್ನು ಎದುರಿಸುತ್ತಿವೆ. ಈ ನಿಟ್ಟಿನಲ್ಲಿ ಆಯಾ ದೇಶಗಳು, ರಾಜ್ಯಗಳು ನಿಯಂತ್ರಣಕ್ಕೆ ಹಲವಾರು ಕ್ರಮಗಳನ್ನು ಕೈಗೊಳ್ಳುತ್ತಿವೆ. ಆದರೆ ಈ ಸಮಸ್ಯೆಯ ಬೆಳವಣಿಗೆಯ ಹಂತದಲ್ಲಿ ನಿಯಂತ್ರಣದ ಕಾರ್ಯ ಯಾವುದಕ್ಕೂ ಸಾಲದಂತಾಗಿರುವುದಂತೂ ಸತ್ಯ. ಹೀಗೆ ದಿನೇ ದಿನೇ ಹೆಚ್ಚುತ್ತಿರುವ ಈ ಸಮಸ್ಯೆಯಿಂದ ರೋಗಗಳ ಪ್ರಮಾಣ ಹೆಚ್ಚಾಗುತ್ತಿರುವುದನ್ನು ಅಲ್ಲಗಳೆಯುವಂತಿಲ್ಲ. ಇದರಿಂದಾಗಿಯೇ ಇದು ಜಾಗತಿಕ ಸಮಸ್ಯೆಯಾಗಿಯೇ ಗುರುತಿಸಿಕೊಂಡಿದೆ. ಆದ್ದರಿಂದ ಜಾಗತಿಕ ಮಟ್ಟದಲ್ಲಿ ವ್ಯಾಪಕವಾಗಿ ಹಾಗೂ ಪರಿಣಾಮಕಾರಿಯಾಗಿ ಪರಿಹಾರ ಕ್ರಮ ಕೈಗೊಳ್ಳುವುದು ಈಗ ಅಗತ್ಯವಾಗಿದೆ.

**ಹೆಚ್. ಪುಟ್ಟು**
೧ನೇ ಮಹಡಿ, ಗವಿಮಠದ ಎದುರು, ಯಲಬುರ್ಗಾ - ೫೮೩ ೨೩೬

# ಭಾರತ - ಪಾಕಿಸ್ತಾನ ಮೈತ್ರಿಗೆ ಮತ್ತೊಂದು ಅವಕಾಶ

ಭಾರತ-ಪಾಕಿಸ್ತಾನಗಳು ತಮ್ಮೊಳಗಿನ ವಿವಾದಾತ್ಮಕ ಪ್ರಶ್ನೆಗಳನ್ನು ಬಗೆಹರಿಸುವ ನಿಟ್ಟಿನಲ್ಲಿ ಈ ತಿಂಗಳಿಂದಲೇ ಮಾತುಕತೆ ಪ್ರಾರಂಭಿಸಲು ನಿರ್ಧರಿಸಿರುವುದು ಸ್ವಾಗತಾರ್ಹ ಸಂಗತಿ. ಈ ಬೆಳವಣಿಗೆ ಸಾಧ್ಯವಾದದ್ದು ಕಳೆದ ಕೆಲ ತಿಂಗಳುಗಳಲ್ಲಿ ಎರಡು ದೇಶಗಳ ಸರಕಾರಗಳು ಸಂಬಂಧಗಳ ಸುಧಾರಣೆಗಾಗಿ ಕೈಗೊಂಡ ಹಲವು ಉಪಕ್ರಮಗಳ ಫಲವಾಗಿ. ವರ್ಷದ ಪ್ರಾರಂಭದಲ್ಲಿ ಇಸ್ಲಾಮಾಬಾದ್‌ನಲ್ಲಿ ಜರುಗಿದ ದಕ್ಷಿಣ ಏಶಿಯಾ ರಾಷ್ಟ್ರಗಳ ಹನ್ನೆರಡನೇ ಶೃಂಗ ಸಮಾವೇಶದ ಸಮಯದಲ್ಲಿ ಭಾರತ-ಪಾಕಿಸ್ತಾನಗಳ ವರಿಷ್ಠರು ನಡೆಸಿದ ಸಂವಾದಗಳು ಮೂರು ವರ್ಷಗಳ ಸುದೀರ್ಘ ಕಾಲದ ಮುಖಾಮುಖಿ, ಅನಿಶ್ಚಿತತೆ, ಹಗೆತನ ಹಾಗೂ ಯುದ್ಧದ ವಾತಾವರಣದ ಅಂತ್ಯವನ್ನು ಸೂಚಿಸುತ್ತದೆ. ಈ ಶಾಂತಿ ಪ್ರಕ್ರಿಯೆ ಮುಂದುವರಿದು ಯಶಸ್ವಿಯಾಗುವುದು ಎರಡೂ ದೇಶಗಳ ನಾಯಕರ ಮುತ್ಸದ್ದಿತನದ ಮೇಲೆ ಅವಲಂಬಿತ. ಅರ್ಧ ಶತಮಾನಕ್ಕೂ ಹೆಚ್ಚು ಕಾಲದಿಂದ ಬೆಳೆದುಕೊಂಡು ಬಂದಿರುವ ಅಪನಂಬಿಕೆ, ದ್ವೇಷಾಸೂಯೆಗಳು ನಿವಾರಣೆಯಾಗುವುದು ಸುಲಭವೇನಲ್ಲ. ಹಂತಹಂತವಾಗಿ, ಪರಸ್ಪರ ವಿಶ್ವಾಸ ಮೂಡಿಸುವ ಕ್ರಮಗಳನ್ನು ಕೈಗೊಂಡು, ಕೊಡುಕೊಳ್ಳುವ ಮನೋಭಾವದಿಂದ ವ್ಯವಹರಿಸಿದರೆ ಮಾತ್ರ ಗುರಿ ಮುಟ್ಟಲು ಸಾಧ್ಯ.
ಕಳೆದ ಕೆಲ ತಿಂಗಳುಗಳಲ್ಲಿ ಕೈಗೊಳ್ಳಲಾಗಿರುವ ಉಪಕ್ರಮಗಳ ಬಗ್ಗೆ ಎರಡೂ ದೇಶಗಳ ಜನಸಾಮಾನ್ಯರು ವ್ಯಕ್ತಗೊಳಿಸಿರುವ ಪ್ರತಿಕ್ರಿಯೆ ಶಾಂತಿ ಪ್ರಕ್ರಿಯೆಗೆ ವ್ಯಾಪಕ ಬೆಂಬಲ ಇರುವುದನ್ನು ತೋರಿಸುತ್ತದೆ. ದಕ್ಷಿಣ ಏಶಿಯಾದ ಈ ಎರಡು ದೊಡ ರಾಷ್ಟ್ರಗಳ ನಡುವೆ ಮೈತ್ರಿ, ಸೌಹಾರ್ದದ ಸ್ಥಾಪನೆ ಈ ಪ್ರದೇಶದ ಎಲ್ಲ ದೇಶಗಳ ಜನತೆಯ ಏಳಿಗೆಗೆ ಸಹಾಯಕವಾಗಿರುತ್ತದೆ. ಇದನ್ನು ಮನಗಂಡು ಭಾರತ-ಪಾಕಿಸ್ತಾನ ಸರಕಾರಗಳು ಮುಂದಿನ ಹೆಜ್ಜೆ ಇರಿಸಬೇಕಾಗಿದೆ. ಅಂಥ ಕ್ರಮಗಳಿಗೆ ಜನತೆಯ ಬೆಂಬಲ ಪೂರ್ಣವಾಗಿರುತ್ತದೆ.




ಎರಡೂ ದೇಶಗಳ ನಡುವಣ ಸಂಬಂಧಗಳ ಸುಧಾರಣೆಯ ಪ್ರಕ್ರಿಯೆಗೆ ಹಠಾತ್ ಅಡ್ಡಿ ಆತಂಕಗಳು ಬರುವ ಸಾಧ್ಯತೆ ಇಲ್ಲದಿಲ್ಲ. ಭಾರತ-ಪಾಕಿಸ್ತಾನಗಳಲ್ಲಿರುವ ಉಗ್ರಗಾಮಿಗಳು, ಮೂಲಭೂತವಾದಿಗಳು ಒಪ್ಪಂದಗಳನ್ನು ಬುಡಮೇಲು ಮಾಡುವ ಪ್ರಯತ್ನಗಳನ್ನು ನಡೆಸುವುದರಲ್ಲಿ ಸಂದೇಹವಿಲ್ಲ. ಪಾಕಿಸ್ತಾನದಲ್ಲಿ ಮೂಲಭೂತವಾದಿಗಳು, ಜೈಷೆ ಮೊಹಮದ್‌ನಂಥ ಭಯೋತ್ಪಾದಕ ಸಂಸ್ಥೆಗಳವರು ಅಧ್ಯಕ್ಷ ಮುಷರಫ್‌ರ ಕ್ರಮಗಳಿಗೆ ವಿರೋಧವಿದ್ದಾರೆ. ಈಚೆಗೆ ಮುಷರಫ್ ಹತ್ಯೆಗೆ ನಡೆದ ಎರಡು ಪ್ರಯತ್ನಗಳು ಅದಕ್ಕೆ ಸಾಕ್ಷಿ. ಹಾಗೆಯೇ ಭಾರತದಲ್ಲೂ ಸಂಘಪರಿವಾರದವರಿಗೆ ಪಾಕಿಸ್ತಾನ ದೊಂದಿಗೆ ಸಂಬಂಧಗಳ ಸುಧಾರಣೆ ಬೇಕಿಲ್ಲ. ಈ ಸಂಘಟನೆಗಳು, ಎರಡೂ ದೇಶಗಳಲ್ಲಿರುವ ಇತರ ಉಗ್ರಗಾಮಿಗಳು, ವಿವಾದಗಳಿಂದ ಲಾಭ ಪಡೆಯುತ್ತಿರುವ ಅಧಿಕಾರಶಾಹಿಗಳು ಸಂಬಂಧಪಟ್ಟ ಸರಕಾರಗಳ ಮೇಲೆ ನಾನಾ ಬಗೆಯ ಒತ್ತಡ ಗಳನ್ನು ತರುವುದು ಸಾಧ್ಯವಿದೆ. ಇವನ್ನೆಲ್ಲ ನಿಭಾಯಿಸಿಕೊಂಡು ಮುಂದುವರಿಯು ವುದಕ್ಕೆ ಎರಡೂ ದೇಶಗಳ ನಾಯಕರಲ್ಲಿ ದೃಢತೆ, ಚಾಕಚಕ್ಯತೆ ಅಗತ್ಯವಿದೆ.

ಯಾವುದೇ ಪೂರ್ವ ಸಿದ್ಧತೆ ಇಲ್ಲದೆ ಒತ್ತಡಗಳಿಗೆ ಮಣಿದು, (ಈ ಒತ್ತಡಗಳು ಯಾವುದೇ ಕಡೆಯಿಂದ ಬಂದದ್ದಾಗಿರಲಿ) ಈ ಹಿಂದೆ ಲಾಹೋರ್, ಆಗ್ರಾಗಳಲ್ಲಿ ನಡೆದ ಭಾರತ-ಪಾಕಿಸ್ತಾನಿ ನಾಯಕರ ಭೇಟಿಗಳು ವಿಫಲಗೊಂಡವು. ಈಗ ಮೂರನೆಯ ಬಾರಿ ಹಾಗಾಗದಿರಲಿ ಎನ್ನುವುದೇ ಶಾಂತಿಪ್ರಿಯರೆಲ್ಲರ ಅಪೇಕ್ಷೆ. ಅಮೆರಿಕದ ಒತ್ತಡ, ದೇಸೀ ರಾಜಕೀಯ ಪರಿಸ್ಥಿತಿಯ ಅನಿವಾರ್ಯತೆಗಳು ಎರಡೂ ದೇಶಗಳ ನಾಯಕರು ತಮ್ಮ ಬಿಗಿ ನಿಲುವನ್ನು ಬದಿಗಿರಿಸಿ, ಹೊಸ ಉಪಕ್ರಮಗಳನ್ನು ಕೈಗೊಳ್ಳುವಂತೆ ಮಾಡಿರುವುದು ನಿಜ. ಆದರೆ ಸಂಕುಚಿತ ದೃಷ್ಟಿಯಿಂದ ಈ ಬೆಳವಣಿಗೆಗಳ ರಾಜಕೀಯ ಲಾಭ ಪಡೆದುಕೊಳ್ಳಲು ಪ್ರಯತ್ನಿಸಿದರೆ ಅನಾಹುತ ವಾಗುತ್ತದೆ. ಇಸ್ಲಾಮಾಬಾದ್‌ನಲ್ಲಿ ಭಾರತದ ಪ್ರಧಾನಿ ವಾಜಪೇಯಿ, ಪಾಕಿಸ್ತಾನದ ಪ್ರಧಾನಿ ಜಫರುಲ್ಲಾಖಾನ್ ಜಮಾಲಿ, ಅಧ್ಯಕ್ಷ ಜನರಲ್ ಪರ್ವೇಜ್ ಮುಷರಫ್ ಭೇಟಿಯ ಹಿಂದೆ ತೆರೆಮರೆಯಲ್ಲಿ ನಡೆದ ಸಂಧಾನಗಳು ಕಡಿಮೆ ಏನಲ್ಲ.

ಭಯೋತ್ಪಾದನೆಯ ವಿರುದ್ಧ ಸಮರ ಸಾರಿರುವ ಅಮೆರಿಕಾಗೆ ಪಾಕಿಸ್ತಾನದ ಅಧ್ಯಕ್ಷ ಮುಷರಫ್ ಮೈತ್ರಿ ಅಗತ್ಯವಿದೆ. ಪಾಕಿಸ್ತಾನದ ಗಡಿಯಲ್ಲಿ ಅಫ್ಘಾನಿಸ್ತಾನದ ಆಕ್ರಮಣದ ಕಾಲದಲ್ಲಿ ತಂದಿರಿಸಿರುವ ಅಮೆರಿಕದ ಸೇನೆಗಳನ್ನು ಕಾಪಾಡಿಕೊಳ್ಳಲು ತಾಲಿಬಾನ್ ಮತ್ತು ಅಲ್‌ಕಾಯ್ದ ವಿರುದ್ಧ ಕ್ರಮ ಕೈಗೊಳ್ಳಲು ಅಮೆರಿಕಾಗೆ ಮುಷರಫ್‌ರನ್ನು ರಕ್ಷಿಸುವುದು ಜರೂರು ಅಗತ್ಯ. ಅದಕ್ಕಾಗಿಯೇ ಪಾಕಿಸ್ತಾನ-ಭಾರತ ಮೈತ್ರಿಯಲ್ಲಿ ಅದಕ್ಕೆ ಆಸಕ್ತಿ. ಅದಲ್ಲದೆ ಕಾಶ್ಮೀರದ ವಿಷಯದಲ್ಲಿ ಆಕ್ರಮಿತ ಪ್ರದೇಶವನ್ನೇ ಅಂತಾರಾಷ್ಟ್ರೀಯ ಗಡಿ ಮಾಡುವುದರಲ್ಲೂ ಅದಕ್ಕೆ ಲಾಭವಿದೆ. ಆಯಕಟ್ಟಿನಲ್ಲಿರುವ ಈ ಭೂಭಾಗದ ಗಿಲ್ಗಿಟ್‌ನಲ್ಲಿ ನೆಲೆ ಸ್ಥಾಪಿಸಿಕೊಳ್ಳುವ ಕನಸನ್ನು ಅದು ಮೊದಲಿನಿಂದಲೂ ಕಾಣುತ್ತಿದೆ. ಇನ್ನು ಜನರಲ್ ಮುಷರಫ್ ಸಂಪೂರ್ಣವಾಗಿ ಅಮೆರಿಕದ ತೆಕ್ಕೆಯಲ್ಲಿ ಬಿದ್ದಿದ್ದು ಇಸ್ಲಾಮ್ ಜಗತ್ತಿನ ಉಗ್ರಗಾಮಿಗಳನ್ನು ಎದುರು ಹಾಕಿಕೊಂಡಿದ್ದಾರೆ. ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡಿರುವ ಅವರಿಗೆ ಈ ಸಂದರ್ಭದಲ್ಲಿ ಭಾರತದೊಂದಿಗೆ ದ್ವೇಷ ಮುಂದು ವರಿಸುವುದರಿಂದ ಪ್ರಯೋಜನವಲ್ಲ. ಇನ್ನು ಭಾರತ ನಿರಂತರವಾಗಿ ಗಡಿಯಾಚೆಗಿನ ಭಯೋತ್ಪಾದನೆ ಎದುರಿಸುತ್ತ ಬಂದಿದ್ದು ಅದನ್ನು ನಿಗ್ರಹಿಸುವುದಕ್ಕೆ ಪಾಕಿಸ್ತಾನ ದೊಂದಿಗೆ ಕೈ ಜೋಡಿಸುವುದು ಅನಿವಾರ್ಯವಾಗುತ್ತ ಬಂದಿತು. ಅಲ್ಲದೆ ಕಾಶ್ಮೀರದಲ್ಲಿ ಪರಿಸ್ಥಿತಿಯ ನಿಯಂತ್ರಣಕ್ಕೂ ಅಗತ್ಯವಿತ್ತು. ಅಮೆರಿಕರ ಒತ್ತಡವೇನಿಲ್ಲವೆಂದು ಹೇಳಿಕೊಂಡರೂ ಬಿಗಿ ನಿಲುವನ್ನು ಕೈಬಿಡಲು ಒತ್ತಾಯವಿದ್ದೇ ಇತ್ತು. ಈ ಎಲ್ಲ ಒತ್ತಡಗಳ ಹಿನ್ನೆಲೆಯಲ್ಲಿ ಎರಡೂ ದೇಶಗಳು ಮಾತುಕತೆ ನಡೆಸಲು ಒಪ್ಪಿಕೊಂಡಿವೆ. ಇದನ್ನು ದೃಢವಾದ ಆಧಾರದ ಮೇಲಿರಿಸುವುದೀಗ ಮುಖ್ಯ.

ಆಡಳಿತಾರೂಢ ಎನ್‌ಡಿಎ ಮೈತ್ರಿಕೂಟದ ಪ್ರಧಾನ ಅಂಗ ವಾಗಿರುವ ಭಾಜಪ ನಾಯಕರು ಈಗಾಗಲೇ ಭಾರತ-ಪಾಕಿಸ್ತಾನ ಸಂಬಂಧಗಳ ಸುಧಾರಣೆಯತ್ತ ಕ್ರಮಗಳನ್ನು ಪ್ರಧಾನಿಯವರ ಇಸ್ಲಾಮಾಬಾದ್ ಭೇಟಿಯನ್ನು ತಮ್ಮ ಪಕ್ಷದ ಸಾಧನೆ ಎಂದು ಹೇಳಿಕೊಂಡು, ಚುನಾವಣಾ ಪ್ರಚಾರಕ್ಕೆ ಹೂರಣವಾಗಿ ಬಳಸಿಕೊಳ್ಳಲು ಹೊರಟಿದ್ದಾರೆ. ಉಪಪ್ರಧಾನಿ ಅದ್ವಾನಿ ಇಸ್ಲಾಮಾಬಾದ್‌ನ ಭಾರತ- ಪಾಕಿಸ್ತಾನ ಜಂಟಿ ಹೇಳಿಕೆಯನ್ನು ಗಡಿಯಾಚೆಗಿನ ಭಯೋತ್ಪಾದನೆಯ ವಿರುದ್ಧ ಭಾರತದ ದೃಢವಾದ ನಿಲುವಿಗೆ ದೊರೆತ ವಿಜಯ ಎಂದು ಅಪಸ್ವರ ತೆಗೆದಿದ್ದಾರೆ. ಪಾಕಿಸ್ತಾನದೊಂದಿಗೆ ಮಾತುಕತೆಗೆ ಅದ್ವಾನಿಯವರ ವಿರೋಧ ಹೊಸದೇನಲ್ಲ. ಅವರ ಬೆಂಬಲಿಗರಿಗೆ, ವಿಶ್ವಹಿಂದೂ ಪರಿಷತ್, ಭಜರಂಗದಳ, ಆರೆಸ್ಸೆಸ್ ಕಾರ್ಯಕರ್ತರಿಗೆ ಪಾಕಿಸ್ತಾನದೊಂದಿಗೆ ಸಂಬಂಧಗಳ ಸುಧಾರಣೆ ಬೇಕಿಲ್ಲ. ಅವರು ಸುಧಾರಣೆಗೆ ಅಡ್ಡಿಗಳನ್ನು ಒಡ್ಡುವುದಕ್ಕೆ ಹೇಸುವುದಿಲ್ಲ. ಇದನ್ನು ಎದುರಿಸಿ ಪ್ರಧಾನಿ ವಾಜಪೇಯಿ ಮುಂದಿನ ಹೆಜ್ಜೆ ಇರಿಸಬೇಕಾಗಿದೆ. ಮುಂಬರುವ ಮಾತುಕತೆಗಳು ಯಾವುದೇ ಮಟ್ಟದಲ್ಲಿ ಜರುಗಿದರೂ ಸರಿಯೇ, ಈವರೆಗಿನ ಗಳಿಕೆಯನ್ನು ಗಟ್ಟಿಯಾಗಿಸುವುದು ಮೊದಲ ಕಾರ್ಯ. ಇನ್ನು ಉಗ್ರಗಾಮಿಗಳ ಕೃತ್ಯಗಳಿಗೆ ಬಲಿ ಬೀಳದೆ ದೃಢವಾಗಿ ಅವರನ್ನು ಎದುರಿಸಿ, ದಿಟ್ಟತನದಿಂದ ಸಮಸ್ಯೆಗಳಿಗೆ ಪರಿಹಾರ ಕಾಣುವತ್ತ ಮುಂದೆ ಸಾಗಬೇಕಾಗಿದೆ. ಭಾರತ-ಪಾಕಿಸ್ತಾನ ಸಂಬಂಧಗಳ ಇತಿಹಾಸದಲ್ಲಿ ಏಳು-ಬೀಳು ಗಳಲ್ಲಿ, ಹಿಂದೆ ಮಾಡಿಕೊಂಡ ಒಪ್ಪಂದಗಳ ವೈಫಲ್ಯಗಳ ಹಿನ್ನೆಲೆಯಲ್ಲಿ ನೋಡಿದಾಗ, ಈ ವರ್ಷಾರಂಭದಲ್ಲಿ ಆಗಿರುವ ಬೆಳವಣಿಗೆ ಒಂದು ಅಪೂರ್ವ ಅವಕಾಶವನ್ನು ತೆರೆದಿದೆ. ಈ ಹಿಂದೆಯೂ ಸಕಾರಾತ್ಮಕ ಮಾತುಕತೆಗಳಿಗೆ ಅವಕಾಶ ಒದಗಿದರೂ ಅದನ್ನು ಗಾಳಿಗೆ ತೂರಲಾಗಿತ್ತು. ಈಗ ಒದಗಿರುವ ಅವಕಾಶವನ್ನು ಕಳೆದುಕೊಂಡರೆ ಇತಿಹಾಸ ಕ್ಷಮಿಸದು. ಈ ಬಾರಿ ಹಾಗಾಗದೆ ಎರಡೂ ದೇಶಗಳ ಜನತೆಗಳ ಹಿತದೃಷ್ಟಿಯಿಂದ, ಉಪಖಂಡದಲ್ಲಿ ಶಾಂತಿ ಸ್ಥಾಪನೆಯ ದೃಷ್ಟಿಯಿಂದ ಮಾತುಕತೆಗಳು ಸಫಲಗೊಂಡು ಒಪ್ಪಂದಕ್ಕೆ ಬರಲಾಗುವುದೆ ? ಇದು ಎಲ್ಲರನ್ನೂ ಕಾಡುತ್ತಿರುವ ಪ್ರಶ್ನೆ.

- ಸೀಯಾರ್ಕೆ

# ಕ್ರಿ.ಶ. ೨೫೦೩ರಲ್ಲಿ ಯೂರೋಟೋಪಿಯಾ ಗ್ರಹದ ಮೇಲಿನ ವಿದ್ಯಾರ್ಥಿಗಳ ಇತಿಹಾಸ ಪಠ್ಯಪುಸ್ತಕದಿಂದ ಆಯ್ದ ಭಾಗ

ಡಾ॥ ಪುಷ್ಪ ಎಂ. ಭಾರ್ಗವ

೨೦-೨೧ನೆಯ ಶತಮಾನದಲ್ಲಿ ಭೂಗ್ರಹದ ಮೇಲೆ ಅಮೆರಿಕದ ಸಂಯುಕ್ತ ಸಂಸ್ಥಾನಗಳು ಎಂಬ ಒಂದು ದೇಶವಿತ್ತು. ಪ್ರಪಂಚದ ಬೇರೆ ಬೇರೆ ದೇಶಗಳಿಂದ ಪ್ರತಿಭಾವಂತರೂ, ಸೃಜನಶೀಲರೂ ಆದ ಜನ, ತಮ್ಮ ದೇಶದಲ್ಲಿ ಅವಕಾಶಗಳಿಲ್ಲದಿದ್ದು ದರಿಂದಲೋ, ದಬ್ಬಾಳಿಕೆಯಿಂದ ತಪ್ಪಿಸಿಕೊಳ್ಳುವುದಕ್ಕೋ ಆ ದೇಶಕ್ಕೆ ವಲಸೆ ಹೋಗಿ ನೆಲೆಸಿದರು. ಆ ವಲಸೆದಾರರೂ ಅವರ ಸಂತತಿಯವರೂ ಮುಂದಿನ ಕೆಲವು ಶತಮಾನ ಗಳಲ್ಲಿ, ಅಮೆರಿಕವನ್ನು, ಆ ಕಾಲಕ್ಕೆ, ಭೂಗ್ರಹದ ಅತ್ಯಂತ ಶಕ್ತಿಶಾಲಿಯಾದ, ಸಂಪದ್ಭರಿತ ವಾದ ಶ್ರೀಮಂತ ದೇಶವನ್ನಾಗಿ ಮಾಡಿದರು. ಮಾನವನ ಒಳಿತಿಗಾಗಿ ಉಪಯೋಗಿಸುವ ವಿಜ್ಞಾನ ಮತ್ತು ತಂತ್ರಜ್ಞಾನಗಳಲ್ಲಿ ಮಾತ್ರವಲ್ಲದೆ, ಅಮೆರಿಕವು ದುರದೃಷ್ಟವಶಾತ್ ಸಾಮೂಹಿಕ ನಾಶಕ್ಕೆ ಬಳಸುವ ಅಸ್ತ್ರಗಳನ್ನು ತಯಾರಿಸಿ ಶೇಖರಿಸುವುದರಲ್ಲಿಯೂ, ಹಿಂದೆಂದೂ ಕಾಣದಿದ್ದಂಥ ಪ್ರಬಲ ರಾಷ್ಟ್ರವಾಗಿಬಿಟ್ಟಿತು.

ಇದರಿಂದಾಗಿ ವಿಶ್ವದ ಕೇವಲ ೪% ಜನಸಂಖ್ಯೆ ಇದ್ದ ಅಮೆರಿಕ ದೇಶದ ಸರ್ಕಾರ ಮತ್ತು ಅಲ್ಲಿಯ ಜನರು ಪ್ರಪಂಚದ ಉಳಿದೆಲ್ಲ ದೇಶಗಳನ್ನೂ ಕಡೆಗಣಿಸಿ, ತಮ್ಮ ಗಮನವನ್ನೆಲ್ಲಾ ತಮ್ಮ ಕಡೆಗೇ ಹರಿಸತೊಡಗಿದರು. ಪೀಳಿಗೆಯಿಂದ ಪೀಳಿಗೆಗೆ ಅವರು ಹೆಚ್ಚು ಹೆಚ್ಚಾಗಿ ಸ್ವಮಗ್ನ ಮನೋಭಾವದವರಾದರು. ದೇಶದ ಆರ್ಥಿಕ ವ್ಯವಸ್ಥೆಯು ಶಸ್ತ್ರಾಸ್ತ್ರಗಳ ಮಾರಾಟವನ್ನೂ ಇತರ ದೇಶಗಳ ಶೋಷಣೆಯನ್ನೂ ಅವಲಂಬಿಸತೊಡಗಿತು. ಅಮೆರಿಕವು ಭೂಮಿಯ ವಾಸ್ತವತೆಯೊಡನೆ ಸಂಪರ್ಕ ಕಳೆದುಕೊಂಡಿತು. ೨೧ನೆಯ ಶತಮಾನದ ಪ್ರಾರಂಭದಲ್ಲಿ ಆ ದೇಶ, ಒಬ್ಬ ಅಧ್ಯಕ್ಷನನ್ನು ಚುನಾಯಿಸಿತು. ಇತಿಹಾಸ ಮತ್ತು ಭೂಗೋಳಗಳ ಬಗ್ಗೆ ಆತನ ಜ್ಞಾನ, ತಾನು ವಾಸಿಸುತ್ತಿದ್ದ ವೈಟ್ ಹೌಸ್ ಎಂಬ ಸ್ಥಳಕ್ಕೆ ಮಾತ್ರ ಸೀಮಿತವಾಗಿತ್ತಲ್ಲದೆ ಅಲ್ಲಿಂದಲೇ ತಾನು ಪ್ರಪಂಚವನ್ನೆಲ್ಲಾ ನಿಯಂತ್ರಿಸಿ, ನಿರ್ದೇಶಿಸಿ, ಹತೋಟಿಯಲ್ಲಿ ಇಟ್ಟುಕೊಳ್ಳಬಲ್ಲೆನೆಂದೂ ತನ್ನ ಅಪ್ಪಣೆಗಾಗಿಯೇ ಪ್ರಪಂಚವೆಲ್ಲಾ ಕಾದುಕೊಂಡಿದೆಯೆಂದೂ ಭೋಳೆತನದಿಂದ ನಂಬಿಕೊಂಡಿದ್ದ.

**ಸುಳ್ಳು ಮತ್ತು ಮೋಸಗಳ ಸರಣಿ**

ಅಮೆರಿಕದ ವಿದೇಶಾಂಗ ನೀತಿಯು ಕ್ರಮೇಣ ಸುಳ್ಳುಗಳು ಮತ್ತು ಮೋಸ, ದುರಾಸೆ ಮತ್ತು ಅಹಂಕಾರ, ಮೌಢ್ಯ ಮತ್ತು ಸಂವೇದನಾ ರಾಹಿತ್ಯ, ಸ್ವಾರ್ಥ ಮತ್ತು ದುಷ್ಟತನ, ಆಗದವರನ್ನು ಬಲಿಪಶುಗಳನ್ನಾಗಿ ಮಾಡುವುದು ಮತ್ತು ಅನ್ಯಾಯ, ಲಂಚಗುಳಿತನ ಮತ್ತು ಶೋಷಣೆ - ಇವುಗಳ ಒಂದು ಸರಣಿಯಾಗಿಹೋಯಿತು. ಅಜ್ಞಾನ, ಮಾನವ ಸಂವೇದನಾರಾಹಿತ್ಯ ಹಾಗೂ ಸ್ವಾರ್ಥಗಳೊಡನೆ ಅಪಾರ ಸಂಪತ್ತು ಮತ್ತು ಸೈನ್ಯಬಲಗಳು ಸೇರಿಕೊಂಡಾಗ ಅದು ಅತ್ಯಂತ ಪ್ರಬಲವಾದ ಸಾಮೂಹಿಕ ನಾಶದ ಅಸ್ತ್ರವಾಗಬಲ್ಲದು ಎಂಬುದನ್ನು ಮಾನವಕುಲ ಅಮೆರಿಕದ ಅನುಭವದ ಮೂಲಕ ಅರಿತುಕೊಂಡಿತು.

> *ಅಜ್ಞಾನ, ಮಾನವ ಸಂವೇದನಾರಾಹಿತ್ಯ ಹಾಗೂ ಸ್ವಾರ್ಥದೊಡನೆ ಅಪಾರ ಸಂಪತ್ತು ಮತ್ತು ಶಕ್ತಿಗಳು ಸೇರಿಕೊಂಡಾಗ ಅತ್ಯಂತ ಪ್ರಬಲವಾದ ಸಾಮೂಹಿಕ ನಾಶದ ಅಸ್ತ್ರವಾಗಬಲ್ಲುದು ಎಂಬುದನ್ನು ಅಮೆರಿಕಾದ ಅನುಭವದ ಮೂಲಕ ಮಾನವಕುಲ ಅರಿತುಕೊಂಡಿತು.*

ಸಾಮೂಹಿಕ ನಾಶದ ಆ ಅಸ್ತ್ರವೇ ಭೂಗ್ರಹದ ಮೇಲೆ ಮಾನವ ನಾಗರಿಕತೆಯನ್ನು ನಾಶಮಾಡಿದುದು. ಮಾನವ ಜೀವಿಗಳ ಪುಣ್ಯ, ಆ ವೇಳೆಗೆ ಭೂಮ್ಯೇತರ ಜೀವಿಗಳ ಹುಡುಕಾಟದಲ್ಲಿ ತೊಡಗಿದ್ದ ಮತ್ತು ಅಮೆರಿಕದಲ್ಲೇ ಕೇಂದ್ರ ಕಚೇರಿ ಇರಿಸಿಕೊಂಡಿದ್ದ ಅಂತಾರಾಷ್ಟ್ರೀಯ ಸಂಸ್ಥೆಯು ಮಾನವ ಜೀವಿಗಳಿಗೆ ಅನುಕೂಲವಾದ ಹವಾಮಾನ ಮತ್ತಿತರ ಪರಿಸ್ಥಿತಿಗಳಿರುವ ನಮ್ಮ ಗ್ರಹ, ಯೂರೋಟೋಪಿಯಾವನ್ನು ಕಂಡು ಹಿಡಿದಿತ್ತು. ಯೂರೋಟೋಪಿಯಾಗೆ ಪ್ರಯಾಣ ಮಾಡಲು ತಕ್ಕ ವಿಧಾನಗಳನ್ನೂ ಮಾನವ ಕುಲ ಕಂಡುಕೊಂಡಿತು.

ನಮ್ಮ ಪೂರ್ವಜರು ಇಲ್ಲಿಗೆ ಬಂದದ್ದು ಹೀಗೆ. ಇದು ಇನ್ನೊಂದು ಅಮೆರಿಕಾ ಆಗದಂತೆ ನಾವು ಸದಾಕಾಲ ಎಚ್ಚರದಿಂದಿರಬೇಕು. ಏಕೆಂದರೆ, ಇಲ್ಲಿಂದ ತಪ್ಪಿಸಿಕೊಂಡು ಹೋಗಬಹುದಾದಂಥ ಬೇರೊಂದು ಗ್ರಹ ಇದುವರೆಗೆ ನಮಗೆ ಗೊತ್ತಿಲ್ಲ. ಆದುದರಿಂದ ಈ ಪಾಠ ನಮಗೆ ಬಹುಮುಖ್ಯವಾದುದು.

ಭೂಮಿಯ ಮೇಲೆ ಮಾನವ ಜೀವಿಗಳ ಅಳಿವಿಗೆ ಕಾರಣವಾದ ಅಮೆರಿಕದ ಹತ್ತು ಘೋರ ಪಾಪಗಳನ್ನು ಈ ಕೆಳಗೆ ಪಟ್ಟಿ ಮಾಡಿದೆ. (ಇಂಗ್ಲಿಷ್ ಶಬ್ದ "assassin" ಎಂಬುದು "U. S. Sins" ಎಂಬುದರ ಅಪಭ್ರಂಶ ಎನ್ನಲಾಗಿದೆ). ಕೆಳಗೆ ಕೊಟ್ಟಿರುವುದು ಕೇವಲ ಉದಾಹರಣೆಗಳು ಮಾತ್ರ, ಸಂಪೂರ್ಣ ಪಟ್ಟಿಯಲ್ಲ.

**೧. ದ್ವಿಮುಖ ನೀತಿ**

ಭ್ರಷ್ಟರಾಷ್ಟ್ರಗಳು ಎಂದು ತಾನು ಕರೆದ ಕೆಲವು ರಾಷ್ಟ್ರಗಳೊಡನೆ ವ್ಯಾಪಾರ ಮಾಡಲು ಇತರ ದೇಶಗಳಿಗೆ ಅಮೆರಿಕ ಅಡ್ಡಿ ಮಾಡಿತ್ತು. ತಾನು ಮಾತ್ರ ಆ ರಾಷ್ಟ್ರಗಳೊಡನೆ ನಿರಂತರವಾಗಿ ವ್ಯಾಪಾರ ಮಾಡುತ್ತಿತ್ತು. ತನಗೆ ಲಾಭದಾಯಕವಾಗಿ ಕಂಡಾಗ ಮಾತ್ರ ಅದು ವಿಶ್ವಸಂಸ್ಥೆಯ (U. N) ಪ್ರಣಾಳಿಕೆಯನ್ನು ಉದ್ಧರಿಸುತ್ತಿತ್ತು. ಬೇರೆ ಸಮಯದಲ್ಲಿ ಅದನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿ ತನಗೆ ಇಷ್ಟಬಂದಂತೆ ಅದರ ನಿಯಮಗಳಿಗೆ ವಿರುದ್ಧವಾಗಿ ವರ್ತಿಸುತ್ತಿತ್ತು.

ಭೂಮಿಯ ಮೇಲಿನ ಸಾಮೂಹಿಕ ಹತ್ಯೆಯ ಅಸ್ತ್ರಗಳ (ಬೈಜಿಕ, ರಾಸಾಯನಿಕ ಮತ್ತು ಜೈವಿಕ) ಅತ್ಯಂತ ದೊಡ್ಡ ಸಂಗ್ರಹ ಅಮೆರಿಕದ ಬಳಿ ಇತ್ತು. ಭೂಗ್ರಹದ ಇತಿಹಾಸದಲ್ಲಿ ಬೈಜಿಕಾಸ್ತ್ರವನ್ನು ಎಂದಾದರೊಮ್ಮೆ ಉಪಯೋಗಿಸಿದ ಏಕೈಕ ರಾಷ್ಟ್ರ ಅಮೆರಿಕ. ರಾಸಾಯನಿಕ ಅಸ್ತ್ರವನ್ನು ಮೊತ್ತಮೊದಲು ಉಪಯೋಗಿಸಿದುದೂ ಅಮೆರಿಕವೇ. ಆದರೂ ಇಸ್ರೇಲ್ ಮತ್ತು ಜಪಾನ್‌ಗಳಂತೆ ತನ್ನ ಸಂಪೂರ್ಣ ಹತೋಟಿಯಲ್ಲಿದ್ದ ರಾಷ್ಟ್ರಗಳು ವಿನಾ ಬೇರೆ ಯಾವ ರಾಷ್ಟ್ರವೇ ಆಗಲಿ ಅಂಥ ಅಸ್ತ್ರಗಳನ್ನು ಆತ್ಮರಕ್ಷಣೆಗಾಗಿ ಇಟ್ಟು ಕೊಳ್ಳುವುದನ್ನು ಸಹ ಅದು ವಿರೋಧಿಸುತ್ತಿತ್ತು. ಅಲೆಂಡೆ ನಂತರದ ಚಿಲಿ ದೇಶದಂತೆ ಮಾನವ ಹಕ್ಕುಗಳನ್ನು ಉಲ್ಲಂಘಿಸಿದ ಸರ್ಕಾರಗಳಿಗೆ ಅಮೆರಿಕ ತನ್ನ ಅನುಕೂಲಕ್ಕಾಗಿ ಸಹಾಯ ಮಾಡುತ್ತಿತ್ತು. ಸೇಡಿಗಾಗಿ ಮಾನವನ ಮೂಲಭೂತ ಹಕ್ಕುಗಳನ್ನು ಉಲ್ಲಂಘಿಸಿದ ದೇಶಗಳ (ಉದಾಹರಣೆಗೆ ಜನಾಂಗ ದ್ವೇಷದ ದಿನಗಳ ದಕ್ಷಿಣ ಆಫ್ರಿಕಾ) ವಿರುದ್ಧ ಯಾವ ಕ್ರಮವನ್ನೂ ತೆಗೆದುಕೊಳ್ಳಲಿಲ್ಲ.

**೨. ಸುಳ್ಳುಗಳು**

ಸರಿಯಾಗಿ ೫೦೦ ವರ್ಷಗಳ ಹಿಂದೆ ಅಮೆರಿಕವು ಇರಾಕ್ ವಿರುದ್ಧ ಒಂದು ವಿಧ್ವಂಸಕ ಯುದ್ಧ ಮಾಡಿತು. ಇರಾಕ್‌ನಲ್ಲಿ ಸಾಮೂಹಿಕ ವಿನಾಶ ಕಾರೀ ಅಸ್ತ್ರಗಳನ್ನು ಹೇರಳವಾಗಿ ಶೇಖರಿಸಲಾಗಿದೆ ಎಂದೂ, ಇರಾಕ್ ದೇಶವು ಭಯೋತ್ಪಾದಕರಿಗೆ ಆಶ್ರಯ ನೀಡಿದೆ ಎಂದೂ ಹೇಳಿಕೊಂಡು, ಆ ವಿಷಯಗಳು ಸುಳ್ಳು ಎಂದು ತನಗೆ ತಿಳಿದಿದ್ದರೂ ಸಹ, ಆ ನೆಪ ಒಡ್ಡಿ ಅಮೆರಿಕ ಇರಾಕ್‌ನೊಡನೆ ಯುದ್ಧ ಮಾಡಿತು. ಅದರಿಂದಾಗಿ ಸಹಸ್ರಾರು ಜನ ಅಮಾಯಕ ಸ್ತ್ರೀ ಪುರುಷರೂ ಮಕ್ಕಳೂ ಮೃತರಾದರಲ್ಲದೆ, ಅನೇಕ ಮಂದಿ ಜೀವಮಾನ ಪರ್ಯಂತ ಅಂಗವಿಕಲರಾದರು. ಪತ್ರಿಕೆಗಳನ್ನೂ ಇತರ ಮಾಧ್ಯಮಗಳನ್ನೂ ತಮ್ಮ ಹಿಡಿತದಲ್ಲಿಟ್ಟುಕೊಂಡು ಸುಳ್ಳು ಮತ್ತು ತಪ್ಪು ಮಾಹಿತಿಗಳನ್ನು ಪ್ರಪಂಚದಾದ್ಯಂತ ಪ್ರಚಾರ ಮಾಡುವುದರಲ್ಲಿ ಅಮೆರಿಕನ್ನರು ಪ್ರಸಿದ್ಧರು ಎಂದು ಆ ವೇಳೆಗಾಗಲೇ ಹೆಸರು ಪಡೆದಿದ್ದರು.

**೩. ಅಮೆರಿಕ ಹಾಗೂ ಪ್ರಪಂಚದ ಇತರ ವಿಧೇಯ ಸರ್ಕಾರಗಳು, ಬಹುರಾಷ್ಟ್ರೀಯ ಕಂಪೆನಿಗಳು ಮತ್ತು ಅಧಿಕಾರವರ್ಗ, ಇವುಗಳ ನಡುವೆ ಬೆಳೆದ ಒಳನಂಟು**

ಭೂಗ್ರಹದ ಮಾನವ ಇತಿಹಾಸದಲ್ಲಿ ಅಮೆರಿಕವು ಅತಿ ದೊಡ್ಡ ಲಂಚ ನೀಡುವ ದೇಶವಾಯಿತು. ಅದು ಪ್ರಪಂಚದಾದ್ಯಂತ ಎಲ್ಲ ಸರ್ಕಾರಗಳನ್ನೂ ಅಧಿಕಾರ ವರ್ಗದವರನ್ನೂ ನೀತಿಭ್ರಷ್ಟರನ್ನಾಗಿ ಮಾಡಿ ಸಾಮಾನ್ಯ ಜನರಿಗೆ

ಅಪಾರ ಹಾನಿಯುಂಟುಮಾಡಿತು. ೧೯೮೪ರಲ್ಲಿ ಸಂಭವಿಸಿದ ಕುಪ್ರಸಿದ್ಧ ಭೂಪಾಲ್ ಅನಿಲ ದುರಂತಕ್ಕೆ ಕಾರಣವಾದ ಯೂನಿಯನ್ ಕಾರ್ಬೈಡ್‌ನಂಥ ನೀತಿಭ್ರಷ್ಟ ಬಹುರಾಷ್ಟ್ರೀಯ ಕಂಪೆನಿಗಳಿಗೂ, ಭಾರತದ ಪರಿಸ್ಥಿತಿಗಳಿಗೆ ಹೊಂದಾಣಿಕೆಯಾಗದ ಕಳಪೆ ಬೀಜಗಳನ್ನು ಮಾರುವ ಮೂಲಕ ಆ ದೇಶದಲ್ಲಿ ಬೀಜ ಉತ್ಪಾದನೆಯನ್ನು ಹತೋಟಿಯಲ್ಲಿಟ್ಟುಕೊಳ್ಳಲು ಪ್ರಯತ್ನಿಸಿದ ಮಾನ್‌ಸಾಂಟೊ ಕಂಪೆನಿಗೂ ಉತ್ತೇಜನ ನೀಡಿತು.

ತಮ್ಮ ದೇಶದಲ್ಲಿ ಅಥವಾ ಅಭಿವೃದ್ಧಿ ಪಡೆದ ಮಿತ್ರರಾಷ್ಟ್ರಗಳಲ್ಲಿ ನಿಷೇಧಿಸಲಾದ ಹಾನಿಕರ ಪದಾರ್ಥಗಳಿಗೆ ಅಥವಾ ಆ ಮುಂದುವರಿದ ರಾಷ್ಟ್ರಗಳಲ್ಲಿ ಉತ್ಪಾದಿಸುತ್ತಿದ್ದ ಹೊಸ ಉತ್ತಮ ಪದಾರ್ಥಗಳಿಗಿಂತ ಕೀಳಾದ ಪದಾರ್ಥಗಳಿಗೆ ಮಾರುಕಟ್ಟೆ ದೊರಕಿಸಿಕೊಳ್ಳಲು ಅಮೆರಿಕವು ಅಂತರರಾಷ್ಟ್ರೀಯ ಸಂಸ್ಥೆಗಳನ್ನು ಹಿಡಿತದಲ್ಲಿಟ್ಟುಕೊಂಡು ಬಹುರಾಷ್ಟ್ರೀಯ ಕಂಪೆನಿಗಳಿಗೆ ಸಹಾಯ ಮಾಡಿತು. ಅಷ್ಟೇ ಅಲ್ಲ, ಅಭಿವೃದ್ಧಿಶೀಲ ದೇಶಗಳಲ್ಲಿ ಅಧಿಕಾರಿಗಳಿಗೆ ಲಂಚ ಕೊಟ್ಟು, ಅಲ್ಲಿಯವರು ಅಂಥ ಹೊಸ ಉತ್ತಮ ಪದಾರ್ಥಗಳನ್ನು ತಯಾರಿಸದಂತೆ ನೋಡಿಕೊಂಡಿತು. ಉದಾಹರಣೆಗೆ, ೨೦ನೆಯ ಶತಮಾನದ ಅಂತ್ಯದಲ್ಲಿ ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ಬಳಸುತ್ತಿದ್ದ ಕ್ಷೇಮಕರವಾದ ಮತ್ತು ಹೆಚ್ಚು ಪರಿಣಾಮಕಾರಿಯಾದ ಪೋಲಿಯೋ ಚುಚ್ಚುಮದ್ದಿಗೆ ಬದಲಾಗಿ, ಅಮೆರಿಕದಲ್ಲಿ ಮತ್ತು ಮಿತ್ರರಾಷ್ಟ್ರಗಳಲ್ಲಿ ಮಾರಾಟವಾಗದಿದ್ದ ಬಾಯಿ ಮೂಲಕ ಸೇವಿಸುವ ಲಸಿಕೆಯನ್ನು ಅಭಿವೃದ್ಧಿಶೀಲ ದೇಶಗಳಲ್ಲಿ ಮಾರಾಟ ಮಾಡಿದುದು.

**೪. ಶೋಷಣೆ**

ವಿಶ್ವದಲ್ಲಿ ತನಗೆ ಮಣಿಯುವ ಸರ್ಕಾರಗಳಿಗೂ ಅಧಿಕಾರ ವರ್ಗಕ್ಕೂ ಒಂದಲ್ಲ ಒಂದು ರೀತಿಯಲ್ಲಿ ಲಂಚ ಕೊಟ್ಟು ಅಮೆರಿಕವು ಗ್ಯಾಟ್, ಟ್ರಿಪ್ಸ್ ಮತ್ತು ಯುಪೋವ್‌ಗಳಂಥ ಅಂತರರಾಷ್ಟ್ರೀಯ ಒಪ್ಪಂದಗಳಿಗೆ ಸಹಿ ಹಾಕುವಂತೆ ಅವುಗಳನ್ನು ಒತ್ತಾಯ ಮಾಡಿತು. ಆ ಒಪ್ಪಂದಗಳೆಲ್ಲವೂ ಬಹುಮಟ್ಟಿಗೆ ತಮ್ಮ ಮತ್ತು ಆ ಕಾಲದ ಅಭಿವೃದ್ಧಿ ಹೊಂದಿದ ದೇಶಗಳ ಪರವಾಗಿಯೇ ಇರುತ್ತಿತ್ತು. ಅಭಿವೃದ್ಧಿಶೀಲ ದೇಶಗಳಿಗೆ ಅಷ್ಟೇ ವಿರುದ್ಧವಾಗಿರುತ್ತಿತ್ತು. ಅಭಿವೃದ್ಧಿಶೀಲ ದೇಶಗಳ ಶೋಷಣೆ ನಡೆಯುವುದಕ್ಕೆ ಆಸ್ಪದ ಮಾಡಿಕೊಡುವುದು ಮತ್ತು ಅಂತ್ಯದಲ್ಲಿ ಆ ದೇಶದ ಜನರ ಮೇಲೂ ತೈಲ, ಖನಿಜಗಳು, ಸಸ್ಯಸಂಪತ್ತು ಮುಂತಾದ ಆಕರ್ಷಕವಾದ ಮತ್ತು ಅಪಾರವಾದ ಸಂಪನ್ಮೂಲಗಳ ಮೇಲೂ ಹತೋಟಿಯನ್ನಿಟ್ಟುಕೊಳ್ಳುವುದೇ ಅದರ ಉದ್ದೇಶವಾಗಿತ್ತು.

**೫. ಆಕ್ರಮಣಶೀಲ ವರ್ತನೆ ಮತ್ತು ಸಂವೇದನಾರಾಹಿತ್ಯ**

೧೯೪೫ರಿಂದ ೨೦೦೩ರ ಮಧ್ಯೆ ಅಮೆರಿಕವು ಚೈನಾ, ಕೊರಿಯಾ, ಗ್ವಾಟೆಮಾಲಾ, ಇಂಡೊನೇಷಿಯ, ಕ್ಯೂಬಾ, ಕಾಂಗೊ, ಪೆರು, ಲಾವೋಸ್, ವಿಯೆಟ್ನಾಂ, ಕಾಂಬೋಡಿಯ, ಗ್ರೆನೇಡ, ಲೆಬನಾನ್. ಲಿಬಿಯ, ಎಲ್ ಸಾಲ್ವಡಾರ್, ನಿಕರಾಗುವ, ಇರಾನ್, ಪನಾಮ, ಇರಾಕ್, ಕುವೈತ್, ಸೊಮಾಲಿಯ, ಬಾಸ್ನಿಯ, ಸೂಡಾನ್, ಅಫ್ಘಾನಿಸ್ತಾನ್, ಮತ್ತು ಯುಗೋಸ್ಲಾವಿಯಗಳ ಮೇಲೆ ಬಾಂಬ್ ದಾಳಿ ಮಾಡಿತು. ಕಾಣುವಂಥ ಯಾವ ಕಾರಣವೂ ಇಲ್ಲದೆ ೨೦೦೩ರಲ್ಲಿ ಅಮೆರಿಕವು ಇರಾಕ್ ಮೇಲೆ ಆಕ್ರಮಣ ಮಾಡಿದ್ದಲ್ಲದೆ, ಅನೇಕ ಸಹಸ್ರಮಾನಗಳ ಹಿಂದಿನ ಹಸ್ತಪ್ರತಿಗಳು ಮತ್ತು ಕಲಾಕೃತಿಗಳನ್ನೊಳಗೊಂಡ ಮಾನವ ಕುಲದ ಅತ್ಯಂತ ಅಮೂಲ್ಯವಾದ ಸ್ಮಾರಕಗಳನ್ನೂ ನಾಶ ಮಾಡಿತು. ಅವರ ಆ ಕೃತ್ಯವು, ಎರಡು ಸಹಸ್ರಮಾನಗಳ ಹಿಂದೆ ಅಲೆಕ್ಸಾಂಡ್ರಿಯಾದ ಗ್ರಂಥಾಲಯಕ್ಕೆ ರೋಮನರು ಬೆಂಕಿ ಇಟ್ಟದುದು ಕುಬ್ಜವಾಗಿ ಕಾಣುವಂತೆ ಮಾಡಿತು.

**೬. ಕೊಲೆಗಳು**

ತಮಗೆ ಅನಾನುಕೂಲವಾಗಿದ್ದ ಪ್ರಪಂಚದ ನೇತಾರರನ್ನು ಕೊಲೆ ಮಾಡುವುದು ಅಮೆರಿಕದ ಘೋಷಿತ ನೀತಿಯಾಗಿತ್ತು. ಆ ನೀತಿಗೆ ಆಹುತಿಯಾದ ಒಂದು ಸುಪರಿಚಿತ ನಿದರ್ಶನವೆಂದರೆ, ಚಿಲಿ ಎಂಬ ಒಂದು ಚಿಕ್ಕ ದೇಶದ ನೇತಾರ ಅಲೆಂಡೆ.

**೭. ಗೂಢರೀತಿಯಲ್ಲಿ ವ್ಯವಸಾಯವನ್ನು ಹತೋಟಿಯಲ್ಲಿಟ್ಟುಕೊಳ್ಳುವುದು**

ನೈಜೀರಿಯ ಮತ್ತು ಭಾರತದಂಥ ಅಧಿಕ ಜನಸಂಖ್ಯೆಯ ಅಭಿವೃದ್ಧಿಶೀಲ ದೇಶಗಳ ಜನರಿಗೆ (ಸುಮಾರು ೭೦%) ವ್ಯವಸಾಯವೇ ಜೀವನಾಧಾರ ಎಂಬುದನ್ನು ಅಮೆರಿಕವು ಕಂಡುಕೊಂಡಿತು. ಆದುದರಿಂದ ಆ ದೇಶಗಳನ್ನು ತಮ್ಮ ಹತೋಟಿಯಲ್ಲಿಟ್ಟುಕೊಳ್ಳಲು ಅದು ಮಾಡಬೇಕಾದುದೇನಿದ್ದರೂ ಅವರ ವ್ಯವಸಾಯವನ್ನು ಹತೋಟಿಯಲ್ಲಿಟ್ಟುಕೊಳ್ಳುವುದು, ಅಷ್ಟೆ; ಅಂದರೆ, ಬಿತ್ತನೆಯ ಬೀಜಗಳನ್ನೂ ವ್ಯವಸಾಯ ಸಂಬಂಧೀ ರಾಸಾಯನಿಕಗಳನ್ನೂ ಉತ್ಪತ್ತಿ ಮಾಡುವುದನ್ನು ಹಿಡಿತದಲ್ಲಿಟ್ಟುಕೊಳ್ಳುವುದು. ಹೀಗೆ ಮಾಡಲು ಅಮೆರಿಕವು ಸಾಧ್ಯವಾದ ಎಲ್ಲ ಮಾರ್ಗಗಳನ್ನೂ (ಕಾನೂನುಬಾಹಿರ, ನೀತಿಬಾಹಿರ ಮಾರ್ಗಗಳನ್ನೂ) ಅನುಸರಿಸಿತು. ದೊಡ್ಡ ದೊಡ್ಡ ಜಾಹಿರಾತುಗಳಿಂದ ಆ ದೇಶದ ಕಂಪನಿಗಳು ೧೯೮೦ರಲ್ಲಿ ಅತ್ಯಂತ ಕಳಪೆಯಾದ ಮತ್ತು ಪರಿಣಾಮಕಾರಿಯಲ್ಲದ ರಾಸಾಯನಿಕಗಳನ್ನು ಭಾರತಕ್ಕೆ ಮಾರಲು ಪ್ರಯತ್ನಿಸಿತು. ಆ ಕಂಪನಿಗಳ ಅಪೇಕ್ಷೆಯಂತೆ ಅದನ್ನು ಉಪಯೋಗಿಸಿದ್ದಿದ್ದರೆ, ಆ ದೇಶಗಳ ವ್ಯವಸಾಯೋತ್ಪನ್ನಗಳ ಇಳುವರಿ ತೀರ ಇಳಿಮುಖವಾಗಿ ಹೋಗಿ, ಆಹಾರ ಪದಾರ್ಥಗಳಿಗಾಗಿ ಅಮೆರಿಕವನ್ನೇ ಅವಲಂಬಿಸಬೇಕಾಗುತ್ತಿತ್ತು.

**೮. ಅಂತರರಾಷ್ಟ್ರೀಯ ಕಾನೂನು ಮತ್ತು ಮಾನವ ಹಕ್ಕುಗಳ ಉಲ್ಲಂಘನೆ**

೨೦ನೆಯ ಶತಮಾನದ ಉತ್ತರಾರ್ಧದಲ್ಲಿ ಅಮೆರಿಕವು ಗ್ವಾಂಟನಾಮೊ ಕೊಲ್ಲಿಯ ತನ್ನ ಸೆರೆಮನೆಯ ಶಿಬಿರದಲ್ಲಿ ಖೈದಿಗಳಿಗೆ ಸಂಬಂಧಿಸಿದ ಅಂತರರಾಷ್ಟ್ರೀಯ ಒಪ್ಪಂದದ ಕಟ್ಟಳೆಗಳಲ್ಲಿ ಕಡೆಯಪಕ್ಷ ೧೫ನ್ನಾದರೂ ಉಲ್ಲಂಘಿಸಿದೆ.

೨೧ನೆಯ ಶತಮಾನದ ಪ್ರಾರಂಭದಲ್ಲಿ ಸಹ ಅದು ತಾನೇ ಸೃಷ್ಟಿಸಿದ್ದ ವಿಶ್ವ ವ್ಯಾಪಾರ ಸಂಸ್ಥೆಯ ನಿಯಮಗಳಿಗೆ ವಿರುದ್ಧವಾಗಿ ತಮ್ಮ ರೈತರಿಗೆ ಅಪಾರ ಧನ ಸಹಾಯ ನೀಡುತ್ತಲೇ ಇತ್ತು. ೨೦೦೩ರಲ್ಲಿ ಅದು ಕಾನೂನುಬಾಹಿರವಾಗಿ, ಅಂತರರಾಷ್ಟ್ರೀಯ ರೂಢಿಗೆ ವಿರುದ್ಧವಾಗಿ, ಇರಾಕ್ ಮೇಲೆ ಯುದ್ಧ ಮಾಡಿತು.

**೯. ಭಯೋತ್ಪಾದಕರು, ಗೆರಿಲ್ಲಾ ಯುದ್ಧತಂತ್ರ, ಮೂಲಭೂತವಾದಿಗಳು ಮತ್ತು ನಿರಂಕುಶಾಧಿಕಾರಿಗಳ ಸೃಷ್ಟಿ**

೨೦ನೆಯ ಶತಮಾನದ ಉತ್ತರಾರ್ಧದಲ್ಲಿ ಭೂಮಿಯ ಮೇಲೆ ಭಯೋತ್ಪಾದಕರು, ಗೆರಿಲ್ಲಾ ಯುದ್ಧ, ಮೂಲಭೂತವಾದಿಗಳು ಮತ್ತು ನಿರಂಕುಶಾಧಿಕಾರಿಗಳ ಉದ್ಭವ ಕಂಡುಬಂದಿತು. ಇವೆಲ್ಲಕ್ಕೂ ಅಮೆರಿಕವೇ ಕಾರಣ. ಅಮೆರಿಕವು ಇಂಗ್ಲೆಂಡ್ ಎಂಬ ಇನ್ನೊಂದು ದೇಶದೊಡನೆ ಸೇರಿಕೊಂಡು ಪ್ಯಾಲೆಸ್ಟೈನ್ ಎಂಬಲ್ಲಿ, ಸಹಸ್ರಾರು ವರ್ಷಗಳಿಂದ ನೆಲೆಸಿದ್ದ ಅಲ್ಲಿಯ ಸಾವಿರಾರು ನಿವಾಸಿಗಳನ್ನೆಲ್ಲಾ ಹೊರದೂಡಿ, ಇಸ್ರೇಲ್ ಎಂಬ ದೇಶವನ್ನು ಸ್ಥಾಪಿಸಿತು. ಅವರ ಅಮಾನುಷ, ಅನೈತಿಕ ಮತ್ತು ಕಾನೂನುಬಾಹಿರ ಕೃತ್ಯಗಳನ್ನು ಎದುರಿಸಲು ಪ್ಯಾಲೆಸ್ಟೈನ್‌ನವರಿಗೆ ಬೇರೆ ದಾರಿಯೇ ಇಲ್ಲದಿದ್ದುದರಿಂದ ಭಯೋತ್ಪಾದನೆ ಹುಟ್ಟಿಕೊಂಡಿತು. ಅನಂತರ ಅಮೆರಿಕವು ವಿಯೆಟ್ನಾಂ ಮೇಲೆ ದಾಳಿ ಮಾಡಿ ತೀವ್ರವಾದ ಸೋಲನ್ನು ಅನುಭವಿಸಿತು. ಆದರೆ ಅದೇನಿದ್ದರೂ ಗೆರಿಲ್ಲಾ ಎಂಬ ನೂತನ ಯುದ್ಧ ತಂತ್ರವನ್ನು ವಿಯತ್ನಾಮೀಯರು ಕಂಡುಹಿಡಿದು ಬಳಸಿದ ಮೇಲೆ. ಆಫ್ಘಾನಿಸ್ತಾನದ (ಸೌದಿ ಅರೇಬಿಯಾ ಮೂಲದ) ಒಸಾಮ-ಬಿನ್-ಲ್ಯಾಡೆನ್, ಇರಾನಿನ ಅಯಾತುಲ್ಲಾ ಖೊಮೇನಿ ಮತ್ತು ಇರಾಕಿನ ಸದ್ದಾಂ ಹುಸೇನರಂಥ ಭಯೋತ್ಪಾದಕರನ್ನು ಮತ್ತು ನಿರಂಕುಶವಾದಿಗಳನ್ನು ಅಮೆರಿಕವು ಸೃಷ್ಟಿ ಮಾಡಿತು. ತನಗೆ ಅನುಕೂಲವಾಗಿದ್ದಾಗ ಅಧಿಕಾರ ಸ್ಥಾನದಲ್ಲಿ ಕೂಡಿಸಿದ ಅವರ ಮೇಲೆಯೇ ಅನಂತರದ ವರ್ಷಗಳಲ್ಲಿ ತಾನು ಯುದ್ಧ ಮಾಡಿದುದು ವಿನೋದಕರ.

**೧೦. ಬಲಿಪಶುಗಳನ್ನಾಗಿ ಮಾಡುವುದು ಮತ್ತು ಭಿನ್ನಾಭಿಪ್ರಾಯಗಳ ಬಗೆಗೆ ಅಸಹನೆ**

೧೯೫೦ರ ದಶಕದ ಪ್ರಾರಂಭದ ವರ್ಷಗಳ ವಿಶೇಷ ಎಂದರೆ, ಅಮೆರಿಕದಲ್ಲಿ ಮೆಕಾರ್ಥಿಸಮ್ ಎಂಬ ಸಿದ್ಧಾಂತ ಹುಟ್ಟಿಕೊಂಡದ್ದು. ಯಾವುದೇ ಕಮ್ಯುನಿಸ್ಟ್ ಸಂಸ್ಥೆ ಅಥವಾ ಧೋರಣೆಯ ವಿಷಯದಲ್ಲಿ ಯಾವುದೇ ಬಗೆಯ ಸಂಬಂಧ ಅಥವಾ ಸಹಾನುಭೂತಿ ಇರುವ ವ್ಯಕ್ತಿಯೊಡನೆ ಯಾವುದೇ ಬಗೆಯ ಸಂಪರ್ಕ ಅಥವಾ ಸಂಬಂಧ ಇದೆ ಎಂಬ ಸಂಶಯಕ್ಕೆ ಒಳಗಾದವರನ್ನು ವಾಸ್ತವಿಕವಾಗಿ ಅಥವಾ ಕಾನೂನಿನ ದೃಷ್ಟಿಯಿಂದ ನಾಶಮಾಡಿಬಿಡುವುದು ಮೆಕಾರ್ಥಿಸಮ್‌ನ ಸಂಕಲ್ಪವಾಗಿತ್ತು.

೨೦೦೩ರಲ್ಲಿ ಅಮೆರಿಕವು ಇರಾಕನ್ನು ಆಕ್ರಮಣ ಮಾಡಿದಾಗ ಅಭಿವೃದ್ಧಿ ಹೊಂದಿದ ದೇಶಗಳವರೂ ಸೇರಿದಂತೆ ವಿಶ್ವದ ೯೦%ರಷ್ಟು ಜನರಿಗೆ ಭ್ರಮನಿರಸನವಾಯಿತು. ರಾಜಕೀಯ, ಸಾಮಾಜಿಕ, ಭಾಷೀಯ ಅಥವಾ ಆರ್ಥಿಕ ಎಲ್ಲಾ ಪರಿಗಣನೆಗಳನ್ನೂ ಬದಿಗಿಟ್ಟು, ಇರಾಕ್‌ನ ಮೇಲಿನ ಯುದ್ಧವನ್ನು ವಿರೋಧಿಸಲು ಎಲ್ಲರೂ ಒಟ್ಟುಗೂಡಿದರು. ಇದಕ್ಕೆ ಪ್ರತೀಕಾರವಾಗಿ ಅಮೆರಿಕವು ಭೂಗ್ರಹದ ಜನರೊಡನೆ ಯುದ್ಧ ಪ್ರಾರಂಭಿಸಿದುದು ಆಗಲೇ. ಅದರ ಪರಿಣಾಮವಾಗಿ, ಸಂಸ್ಕೃತಿಯಾದ ಮೇಲೆ ಸಂಸ್ಕೃತಿ, ನಾಗರಿಕತೆಯಾದ ಮೇಲೆ ನಾಗರಿಕತೆ, ಜನಾಂಗವಾದ ಮೇಲೆ ಜನಾಂಗ, ದೇಶವಾದ ಮೇಲೆ ದೇಶ ಎಲ್ಲವೂ ನಾಶವಾದುವು. ಈ ಪ್ರಕ್ರಿಯೆಯಲ್ಲಿ ನಿಸರ್ಗ ನಿಯಮದ ಪ್ರಕಾರ, ಸಹಜವಾಗಿಯೇ, ಆಕ್ರಮಣಕಾರರೂ ಸಹ ಅಂಗಚ್ಛೇದಗೊಂಡು, ವಿರೂಪಗೊಂಡು ನಾಶವಾದರು. ಕಡೆಯಲ್ಲಿ ಅಲ್ಲಿಯ ಜನರೇ ದಂಗೆ ಎದ್ದು ಅಮೆರಿಕವೂ ಇಲ್ಲವಾಯಿತು.

ನಮ್ಮ ಅದೃಷ್ಟಕ್ಕೆ ಆಗ ಭೂಗ್ರಹದ ಮೇಲಿದ್ದ ಮಾನವರಲ್ಲಿ, ಈ ಘಟನೆಯ ಮುನ್ಸೂಚನೆಯನ್ನು ಅರಿತಿದ್ದ ಕೆಲವು ವಿವೇಕಿಗಳು ಧೈರ್ಯಮಾಡಿ ಆ ಗ್ರಹವನ್ನು ಬಿಟ್ಟು ಇಲ್ಲಿಗೆ ವಲಸೆ ಬರುವ ಯೋಚನೆ ಮಾಡಿದರು. ಮಾನವ ನಾಗರಿಕತೆಯನ್ನು ರಕ್ಷಿಸಿದ ಅವರ ಆ ಕಾರ್ಯಾಚರಣೆ ವಿಶ್ವದ ಇತಿಹಾಸದಲ್ಲೇ ಅತ್ಯಂತ ಸಾಹಸಮಯವಾದುದು ಮತ್ತು ಫಲಕಾರಿಯಾದುದು ಎನ್ನಿಸಿಕೊಂಡಿದೆ.

('ದಿ ಹಿಂದು' ಪತ್ರಿಕೆಯಲ್ಲಿ ಈ ಲೇಖನ ಇಂಗ್ಲಿಷ್‌ನಲ್ಲಿ ಪ್ರಕಟವಾಗಿತ್ತು.)

ಅನುವಾದ : ಜೀವೂಬಾಯಿ ಲಕ್ಷ್ಮಣರಾವ್
ಮೈತ್ರಿ, ೧೨ನೇ ಮುಖ್ಯರಸ್ತೆ, ಸರಸ್ವತಿಪುರಂ, ಮೈಸೂರು-೫೭೦ ೦೦೯



# ರಾಜ್ಯದ ಸಣ್ಣ ಕೈಗಾರಿಕೆಗಳ ದುಸ್ಥಿತಿ ಮತ್ತು ಸರ್ಕಾರದ ನಾಮಕಾವಾಸ್ತೆ ದುರಸ್ತಿ ಕಾರ್ಯ

ಸಣ್ಣ ಕೈಗಾರಿಕೆಗಳು ತಮ್ಮಲ್ಲಿ ಉತ್ಪಾದಿಸುವ ವಸ್ತುಗಳಿಗೆ ಸರಿಯಾದ ಬೆಲೆ ಸಿಗದಿರುವುದರಿಂದ ತಮ್ಮ ಕಾರ್ಮಿಕರಿಗೆ ಸರಿಯಾದ ವೇತನ ನೀಡುತ್ತಿಲ್ಲ. ರಾಜ್ಯದ ಯಾವುದೇ ಕೈಗಾರಿಕಾ ನೆಲೆಗಳಿಗೆ ಭೇಟಿಯಿತ್ತರೆ ನಮಗೆ ಕಾಣುವುದು ಅಸ್ಥಿಪಂಜರಗಳಿಗೆ ಚರ್ಮವನ್ನೊದಿಸಿಕೊಂಡು ಜೀವ ಮಾತ್ರವಿರುವ ಕಾರ್ಮಿಕರು. ಈ ಸ್ಥಿತಿಯಲ್ಲಿರುವಾಗ ನಾವು ಹೇಗೆ ಕೈಗಾರಿಕೀಕರಣವನ್ನು ರಾಜ್ಯದಲ್ಲಿ ಮುನ್ನಡೆಸಬಹುದು ?

ಜಯ

**ಕ**ರ್ನಾಟಕ ರಾಜ್ಯದಲ್ಲಿ ಸುಮಾರು ೩೫ ವರ್ಷಗಳಿಂದೀಚೆಗೆ ಕಡಿಮೆಯೆಂದರೂ ೨,೯೫,೦೦೦ ಸಣ್ಣ ಕೈಗಾರಿಕಾ ಘಟಕಗಳು ನೋಂದಾವಣೆಯಾಗಿದ್ದು, ೬,೦೦೦ ಕೋಟಿ ರೂ.ಗಳಿಗಿಂತಲೂ ಹೆಚ್ಚು ಬಂಡವಾಳವನ್ನು ತೊಡಗಿಸಿದ್ದು, ೧೭,೦೦,೦೦೦ಕ್ಕೂ ಹೆಚ್ಚು ಮಂದಿಗೆ ಉದ್ಯೋಗಾವಕಾಶಗಳನ್ನೊದಗಿಸಿವೆ. ರಾಜ್ಯದ ಶೇ. ೧೫ರಷ್ಟು ಜನಸಂಖ್ಯೆ ಈ ಸಣ್ಣ ಕೈಗಾರಿಕೆಗಳ ಮೇಲೆ ಅವಲಂಬಿತರಾಗಿದ್ದಾರೆ ಎಂದರೂ ತಪ್ಪಾಗಲಾರದು. ಒಂದು ಕೋಟಿ ರೂ.ಗಳಿಗಿಂತಲೂ ಕಡಿಮೆ ಬಂಡವಾಳ ಹೂಡಿರುವ ಘಟಕಗಳನ್ನು ಸಣ್ಣ ಕೈಗಾರಿಕೆಗಳೆಂದು ವಿಂಗಡಿಸಿದ್ದು, ಈ ಸಣ್ಣ ಕೈಗಾರಿಕಾ ಘಟಕಗಳನ್ನು ಭಾರೀ ಮತ್ತು ಮಧ್ಯಮ ಕೈಗಾರಿಕೆಗಳೊಡನೆ ಹೋಲಿಸಿದರೆ, ಈ ಕೊನೆಯ ಕೈಗಾರಿಕೆಗಳು ರಾಜ್ಯದಲ್ಲಿ ಸುಮಾರು ೧೯,೦೦೦ ಕೋಟಿ ರೂ.ಗಳಷ್ಟು ಬಂಡವಾಳ ಹೂಡಿದ್ದು, ತನ್ನೆಲ್ಲಾ ೧,೦೦೦ ಕೈಗಾರಿಕೆಗಳಿಂದ ಕೇವಲ ೪,೫೦,೦೦೦ ಜನರಿಗೆ ಉದ್ಯೋಗ ಒದಗಿಸಿರುತ್ತವೆ.

**ಸಣ್ಣ ಕೈಗಾರಿಕೆಗಳ ಅಧೋಗತಿಗೆ ಕಾರಣಗಳು**

**ಅ) ಮೂಲಭೂತ ಸೌಕರ್ಯಗಳ ಕೊರತೆ:** ಕೈಗಾರಿಕೀಕರಣ ಯಶಸ್ವಿಯಾಗಬೇಕಾದರೆ ಸಣ್ಣ ಕೈಗಾರಿಕಾ ಪ್ರದೇಶಗಳಿಗೆ ಸರಿಯಾದ ಗುಣಮಟ್ಟದ ವಿದ್ಯುತ್ ವ್ಯವಸ್ಥೆಯು ಕಡಿಮೆ ದರದಲ್ಲಿ ಸಿಗುವಂತಿರಬೇಕು. ಕೈಗಾರಿಕಾ ಕ್ಷೇತ್ರಗಳಲ್ಲಿ ರಸ್ತೆ ವ್ಯವಸ್ಥೆ, ದೂರವಾಣಿ ಸಂಪರ್ಕ, ಸಾರಿಗೆ ವ್ಯವಸ್ಥೆ, ನೀರಿನ ವ್ಯವಸ್ಥೆ ಇತ್ಯಾದಿ... ಸರಿಯಾಗಿರಬೇಕಿದೆ. ಬೆಂಗಳೂರಿನಂತಹ ದೊಡ್ಡ ಪಟ್ಟಣಗಳಲ್ಲಿನ ಕೈಗಾರಿಕಾ ನೆಲೆಗಳಿಗೇ ಇವೆಲ್ಲವುಗಳ ಕೊರತೆಯಿರುವಾಗ ರಾಜ್ಯದ ಬೇರೆ ಸ್ಥಳಗಳ ಪರಿಸ್ಥಿತಿ ಹೇಳುವುದೇ ಬೇಡ.

**ಆ) ತಂತ್ರಜ್ಞಾನದ ಕೊರತೆ ಮತ್ತು ತಾಂತ್ರಿಕೋಪಕರಣಗಳ ಅಳವಡಿಕೆಯಲ್ಲಿನ ಸಮಸ್ಯೆಗಳು :** ಸಣ್ಣ ಕೈಗಾರಿಕೆಗಳು ತಮ್ಮದೇ ಆದ ಸಂಶೋಧನಾ ಮತ್ತು ಅಭಿವೃದ್ಧಿ ಕೇಂದ್ರಗಳನ್ನು ಸ್ಥಾಪಿಸಲು ಹೆಚ್ಚು ಬಂಡವಾಳದ ಅವಶ್ಯಕತೆಯಿಂದಾಗಿ ಸಾಧ್ಯವಿಲ್ಲದಿರುವುದರಿಂದ, ತಂತ್ರಜ್ಞಾನದ ಕೊರತೆ ಎದ್ದುಕಾಣುತ್ತದೆ. ಇನ್ನು ತಾಂತ್ರಿಕೋಪಕರಣಗಳನ್ನು ಅಳವಡಿಸಿಕೊಳ್ಳಲಂತೂ ದುಬಾರಿ ಹಣ ವ್ಯಯಿಸಬೇಕಾಗುತ್ತದೆ. ತಂತ್ರಜ್ಞಾನ ಮತ್ತು ತಾಂತ್ರಿಕೋಪಕರಣಗಳನ್ನು ಕೈಗಾರಿಕಾ ರಾಷ್ಟ್ರಗಳಿಂದ ಆಮದು ಮಾಡಿಕೊಳ್ಳಲು ಇದೇ ಕಾರಣಗಳಿಂದಾಗಿ ಅವುಗಳು ಶಕ್ತವಿರುವುದಿಲ್ಲ.

**ಇ) ಉದಾರೀಕರಣ -ಖಾಸಗೀಕರಣ -ಜಾಗತೀಕರಣ ತ್ರಿವಳಿಗಳ ಹೊಡೆತ :** ಬಂಡವಾಳಶಾಹಿಯ ಈ ತ್ರಿವಳಿ-ಬಿರುಗಾಳಿಗಳಿಂದಾಗಿ ರಾಜ್ಯದ ಮಾರುಕಟ್ಟೆಯಲ್ಲಿ ಯಾವುದೇ ದೇಶದ ಕಂಪನಿಗಳು ಯಾವುದೇ ಸುಂಕಗಳ ಅತಿಯಾದ ನಿರ್ಬಂಧಗಳಿಲ್ಲದೆ ವ್ಯಾಪಾರ ಮಾಡಬಹುದಾಗಿದೆ. ಇದರಿಂದಾಗಿ ಬೃಹತ್ ಕಂಪನಿಗಳು ಅತಿ ಕಡಿಮೆ ಮಾನವ ಸಂಪನ್ಮೂಲಗಳಿಂದ, ಅತ್ಯುತ್ತಮ ವಿಶ್ವ ದರ್ಜೆ ತಂತ್ರಜ್ಞಾನಗಳ ಸಹಾಯದಿಂದ ಉತ್ತಮ ಗುಣಮಟ್ಟದ ವಸ್ತುಗಳನ್ನು ಕಡಿಮೆ ಬೆಲೆಗೆ ಉತ್ಪಾದಿಸಿ ಮಾರುಕಟ್ಟೆಯಲ್ಲಿ ರಾಶಿ ಹಾಕುತ್ತಿವೆ. ಇಂತಹ ಬೃಹತ್ ಕಂಪನಿಗಳೊಂದಿಗೆ ನಮ್ಮ ರಾಜ್ಯದ ಸಣ್ಣ ಕೈಗಾರಿಕೆಗಳು ಸ್ಪರ್ಧಿಸುವುದು ದುಸ್ಸಾಹಸವಾಗಿದೆ. ಉದಾಹರಣೆಗೆ, ಇಲೆಕ್ಟ್ರಾನಿಕ್ಸ್ ಉಪಕರಣಗಳಲ್ಲಿ ಬಳಸುವ ಪ್ರಿಂಟೆಡ್ ಸರ್ಕ್ಯೂಟ್ ಬೋರ್ಡ್ (ಪಿಸಿಬಿ) ಸಣ್ಣ ಉತ್ಪಾದಕಾ ಘಟಕಗಳು ಬಹುರಾಷ್ಟ್ರೀಯ ಕಂಪನಿಯಾದ ಎಟಿ ಮತ್ತು ಎಸ್ ಕಂಪನಿಯೊಂದರೊಡನೆ ಸೆಣಸಲು ಸಾಧ್ಯವಾಗದೆ ಕೊನೆಯ ದಿನಗಳೆಣಿಸಲಾರಂಭಿಸಿವೆ. ಇದೇ ರೀತಿ ರೇಷ್ಮೆ ಮತ್ತು ಸಕ್ಕರೆಯ ಆಮದಿನಿಂದಾಗಿ ನಮ್ಮ ರೈತಾಪಿ ವರ್ಗ ಪೆಟ್ಟು ತಿಂದು ಹೇಗೆ ಭೂಮಿಗೆ ಆತುಕೊಂಡಿದೆ ಎನ್ನುವುದನ್ನು ನಾವೇ ಕಣ್ಣಾರೆ ಕಾಣುತ್ತಿದ್ದೇವೆ. ಇದರಿಂದ ಮಾರುಕಟ್ಟೆಯಲ್ಲಿ ಈ ಘಟಕಗಳ ಉತ್ಪನ್ನಗಳಿಗೆ ಸರಿಯಾದ ಬೆಲೆ ಸಿಗುತ್ತಿಲ್ಲ.

**ಈ) ಅಧಿಕಾರಶಾಹಿ ಮತ್ತು ಸಂಕ್ಲಿಷ್ಟ ಆಡಳಿತ ವರ್ಗ :** ಸಣ್ಣ ಕೈಗಾರಿಕೆಗಳು ನೋಂದಾವಣೆ ಮಾಡಿಸಿಕೊಳ್ಳುವ ಕಾರ್ಯ ದಿಂದ ತಮ್ಮ ಘಟಕವನ್ನು ಕಾರ್ಯಾರಂಭಗೊಳಿಸಿ ಚಾಲನೆಗೊಳಿಸುವ ಹಂತದವರೆಗೂ ಅಧಿಕಾರಶಾಹಿ ಮತ್ತು ಆಡಳಿತ ವರ್ಗಗಳ ನೀತಿ ವಿಧಾನಗಳು ಮತ್ತು ಕಾರ್ಯ ವಿಧಾನಗಳು ಒಂದಲ್ಲ ಒಂದು ರೀತಿಯಲ್ಲಿ ತಡೆಗೋಡೆ ಗಳಾಗಿವೆ. ಭ್ರಷ್ಟಾಚಾರ ಮತ್ತು ಕೆಲಸಗಳ ವಿಳಂಬದಿಂದಾಗಿ ಅಮೂಲ್ಯವಾದ ಹಣ ಮತ್ತು ಸಮಯಗಳ ವ್ಯತ್ಯಯವುಂಟಾಗುತ್ತಿದೆ. ಈ ಘಟಕಗಳು ಒಂದು ಕಡೆ ದೈತ್ಯ ಕಂಪನಿಗಳೊಡನೆ ಮಾರುಕಟ್ಟೆಯಲ್ಲಿ ಸ್ಪರ್ಧಿಸುತ್ತಾ, ಇನ್ನೊಂದೆಡೆ ಈ ವರ್ಗಗಳೊಡನೆ ಕಾರ್ಯ ನಿಭಾಯಿಸಬೇಕಿದೆ.



**ಉ) ಸರ್ಕಾರಿ ಅಧಿಕಾರಿಗಳ ಪರಿವೀಕ್ಷಣೆ ಮತ್ತು ಕಿರುಕುಳ :** ಸಣ್ಣ ಕೈಗಾರಿಕಾ ಘಟಕಗಳು ಮುಖ್ಯವಾಗಿ ಇ.ಎಸ್.ಐ., ಪಿ.ಎಫ್., ಮಾಲಿನ್ಯ ನಿಯಂತ್ರಣ ಮಂಡಳಿ, ಎಲೆಕ್ಟ್ರಿಕಲ್ ಇನ್‌ಸ್ಪೆಕ್ಟರೇಟ್, ಬಾಯ್ಲರ್ ನಿಯಂತ್ರಣಾಧಿಕಾರಿಗಳು ಇನ್ನೂ ಮುಂತಾದ ಸರ್ಕಾರಿ ಅಧಿಕಾರಿಗಳ ಅಧಿಕಾರ ವ್ಯಾಪ್ತಿಯಲ್ಲಿ ಒಳಪಡುತ್ತವೆ. ಈ ಎಲ್ಲಾ ಸರ್ಕಾರಿ ಅಧಿಕಾರಿಗಳು - ಇ.ಎಸ್.ಐ. ಮತ್ತು ಪಿ.ಎಫ್. ಅಧಿಕಾರಿಗಳು ಕಾರ್ಮಿಕರ ಹಿತಾಸಕ್ತಿ ಕಾಯುವ ನೆಪದಲ್ಲಿ, ಮಾಲಿನ್ಯ ನಿಯಂತ್ರಣಾಧಿಕಾರಿಗಳು ಪರಿಸರ ರಕ್ಷಿಸುವ

ನೆಪದಲ್ಲಿ – ಪರಿವೀಕ್ಷಣೆಯ ಹೆಸರಿನಲ್ಲಿ ಈ ಘಟಕಗಳಿಗೆ ಆಗಾಗ ನೀಡುವ ಭೇಟಿಗಳಿಂದ ಕಿರುಕುಳ ಕೊಟ್ಟು 'ಮಾಮೂಲಿ ವಸೂಲಾತಿ' ಮಾಡುತ್ತಾರೆ. ಈ ಅಧಿಕಾರಿಗಳಿಗೆ ಮಾಮೂಲಿ ಸಿಕ್ಕರೆ ಸಾಕು ಪರಿಸರ ಸಂರಕ್ಷಣೆ, ಕಾರ್ಮಿಕರ ಹಿತಾಸಕ್ತಿಗಳು ಎಲ್ಲವೂ ಮರೆತುಹೋಗುತ್ತವೆ.

**ಊ) ಬಂಡವಾಳ ಕೊರತೆ ಮತ್ತು ಬಡ್ಡಿ ದರಗಳು :** ಇತ್ತೀಚಿನ ದಿನಗಳಲ್ಲಿ ಬ್ಯಾಂಕಿನ ಸಾಲದ ಮೇಲೆ ಬಡ್ಡಿ ದರಗಳು ಬಹಳಷ್ಟು ಇಳಿಮುಖವಾಗಿವೆ ಎನ್ನುವಂತೆ ಕಂಡರೂ ನಮ್ಮ ದೇಶದ ಬ್ಯಾಂಕಿನ ಬಡ್ಡಿ ದರಗಳು ಚೀನಾದಂತಹ ರಾಷ್ಟ್ರಗಳ ಬ್ಯಾಂಕಿಗೆ ಹೋಲಿಸಿದರೆ ಏನೇನೂ ಸಾಲದು. ಸಣ್ಣ ಕೈಗಾರಿಕೆಗಳ ನೂತನ ಘಟಕಗಳಿಗೋ ಅಥವಾ ಪುನಶ್ಚೇತನ ಕಾರ್ಯಗಳಿಗೋ ಅಗತ್ಯವಿರುವ ಬಂಡವಾಳವನ್ನು ಬ್ಯಾಂಕುಗಳಿಂದ ಪಡೆಯಲು ಸಾಮಾನ್ಯ ಉದ್ಯೋಗಶೀಲರಿಗೆ ಸಾಧ್ಯವಿಲ್ಲ. ಅದಕ್ಕೆ ಬೇಕಾದ ಮಾನದಂಡಗಳೆಂದರೆ ಸ್ಥಳೀಯ ರಾಜಕಾರಣಿಗಳಿಂದ ಲಾಬಿ ನಡೆಸುವ ಸಾಮರ್ಥ್ಯ, ಬ್ಯಾಂಕಿನ ಅಧಿಕಾರಿಗಳೊಂದಿಗೆ ಕಮಿಷನ್ ವ್ಯವಹಾರ, ಇತ್ಯಾದಿಗಳು. ಇಂತಹ ಕೊಳಕು ವ್ಯವಸ್ಥೆಯಲ್ಲಿ ಉದ್ಯೋಗಶೀಲರಿಗಿರುವ ಗುರಿ, ಸ್ಫೂರ್ತಿ ಮತ್ತು ಆಶಯಗಳೆಲ್ಲವೂ ಮಣ್ಣುಪಾಲಾಗುವುದು ಸಹಜ.




**ಋ) ಭಾರೀ ಮತ್ತು ಮಧ್ಯಮ ವರ್ಗದ ಕೈಗಾರಿಕೆಗಳ ಬಿಗಿ ಹಿಡಿತ :** ಬಹುತೇಕ ಸಣ್ಣ ಕೈಗಾರಿಕೆಗಳು ತಮ್ಮ ಉತ್ಪನ್ನಗಳನ್ನು ಭಾರೀ ಮತ್ತು ಮಧ್ಯಮವರ್ಗದ ಕೈಗಾರಿಕೆಗಳಿಗೆ ಕಚ್ಚಾ ವಸ್ತುಗಳನ್ನಾಗಿ ಮಾರಾಟ ಮಾಡುತ್ತವೆ. ಈ ದೈತ್ಯ ಕೈಗಾರಿಕೆಗಳು ತಾವು ಸಣ್ಣ ಕೈಗಾರಿಕೆಗಳಿಂದ ಪಡೆದ ಕಚ್ಚಾ ವಸ್ತುಗಳಿಗೆ ಸಂಬಂಧಪಟ್ಟ ಬಾಕಿ ಹಣವೇ ಬಹಳಷ್ಟಿದ್ದು ಇದರಿಂದಲೂ ಬಹಳಷ್ಟು ಸಣ್ಣ ಕೈಗಾರಿಕೆಗಳು ಮುಚ್ಚಿಹೋಗಿವೆ.

**ಸರ್ಕಾರದ ನಾಮಕಾವಾಸ್ತೆ ದುರಸ್ತಿ ಕಾರ್ಯ**

ಸಣ್ಣ ಕೈಗಾರಿಕೆಗಳು ನಶಿಸಿಹೋಗುತ್ತಿರುವ ಈ ಸಂದರ್ಭದಲ್ಲಿ ಕಿಂಚಿತ್ತೂ ಗಮನ ಹರಿಸದೆ, ಸರ್ಕಾರವು ನಾಮಕಾವಾಸ್ತೆ ದುರಸ್ತಿ ಕಾರ್ಯವನ್ನು ಕೈಗೆತ್ತಿಕೊಂಡು, ಈ ದುರಸ್ತಿ ಕಾರ್ಯದಲ್ಲಿ ವಿನಿಯೋಗಿಸುವ ಹಣದ ಪಾಲು ತಮ್ಮ ಆಡಳಿತ ವರ್ಗದ ಹಿಂಬಾಲಕರಿಗೆ ಮತ್ತು ಮೇಲ್ವರ್ಗದ ಅಧಿಕಾರಶಾಹಿಗೆ ಸೇರುವಂತೆ ಮಾಡಿದೆ. ಸರ್ಕಾರ ಯೋಜಿಸಿರುವ ಕೆಲವು ಯೋಜನೆಗಳನ್ನು ಗಮನಿಸಿದರೆ ನಿಜವಾಗಿಯೂ ಇದು ಸಣ್ಣ ಕೈಗಾರಿಕಾ ಘಟಕಗಳಿಗೆ ಪ್ರಯೋಜನಕಾರಿಯಾಗಿದೆಯೇ ಎಂಬ ಪ್ರಶ್ನೆ ಉದ್ಭವಿಸುವುದು ಸಹಜ.

**ಅ) ರೋಗಗ್ರಸ್ತ ಸಣ್ಣ ಕೈಗಾರಿಕೆಗಳ ಪುನಶ್ಚೇತನ ಯೋಜನೆ :** ರೋಗಗ್ರಸ್ತ ಸಣ್ಣ ಕೈಗಾರಿಕೆಗಳನ್ನು ಪುನಶ್ಚೇತನಗೊಳಿಸಲು ಒಂದು ಯೋಜನೆಯನ್ನು ರಾಜ್ಯ ಸರ್ಕಾರ ಯೋಜಿಸಿದೆ. ಈ ಯೋಜನೆಯಡಿ ಸರ್ಕಾರ ರೋಗಗ್ರಸ್ತವಾಗಿರುವ ಸಣ್ಣ ಕೈಗಾರಿಕೆಗಳಿಗೆ ಬಡ್ಡಿ ಮುಕ್ತ ಬೀಜ ಧನ ಸಾಲದ ಸಹಾಯವನ್ನು ರೂ. ೨.೫೦ ಲಕ್ಷಗಳವರೆಗೆ ಘಟಕವೊಂದಕ್ಕೆ ನೀಡುತ್ತದೆ. ಇದರ ಜೊತೆಗೆ ಕೆಪಿಟಿಸಿಎಲ್‌ನ ಬಾಕಿ ವಿದ್ಯುತ್ ಹಣವನ್ನು ಕಡಿಮೆ (ಅಂದರೆ ೦.೫% ಒಂದು ತಿಂಗಳಿಗೆ) ಬಡ್ಡಿಯ ಜೊತೆ ಈ ಕೈಗಾರಿಕೆಗಳು ಪಾವತಿಸಬಹುದಾಗಿದೆ. ಈ ಕೈಗಾರಿಕೆಗಳು ವಾಣಿಜ್ಯ ತೆರಿಗೆ ಮತ್ತು ಇತರೆ ಶುಲ್ಕಗಳನ್ನು ನಿಧಾನವಾಗಿ ಬಡ್ಡಿಯಿಲ್ಲದೆ ಪಾವತಿಸಬಹುದಾಗಿದೆ. ಈ ಯೋಜನೆಯಡಿ ಸರ್ಕಾರ ಇದುವರೆಗೆ ಕೇವಲ ೪೦೦ ಸಣ್ಣ ಕೈಗಾರಿಕೆಗಳನ್ನು ಮಾತ್ರ ರೋಗಗ್ರಸ್ತ ಘಟಕಗಳೆಂದು ಗುರುತಿಸಿದೆ. ಆದರೆ ರಾಜ್ಯದಲ್ಲಿರುವ ಒಟ್ಟು ೨,೯೫,೦೦೦ ಸಣ್ಣ ಕೈಗಾರಿಕಾ ಘಟಕಗಳ ಪೈಕಿ, ಕಳೆದ ಹತ್ತು ಜಾಗತೀಕರಣದ ವರ್ಷಗಳಲ್ಲಿ, ಸಣ್ಣ ಕೈಗಾರಿಕಾ ಸಂಘಗಳ ಪ್ರಕಾರ ಶೇ. ೬೦ಕ್ಕೂ ಹೆಚ್ಚು ಮತ್ತು ಸರ್ಕಾರದ ಒಂದು ಕೈಗಾರಿಕಾ ಗಣತಿಯ ಪ್ರಕಾರ ಶೇ. ೫೦ಕ್ಕೂ ಹೆಚ್ಚು ಘಟಕಗಳು ಮುಚ್ಚಿಹೋಗಿವೆ. ಶೇ. ೩೦ಕ್ಕೂ ಹೆಚ್ಚು ಘಟಕಗಳು ರೋಗಗ್ರಸ್ತವಾಗಿರುವ ಸಂದರ್ಭದಲ್ಲಿ ಕೇವಲ ಹೆಸರಿಗಾಗಿ ೪೦೦ ಘಟಕಗಳಿಗೆ ಸಹಾಯ ಹಸ್ತ ನೀಡಿರುವುದು ಸಮಂಜಸವೇ ಎನ್ನುವುದು ಪ್ರಶ್ನೆ.

**ಆ) ವಿಶ್ವ ವ್ಯಾಪಾರ ಸಂಸ್ಥೆಯ ದುಷ್ಪರಿಣಾಮಗಳ ಅಧ್ಯಯನ ಕಾರ್ಯ :** ರಾಜ್ಯದ ಶೇ. ೬೦ ಸಣ್ಣ ಕೈಗಾರಿಕಾ ಘಟಕಗಳು ಕಳೆದ ಹತ್ತು ವರ್ಷಗಳ ಜಾಗತೀಕರಣದ ಫಲವಾಗಿ ನೆಲ ಸೇರಿ ತಳಕಚ್ಚಿಯಾದ ಮೇಲೆ, ಈಗ ಸರ್ಕಾರ ನಿದ್ರೆಯಿಂದೆದ್ದಂತೆ ವಿಶ್ವ ವ್ಯಾಪಾರ ಸಂಸ್ಥೆಯಿಂದ ಸಣ್ಣ ಕೈಗಾರಿಕಾ ಘಟಕಗಳ ಮೇಲಾಗಿರುವ ದುಷ್ಪರಿಣಾಮಗಳನ್ನು ಅಧ್ಯಯನ ನಡೆಸಲು ಆರಂಭಿಸಿದೆ. ವಿಶ್ವ ವ್ಯಾಪಾರ ಸಂಸ್ಥೆಯ ದುಷ್ಪರಿಣಾಮಗಳನ್ನು ಮುಂದಾಲೋಚಿಸಿ ೧೯೯೦ರ ದಶಕದ ಆರಂಭದಿಂದಲೂ ಅದರ ವಿರುದ್ಧ ಸೆಣಸುತ್ತಿರುವ ಕಾರ್ಮಿಕ ಸಂಘಟನೆಗಳು ಮತ್ತು ಎಡಪಂಥೀಯ ಸಂಘಟನೆಗಳ ಬುದ್ಧಿವಾದ ಈ ಬಲಪಂಥೀಯ ಮತ್ತು ಜಾತ್ಯಾತೀತದ ಸೋಗು ಹಾಕಿಕೊಂಡಿರುವ ಸರ್ಕಾರಗಳಿಗೆ ಬೇಕಿರಲಿಲ್ಲ.

**ಇ) ತಾಂತ್ರಿಕ ಉನ್ನತೀಕರಣಕ್ಕೆ ಸಹಾಯ :** ಸಣ್ಣ ಕೈಗಾರಿಕಾ ಘಟಕಗಳು ವಿಶ್ವ ಮಾರುಕಟ್ಟೆಯಲ್ಲಿ ಸ್ಪರ್ಧಿಸಬೇಕಾದರೆ ಅವು ತಾಂತ್ರಿಕವಾಗಿ ಉನ್ನತೀಕರಣಗೊಂಡು ಉತ್ತಮ ಗುಣಮಟ್ಟದ ವಸ್ತುಗಳನ್ನು ತಯಾರಿಸಬೇಕಿದೆ. ಈ ತಾಂತ್ರಿಕ ಉನ್ನತೀಕರಣ ಪರಿಷತ್ತಿನ ಸಹಾಯ ಲಾಬಿ ನಡೆಸುವ ಉದ್ಯೋಗಶೀಲರಿಗೆ ಮಾತ್ರ ಸಿಗುತ್ತಿದ್ದು, ಅರ್ಹರಿಗೆ ತಲುಪುತ್ತಿಲ್ಲ.

**ಸಣ್ಣ ಕೈಗಾರಿಕೆಗಳ ಮಹತ್ವ ಮತ್ತು ಅವುಗಳ ಇಳಿಮುಖದಿಂದಾಗುವ ದುಷ್ಪರಿಣಾಮಗಳು**

**ಸಣ್ಣ ಕೈಗಾರಿಕೆಗಳ ಮಹತ್ವವೇನೆಂದರೆ ಅವುಗಳಲ್ಲಿರುವ ಹೆಚ್ಚು ಕೆಲಸ :** ಬಂಡವಾಳ ರಾಶಿ. ಅಂದರೆ ಕಡಿಮೆ ಬಂಡವಾಳ ಹೂಡುವಿಕೆಯಿಂದ ಹೆಚ್ಚು ಜನರಿಗೆ ಉದ್ಯೋಗಾವಕಾಶ ದೊರೆಯುತ್ತದೆ. ಉದಾಹರಣೆಗೆ, ಒಂದು ಕೋಟಿ ರೂ. ಬಂಡವಾಳ ಹೂಡುವಿಕೆಯಿಂದ ಸಣ್ಣ ಕೈಗಾರಿಕೆಗಳು ಸುಮಾರು ೨೫೦ಕ್ಕೂ ಹೆಚ್ಚು ಜನರಿಗೆ ಉದ್ಯೋಗ ಸೃಷ್ಟಿಸಿದರೆ, ಅದೇ ಭಾರೀ ಮತ್ತು ಮಧ್ಯಮ ಕೈಗಾರಿಕೆಗಳು ಕೇವಲ ೨೦ ಜನರಿಗೆ ಒದಗಿಸುವುದು. ಸಣ್ಣ ಕೈಗಾರಿಕೆಗಳ ಇಳಿಮುಖದಿಂದಾಗಿರುವ ದುಷ್ಪರಿಣಾಮಗಳ ಬಗ್ಗೆ ಗಮನಹರಿಸೋಣ.

**ಅ) ಕಾರ್ಮಿಕರ ಸ್ಥಿತಿಗತಿ :** ಸಣ್ಣ ಕೈಗಾರಿಕೆಗಳು ತಮ್ಮಲ್ಲಿ ಉತ್ಪಾದಿಸುವ ವಸ್ತುಗಳಿಗೆ ಸರಿಯಾದ ಬೆಲೆ ಸಿಗದಿರುವುದರಿಂದ ತಮ್ಮ ಕಾರ್ಮಿಕರಿಗೆ ಸರಿಯಾದ ವೇತನ ನೀಡುತ್ತಿಲ್ಲ. ರಾಜ್ಯದ ಯಾವುದೇ ಕೈಗಾರಿಕಾ ನೆಲೆಗಳಿಗೆ ಭೇಟಿಯಿತ್ತರೆ ನಮಗೆ ಕಾಣುವುದು ಅಸ್ಥಿ ಪಂಜರಗಳಿಗೆ ಚರ್ಮವನ್ನೊದಿಸಿಕೊಂಡು ಜೀವ ಮಾತ್ರವಿರುವ ಕಾರ್ಮಿಕರು. ಪೌಷ್ಟಿಕಾಂಶದ ಕೊರತೆ, ಸಂಸಾರ ನಿರ್ವಹಣೆ ಮತ್ತು ಮಕ್ಕಳ ಪೋಷಣೆ, ವಿದ್ಯಾರ್ಜನೆಗಳ ಕಡೆ ಗಮನಹರಿಸಲಾಗದೆ, ದಿನನಿತ್ಯ ಹತ್ತು ಘಂಟೆಗೂ ಹೆಚ್ಚು ದುಡಿದು ಜರ್ಜರಿತರಾಗಿ, ಬೆಂಗಳೂರಿನಂತಹ ಹೈಟೆಕ್ ನಗರದಲ್ಲಿ ತಿಂಗಳಿಗೆ ಕೇವಲ ರೂ. ೧,೫೦೦ಕ್ಕಿಂತ ಕಡಿಮೆ ಪಡೆದು ದುಡಿವ ಕಾರ್ಮಿಕರು. ರಾಜ್ಯದ ಶೇ. ೩೦ ಜನರು, ಕೈಗಾರಿಕೀಕರಣದ ಭಾರವನ್ನು ತಮ್ಮ ಹೆಗಲ ಮೇಲೊತ್ತಿ ನಡೆಯುವವರು. ಈ ಸ್ಥಿತಿಯಲ್ಲಿರುವಾಗ ನಾವು ಹೇಗೆ ಕೈಗಾರಿಕೀಕರಣವನ್ನು ರಾಜ್ಯದಲ್ಲಿ ಮುನ್ನಡೆಸಬಹುದು ?

**ಆ) ರಫ್ತು ಸ್ಥಿತಿ :** ಸಣ್ಣ ಕೈಗಾರಿಕೆಗಳು ರಫ್ತು ವಹಿವಾಟಿನಲ್ಲಿ ದೊಡ್ಡ ಕೈಗಾರಿಕೆಗಳಿಗಿಂತ ಹೆಚ್ಚು ಪಾಲು ಹೊಂದಿವೆ. ಇವುಗಳು ಹೊರದೇಶಗಳಿಗೆ ಉತ್ಪನ್ನಗಳನ್ನು ರಫ್ತು ಮಾಡುವುದರಿಂದ ದೇಶಕ್ಕೆ ಹೆಚ್ಚು ವಿದೇಶಿ ವಿನಿಮಯವನ್ನು ತರುತ್ತವೆ. ಸಣ್ಣ ಕೈಗಾರಿಕೆಗಳ ಇಳಿಮುಖದಿಂದ ರಫ್ತು ಪ್ರಮಾಣದಲ್ಲಿ ಹಿನ್ನಡೆ ಉಂಟಾಗಿದೆ.

**ಇ) ಕೈಗಾರಿಕೀಕರಣದ ಹಿನ್ನಡೆ :** ಶೇ. ೬೦ಕ್ಕೂ ಹೆಚ್ಚು ಸಣ್ಣ ಕೈಗಾರಿಕೆಗಳು ಮುಚ್ಚಿಹೋಗಿರುವುದರಿಂದ ಕೈಗಾರಿಕೀಕರಣಕ್ಕೆ ಹಿನ್ನಡೆ ಉಂಟಾಗಿದೆ. ಆಧುನಿಕ ಯುಗದಲ್ಲಿ ಕೈಗಾರಿಕೀಕರಣವಿಲ್ಲದ ದೇಶ ಅವನತಿಯ ಹಾದಿ ಹಿಡಿಯುತ್ತದೆ.

ಜಯ



## ಯೋಗಪ್ರವೇಶ

ಡಾ|| ಜಿ. ರಾಮಕೃಷ್ಣ

ಪುಟ : ೧೦೪ ಬೆಲೆ : ರೂ. ೫೦

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ.ಲಿ.,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೧

ಯೋಗಾಭ್ಯಾಸ ದೇಹ ಮತ್ತು ಮನಸ್ಸುಗಳಿಗೆ ಚೈತನ್ಯವನ್ನೀಯುವ ಒಂದು ಸಾಧನ. ದೇಹಕ್ಕೆ ಸಂಬಂಧಿಸಿದಂತೆ ಅದು ಸಂಪೂರ್ಣ ಭೌತಿಕ ತತ್ವಗಳಿಗೆ ಬದ್ಧವಾಗಿದ್ದು ಆ ಮೂಲಕ ಚಂಚಲವಾದ ಮನಸ್ಸನ್ನು ಹತೋಟಿಗೆ ತರುವ ಅಪೂರ್ವ ವಿದ್ಯೆಯಾಗಿದೆ. ಯೋಗಾಭ್ಯಾಸಿಗಳಿಗೆ ಅನುಕೂಲವಾಗಲೆಂದು ಪೂರ್ವ ಪೀಠಿಕೆಯೊಂದಿಗೆ ಲೇಖಕರು ಯೋಗದ ಮಹತ್ವವನ್ನು ಆರಂಭದಲ್ಲಿ ತಿಳಿಸುತ್ತ ಮುಂದೆ ಕ್ರಮಬದ್ಧವಾದ ಆಸನಗಳ ಬಗ್ಗೆ ತಿಳಿಸಿದ್ದಾರೆ. ತಿಳುವಳಿಕೆ-ಸಂಯಮ-ನಿಯಮ ಇವು ಯೋಗಾಭ್ಯಾಸದಲ್ಲಿ ತುಂಬ ಆಗತ್ಯವಾಗಿದ್ದು ಅವಸರ ಸಲ್ಲದೆಂದೂ ಎಚ್ಚರಿಸಿದ್ದಾರೆ.

## ಒಳ್ಳೆಯ ಓದು

## ಪಾಶುಪತ ದರ್ಶನ (ಲೇಖನ ಸಂಗ್ರಹ)

ಎಸ್. ಎಸ್. ಹಿರೇಮಠ

ಪುಟ : ೧೨೦ ಬೆಲೆ : ರೂ. ೩೫

**ಸಮತಾ ಪ್ರಕಾಶನ,** ಹರಪನಹಳ್ಳಿ - ೫೮೩ ೧೩೧

ಬಹುಮುಖಿ ಸಂಸ್ಕೃತಿಯಿರುವ ಭಾರತದ ಮೂಲದರ್ಶನಗಳು ಕಾಲ ಸರಿದಂತೆ ಒಂದರೊಳಗೊಂದು ವಿಲೀನಗೊಂಡಿರುವಾಗ ಇವುಗಳ ಮೂಲ ಸ್ವರೂಪವನ್ನು ಶೋಧಿಸುವುದು ಸಾಹಸದ ಕೆಲಸ. ಭೌತ ನಿರೀಶ್ವರ ತಳಹದಿಯಲ್ಲಿ ರೂಪುಗೊಂಡು ವೈದಿಕರ, ಭಾವನಾವಾದಿಗಳ ಸೊತ್ತಾಗಿ ಮಾರ್ಪಾಟುಗೊಂಡ ದರ್ಶನಗಳನ್ನು ಬಣವೆಯಲ್ಲಿನ ಸೂಜಿಯನ್ನು ಹುಡುಕುವಷ್ಟು ತಾಳ್ಮೆಯಿಂದ ಮುಖ್ಯವಾಗಿ ಎಡಪಂಥೀಯ ವಿಚಾರವಾದದ ಮೂಲಕ ಲೇಖಕರು ವಿಶ್ಲೇಷಿಸುತ್ತಾರೆ. ಸಾಂಖ್ಯದ ಮೇಲೆ ಹೊಸ ಬೆಳಕನ್ನಾಗಲೇ ಚೆಲ್ಲಿದ ಇವರು ಇಲ್ಲಿ ಶೈವ ತತ್ವದ ಶಾಖೆಯಾದ ಪಾಶುಪತವನ್ನು ಸ್ವಾರಸ್ಯವಾಗಿ ನಿರೂಪಿಸಿದ್ದಾರೆ.

## 'ಹೇ ರಾಮ್' ಭಾರತದ ಆತ್ಮಚ್ಛೇದ ಕಥನ (ಸಂಗ್ರಹ)

ಸಂ. : ನ. ರವಿಕುಮಾರ

ಪುಟ : ೪೦೦ ಬೆಲೆ : ರೂ. ೨೫೦

**ಅಭಿನವ - ಚಾತುರ್ಮಾಸಿಕ,** ೧೭/೧೮, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ , ವಿಜಯನಗರ, ಬೆಂ -೪೦



ಸ್ವಾತಂತ್ರ್ಯ ಕಾಲದ ದೇಶ ವಿಭಜನೆಯ ಸಂದರ್ಭದಲ್ಲಿ ಭುಗಿಲೆದ್ದ ಹಿಂದೂ-ಮುಸ್ಲಿಂ ಗಲಭೆ ಗಾಂಧೀಜಿಯವರ ಉಸಿರಾದ ಅಹಿಂಸೆಯನ್ನು ಗಾಳಿಗೆ ತೂರಿ ರಕ್ತರಂಜಿತ ಅಧ್ಯಾಯವನ್ನು ಬರೆಯಿತು. ಒಂದೇ ಮನೆಯವರಂತಿದ್ದ ಅವರು ಜನ್ಮಾಂತರದ ವೈರಿಗಳಾಗಿ ಮಾರ್ಪಾಡು ಹೊಂದಿದ್ದು ಹೇಗೆ ? ಅಂದಿನ ಕ್ರೌರ್ಯವನ್ನು ಕಣ್ಣಾರೆ ಕಂಡ ಸಾಹಿತಿ-ಕವಿ-ಬುದ್ಧಿಜೀವಿಗಳು ಭಾರತವನ್ನು ರಕ್ತಸಿಕ್ತ ಹೋಳನ್ನಾಗಿ ಹಂಚಿಕೊಟ್ಟ ಬಗ್ಗೆ ಸಾಕಷ್ಟು ಸಾಹಿತ್ಯವನ್ನು ರಚಿಸಿದ್ದಾರೆ. ಎರಡೂ ದೇಶಗಳ ಜನರ ಮಾನಸಿಕ ನೋವನ್ನಲ್ಲಿ ಕಾಣಬಹುದು. ಅಂಥ ಕೆಲವು ಲೇಖನಗಳ ಸಂಗ್ರಹ ಇಲ್ಲಿದೆ.



## ಗಣಿತಜ್ಞರು (ಪರಿಚಯ)

ಮಲ್ಲಿಕಾರ್ಜುನ ಯಾಳವಾರ

ಪುಟ : ೨೩೪ ಬೆಲೆ : ರೂ. ೧೩೫

**ಮಂಕಸಂಕೀಲ ಪ್ರಕಾಶನ,** ಕುಂದರಗಿ - ೫೮೭ ೨೧೪ ತಾ। ಬೀಳಗಿ ಜಿ। ಬಾಗಲಕೋಟೆ

ಈ ಪುಸ್ತಕವು ಪ್ರಾಚೀನ ಗಣಿತಶಾಸ್ತ್ರಜ್ಞರ ಜೀವನ ಸಾಧನೆಗಳ ಬಗ್ಗೆ ಮಾಹಿತಿ ಒದಗಿಸುತ್ತದೆ. ಅಂಕಗಣಿತ, ರೇಖಾಗಣಿತ, ಬೀಜಗಣಿತದಂತಹ ಕ್ಲಿಷ್ಟ ಗಣಿತ ಸೂತ್ರಗಳನ್ನು ತಮ್ಮದೇ ಆದ ರೀತಿಯಲ್ಲಿ ಮಂಡಿಸಿ ಇಂದಿನ ನಿಖರ ಮಾಹಿತಿಗಳಿಗೆ ಭದ್ರ ಬುನಾದಿ ಹಾಕಿಕೊಟ್ಟ ಈ ವಿಜ್ಞಾನಿಗಳ ಸಾಧನೆ ಕಡಿಮೆಯದೇನೂ ಅಲ್ಲ. ತಮ್ಮ ಪಾಂಡಿತ್ಯದಿಂದ ಲೋಕದ ಗಮನ ಸೆಳೆದ ದೇಶವಿದೇಶಗಳ ಒಟ್ಟು ಹದಿನೇಳು ಮಂದಿ ಗಣಿತಜ್ಞರನ್ನು ಇಲ್ಲಿ ಪರಿಚಯಿಸಲಾಗಿದೆ. ಕೆಲವು ಪ್ರಮೇಯಗಳನ್ನು ನೀಡಲಾಗಿದ್ದು ವಿದ್ಯಾರ್ಥಿಗಳು ತಾಳೆ ನೋಡಬಹುದಾಗಿದೆ.



## ಆಯ್ದ ನೂರೊಂದು ಕವನ (ಕವನಗಳು)

ಸಿ. ಪಿ. ಕೆ.

ಪುಟ : ೧೨೪ ಬೆಲೆ : ರೂ. ೧೦೦

**ಚಿತ್ರಭಾನು ಪ್ರಕಾಶನ,** ೨೨೬೫/೧೯. 'ಭಾರತಿ' ೬ನೇ ತಿರುವು, ವಿನಾಯಕನಗರ, ಮೈಸೂರು - ೫೭೦ ೦೧೨

ಸಿ. ಪಿ. ಕೃಷ್ಣಕುಮಾರ್ ಅವರ ಕಾವ್ಯಕ್ಕೆ ಅರ್ಧಶತಮಾನದಷ್ಟು ಸಮಯದ ವಿಸ್ತಾರವಿದೆ. ನವೋದಯದಿಂದ ಇತ್ತೀಚಿನ ನವ್ಯೋತ್ತರ ಹಾಗೂ ಬಂಡಾಯದವರೆಗೂ ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ಸಫಲವಾಗಿ ಹಾಯ್ದುಬಂದ ಅವರ ವೈಶಿಷ್ಟ್ಯವೆಂದರೆ ಸದ್ದುಗದ್ದಲವಿಲ್ಲದೆ ಕೃತಿರಚನೆ ಮಾಡಿರುವುದು. ಸಾಮಾಜಿಕ ಕಳಕಳಿಯ ಮುನ್ನೆಲೆಯಲ್ಲಿ ವ್ಯಕ್ತವಾಗುವ ವ್ಯಂಗ್ಯ - ಮೊನಚು ಮತ್ತು ಬಂಡಾಯದ ಧೋರಣೆಗಳು ಅವರ ಕವನಗಳಲ್ಲಿ ಉದ್ದಕ್ಕೂ ಕಾಣಿಸುತ್ತವೆ. ಈ ಸಂಗ್ರಹದಲ್ಲಿ ನೂರೊಂದು ಕವನಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

## ಜಾತ್ಯಾತೀತತೆ ಎದುರಿಸುತ್ತಿರುವ ಸವಾಲುಗಳು

ಪಿ. ಎಮ್. ನಾರಾಯಣ ಮೂರ್ತಿ

ಪುಟ : ೬೪ ಬೆಲೆ : ರೂ. ೧೦

**ಭಾರತ ಕಮ್ಯೂನಿಸ್ಟ್ ಪಕ್ಷ,** ದ. ಕ. ಜಿಲ್ಲಾ ಮಂಡಳಿ, ಸೆಂಟ್ರಲ್ ಮಾರ್ಕೆಟ್ ಕಟ್ಟಡ, ಮಂಗಳೂರು



ನಮ್ಮ ದೇಶದ ರಾಜಕೀಯ ವಿದ್ಯಮಾನಗಳನ್ನು ಸೂಕ್ಷ್ಮವಾಗಿ ಗಮನಿಸುತ್ತ ಬಂದಿರುವ ಹಿರಿಯ ವಕೀಲರೂ ಆದ ಶ್ರೀ ಪಿ. ಯಂ. ನಾರಾಯಣ ಮೂರ್ತಿ ಎಡಪಂಥೀಯ ವಿಚಾರವಾದಿ. ನಮ್ಮ ದೇಶದ ಮತಧಾರ್ಮಿಕ ರಾಜಕೀಯವನ್ನವರು ನಿಖರವಾಗಿ ಗುರುತಿಸುತ್ತ ಜಾತ್ಯತೀತ ರಾಷ್ಟ್ರವೊಂದು ಅಪಾಯಕಾರಿ ಕೋಮುವಾದಿಗಳ ಹಿಡಿತಕ್ಕೆ ಸಿಕ್ಕಿ ಹೇಗೆ ನರಳುತ್ತಿದೆಯೆಂದು ಇಲ್ಲಿ ವಿಶ್ಲೇಷಿಸಿದ್ದಾರೆ. ಮತೀಯ ಭಾವನೆಗಳನ್ನು ಪೋಷಿಸುತ್ತ ಅನ್ಯಮತೀಯರನ್ನು ದ್ವೇಷಿಸುತ್ತ ಜನತೆಯ ಸಹಬಾಳ್ವೆಯನ್ನು ಕೆಡಿಸಿ ಈ ಶಕ್ತಿಗಳು ದೇಶದ ಪ್ರಗತಿಗೆ ಮಾರಕವಾಗಿರುವುದನ್ನು ಗುರುತಿಸಿದ್ದಾರೆ.

## ಹೀಗೊಂದು ಟಾಪ್ ಪ್ರಯಾಣ (ಲಲಿತ ಪ್ರಬಂಧಗಳು)

ಈರಪ್ಪ ಎಂ. ಕಂಬಳಿ

ಪುಟ : ೧೬೬ ಬೆಲೆ : ರೂ. ೫೦

**ಚಾರ್ವಾಕ ಪ್ರಕಾಶನ ,** ಡಿ – ೧೫೪, ಜೀವನ್ ಬಿಮಾನಗರ, ಬೆಂಗಳೂರು - ೫೬೦ ೦೭೫



ಬಾಳಿನ ವೈವಿಧ್ಯಮಯ ನೋಟಗಳಿಗೆ ಚುರುಕಾಗಿ ಸ್ಪಂದಿಸುವ ಈ ಲೇಖನಗಳು ನಮಗೊಂದು ಹೊಸ ಪ್ರಪಂಚವನ್ನು ತೆರೆದಿಡುತ್ತವೆ. ನಮ್ಮ ಕಣ್ಮುಂದೆ ರಾಚುವ ಎಲ್ಲ ಅಸಭ್ಯ ಅನಾಗರಿಕ ವರ್ತನೆಗಳನ್ನು ನಾವು ಏಕೆ ಸಹಿಸಿಕೊಳ್ಳಬೇಕೆಂಬ ದಿಟ್ಟ ವೈಚಾರಿಕ ಪ್ರಶ್ನೆಗಳನ್ನು ಈ ಬರಹಗಳು ಮೂಲಭೂತವಾಗಿ ಎತ್ತುತ್ತವೆ. ವ್ಯವಸ್ಥೆಯನ್ನು ಗೇಲಿ ಮಾಡುವಂತೆ ಮೇಲ್ನೋಟಕ್ಕೆ ಕಂಡರೂ ಒಳಹೊಕ್ಕು ಒಂದಿಷ್ಟು ಯೋಚಿಸಿದರೆ ನಮ್ಮಲ್ಲೇ ತುಂಬಿರುವ ರಾಡಿ ನಮಗೆ ಗೋಚರಿಸಬಹುದು. ಇದು ನಮ್ಮ ಸರಹದ್ದೇ ? ಎಂದು ಹುಬ್ಬೇರಿಸುವಂಥ ಬರಹ.



## ಸಂಕ್ರಮಣ (ಕಥಾ ಸಂಕಲನ)

ವಿದ್ಯಾಧರ ಮುತಾಲಿಕ ದೇಸಾಯಿ

ಪುಟ : ೧೪೯ ಬೆಲೆ : ರೂ. ೭೫

**ಮುಂಬೆಳಕು ಕನ್ನಡ ಬಳಗ (ರಿ),** ಡಿ/೬/೨೦೩, ಹೇಮಗಿರಿ ಸಿ.ಎಚ್.ಎಸ್. ಲೋಕಧರ, ಕಲ್ಯಾಣ (ಈಸ್ಟ್)- ೪೨೧ ೩೦೬

ನಮ್ಮ ಸುತ್ತಲೂ ದೀನರು-ದರಿದ್ರರು-ನಿರ್ಗತಿಕರು ಸಾಕಷ್ಟು ಸಂಖ್ಯೆಯಲ್ಲಿದ್ದಾರೆ. ಅಸಹಾಯಕರಾದ ಅವರನ್ನು ನಾವೆಲ್ಲ ಹುಚ್ಚರೆಂದೋ ಕಳ್ಳ ಹರಾಮಿಗಳೆಂದೋ ಹೆಸರಿಟ್ಟು ಕರೆದು ನಮ್ಮ ಸಣ್ಣತನವನ್ನು ತೋರುತ್ತ ಅಲಕ್ಷ್ಯದಿಂದಿರುತ್ತೇವೆ. ಇದೋ ಇಲ್ಲಿವೆ, ಅವರ ಬಾಳಿನ ಆಳಕ್ಕಿಳಿದು ಅವರ ಈ ಸ್ಥಿತಿಗೆ ಕನ್ನಡಿ ಹಿಡಿದಂತೆ ತೋರುವ ನಾವೇ ಕಾರಣವಾಗಿರುವ ಒಂದಷ್ಟು ಕಥೆಗಳು ! ''ಉದರನಿಮಿತ್ತಂ ಬಹುಕೃತ ವೇಷಃ'' ಎಂಬಂತೆ ಹಾಳು ಹೊಟ್ಟೆಗಾಗಿ ಇದನ್ನೆಲ್ಲ ಮಾಡುವುದಾಗಿ ಹೇಳಿಕೊಳ್ಳುವ ಕಥಾ ಪಾತ್ರಗಳು ನಮ್ಮ ಮನಸ್ಸನ್ನು ಹಿಂಡಬಲ್ಲವು.

– ಇಂದಿರಾ ಕುಮಾರಿ



ನೇಮಿಚಂದ್ರ

# ಯಹೂದಿಗಳ ಬೆನ್ನತ್ತಿ...

‘ನೀವೇಕೆ ಕಾದಂಬರಿ ಬರೆದಿಲ್ಲ?’ ಅದೆಷ್ಟೋ ಬಾರಿ ಈ ಪ್ರಶ್ನೆಯನ್ನು ಎದುರಿಸಿದ್ದೇನೆ. ‘ಕಾದಂಬರಿಯಾಗಬಲ್ಲ ವಸ್ತು ಸಿಕ್ಕಿಲ್ಲ’, ಪ್ರಾಮಾಣಿಕವಾಗಿ ಉತ್ತರಿಸಿದ್ದೆ.

೧೯೯೫, ಅದೊಂದು ಬಿಸಿಲು ಮಧ್ಯಾಹ್ನ, ಚಾಮರಾಜಪೇಟೆಯಲ್ಲಿ ಯಾವುದೋ ಕಾರ್ಯಕ್ರಮ ಮುಗಿಸಿಕೊಂಡು ಹಿಂತಿರುಗುತ್ತಿದ್ದೆ. ಮೈಸೂರು ರಸ್ತೆ ದಾಟಿ, ಗೋರಿಪಾಳ್ಯ ಹೊಕ್ಕಂತೆ, ರಸ್ತೆ ಎರಡೂ ಬದಿಗೆ ಗೋರಿಗಳು. ಒಂದು ಬದಿಗೆ ಹಿಂದುಗಳದು, ಇನ್ನೊಂದು ಬದಿಗೆ ಮುಸ್ಲಿಮರದು. ತಟ್ಟನೆ ನನ್ನ ಕಣ್ಣಿಗೆ ಬಿತ್ತು, ಬಲಗಡೆಯ ಸ್ಮಶಾನದ ಏರುಗೋಡೆಯ ಮೂಲೆಗೆ ಕೆತ್ತಿದ ಸಣ್ಣ ಅಕ್ಷರಗಳು : 'jewish cemetery' – ಯಹೂದಿಗಳ ಸ್ಮಶಾನ. ಅದರ ಕೆಳಗೆ ಅಪರಿಚಿತ ಭಾಷೆಯ ಲಿಪಿ. ಅದು ನನಗೆ ಗೊತ್ತಿದ್ದ ಯಾವ ಭಾರತೀಯ ಭಾಷೆಯ ಲಿಪಿಯನ್ನೂ ಹೋಲುತ್ತಿರಲಿಲ್ಲ. ಗೀಟು ಗೀಟುಗಳಿದ್ದರೂ ಉರ್ದುವಿನಂತಿರಲಿಲ್ಲ. ನಂತರ ನನಗೆ ತಿಳಿಯಲಿತ್ತು, ಅದು ‘ಹೀಬ್ರೂ’ ಭಾಷೆಯೆಂದು. ಕುತೂಹಲಕ್ಕೆ ಆಟೋ ಅಲ್ಲಿಯೇ ನಿಲ್ಲಿಸಿದೆ. ಕಾಂಪೌಂಡಿನ ಒಳಹೊಕ್ಕೆ. ಅಲ್ಲಿ ಕೆಲವು ಗೋರಿಗಳಿದ್ದವು. ಹುಲ್ಲ ನೆಲದಲ್ಲಿ ಹೂತುಹೋದ, ಹೀಬ್ರೂ ಲಿಪಿಯ ಕೆತ್ತನೆಯಿದ್ದ ಗೋರಿಗಳು. ಕೆಲವು ನೂರು ವರ್ಷಗಳಷ್ಟು ಹಳೆಯವು, ಕೆಲವು ನಲವತ್ತು ವರ್ಷಗಳಷ್ಟು ಹೊಸತು. ಬೆಂಗಳೂರಿನಲ್ಲಿ ಯಹೂದಿಗಳಿದ್ದಾರೆ ಎಂದು ಕೂಡ ಆಗ ನನಗೆ ತಿಳಿದಿರಲಿಲ್ಲ.

ಕಾಕತಾಳೀಯವೆಂಬಂತೆ, ಆ ಸಮಯದಲ್ಲಿ ನಾನು ಸರ್ ಸಿ. ವಿ. ರಾಮನ್ ಅವರ ಜೀವನ ಚರಿತ್ರೆಯನ್ನು ಓದುತ್ತಿದ್ದೆ. ನನ್ನ ಪುಟ್ಟ ಮಗಳಿಗೆ ವಿಜ್ಞಾನಿಗಳ ಕತೆಯನ್ನು ಓದಿ ಹೇಳುವ ಪರಿಪಾಠದಲ್ಲಿ, ನಮ್ಮ ಕಾರ್ಖಾನೆಯ ಗ್ರಂಥಾಲಯದಲ್ಲೇ ಇದ್ದ ಸಿ. ವಿ. ರಾಮನ್ ಕುರಿತ ಪುಸ್ತಕ ಹೊತ್ತು ತಂದಿದ್ದೆ. ೧೯೩೩ರ ಸಮಯ, ಸಿ. ವಿ. ರಾಮನ್ ಬೆಂಗಳೂರಿನ ‘ಟಾಟಾ ಇನ್‌ಸ್ಟಿಟ್ಯೂಟ್’ಗೆ ನಿರ್ದೇಶಕರಾಗಿದ್ದರು. ‘ನಾಜಿ ಭಯದಲ್ಲಿ ಜರ್ಮನಿಯಿಂದ ಹೊರಗೋಡುತ್ತಿರುವ ವಿಜ್ಞಾನಿಗಳನ್ನು ಭಾರತಕ್ಕೆ ಆಹ್ವಾನಿಸಿ ಕರೆಯಬೇಕು, ಭಾರತದಲ್ಲಿ ವಿಜ್ಞಾನ ಕ್ರಾಂತಿಯಾಗಬೇಕೆಂದು’ ಬಯಸಿದ ಸಿ. ವಿ. ರಾಮನ್, ಮ್ಯಾಕ್ಸ್ ಬಾರ್ನ್ ಅವರನ್ನೂ ಸೇರಿಸಿದಂತೆ ಕೆಲವು ಯಹೂದಿ ವಿಜ್ಞಾನಿಗಳನ್ನು ಕರೆಸಿದ್ದೂ ತಿಳಿಯಿತು. ಅಲ್ಲಿ ಆ ಗೋರಿಗಳ ನಡುವೆ ನಿಂತಂತೆ ತಲೆಯಲ್ಲಿ ಏನೋ ಮಿಂಚಿತು, ಮನಸ್ಸಿಗೆ ಏನೋ ಹೊಳೆಯಿತು. ಆ ಕ್ಷಣ ನನ್ನ ಕಣ್ಣೆದುರು ಕಂಡ ದೃಶ್ಯ – ‘ಓರ್ವ ಯಹೂದಿ ವಿಜ್ಞಾನಿ ತನ್ನ ಪುಟ್ಟ ಮಗಳೊಡನೆ ಜರ್ಮನಿಯ ನಾಜಿಗಳಿಂದ ತಪ್ಪಿಸಿಕೊಂಡು ಭಾರತಕ್ಕೆ ಬರುತ್ತಿದ್ದಾನೆ’! ನನ್ನ ಮೊಟ್ಟ ಮೊದಲ ಕಾದಂಬರಿ ನನ್ನೊಳಗೆ ಜೀವ ತಾಳಿತ್ತು. ಉದ್ವೇಗದಿಂದ ಎದೆ ಹೊಡೆದುಕೊಂಡಿತ್ತು.

ಇದೀಗ ಕತೆಯ ಬೆನ್ನತ್ತಿ ಹೋಗಬೇಕಿತ್ತು, ಯಹೂದಿಗಳ ಬೆನ್ನತ್ತಿ. ಜರ್ಮನಿಯಲ್ಲಿ ಬರ್ಲಿನ್, ಮ್ಯೂನಿಕ್, ಡಕಾವ್ ನಾಜಿ ಕ್ಯಾಂಪ್, ಆಂಸ್ಟರ್‌ಡ್ಯಾಮ್‌ನಲ್ಲಿ ‘ಆನ್ ಫ್ರಾಂಕ್’ಳ ಗುಪ್ತಗೃಹ, ವಾಷಿಂಗ್ಟನ್‌ನ ‘ಹೊಲೊಕಾಸ್ಟ್ ಮ್ಯೂಸಿಯಂ’, ಲಾಸ್‌ಏಂಜಲೀಸ್‌ನ ‘ಮ್ಯೂಸಿಯಂ ಆಫ್ ಟಾಲರೆನ್ಸ್’, ಇಸ್ರೇಲಿನ ‘ಯಾದ್ ವಶೀಮ್’ ಸ್ಮಾರಕ ಸ್ಥಳ, ಜೆರೂಸಲಂನ ‘ಗೋಳು ಗೋಡೆ’ – ಎಂಟು ವರ್ಷಗಳ ಅವಧಿಯಲ್ಲಿ ಕೂಡಿಟ್ಟ ಹಣದಲ್ಲಿ ಅಲೆದು ಬಂದ ಮೇಲೆ, ನನ್ನಲ್ಲಿ ಕಾದಂಬರಿಯ ಹಿನ್ನೆಲೆಗೆ ಬೇಕಿದ್ದ ಮಾಹಿತಿ ಸಂಗ್ರಹವಾಯಿತು. ನಾಜಿ ಕ್ಯಾಂಪಿನಿಂದ



೧೯೨೧ರಲ್ಲಿ ರೂಬೆನ್ ಮೋಸಸ್ ಅವರು 'ಕ್ಯಾವಲ್ರಿ ರಸ್ತೆ'ಯಲ್ಲಿ ಕಟ್ಟಿಸಿದ ಇರಾಕಿ ಕಸಪಾ ಶೈಲಿಯ ಮನೆ. ಇದೀಗ 'ಈಸ್ಟರ್ನ್ ಲಾಡ್ಜ್' ಆಗಿದೆ.

ಬದುಕುಳಿದು ಬಂದ ಓರ್ವ ಮಹಿಳೆ ಮತ್ತು ಅನೇಕ ಕುಟುಂಬಗಳ ಭೇಟಿಯಾಗಿತ್ತು. ಕಾದಂಬರಿಗೆ ಬೇಕಾದ ಹೊರ ದೇಶಗಳ ಮಾಹಿತಿ ಸಂಗ್ರಹವಾಗಿತ್ತು. ಮುಂಬಯಿ, ಕೊಚಿನ್, ಕೊಲ್ಕಟಾ, ದಿಲ್ಲಿಯ ಯಹೂದಿಗಳನ್ನು ಕುರಿತ ಮಾಹಿತಿ ಕೂಡಾ ನನ್ನಲ್ಲಿತ್ತು. ಆದರೆ ಬೆಂಗಳೂರಿನ ಯಹೂದಿಗಳ ವಿಷಯವನ್ನು ತಿಳಿಯಬೇಕಿತ್ತು. ಗೋರಿಪಾಳ್ಯದ ಸ್ಮಶಾನದಲ್ಲಿ ಹುಡುಕಿದಾಗ, 'ರೂಬೆನ್' 'ಮೋಸಸ್' 'ಸಾಲೊಮನ್' ಹೆಸರುಗಳು ಸಾಮಾನ್ಯವಾಗಿರುವುದು ಕಂಡುಬಂದಿತು. ಆ ಕುಟುಂಬದವರು ಯಾರಾದರೂ ಸಿಗಬಹುದೆಂದು, ಬೆಂಗಳೂರು ದೂರವಾಣಿ ಡೈರೆಕ್ಟರಿ ತೆರೆದು, ಪ್ರತಿದಿನ ಈ ಹೆಸರುಗಳಿದ್ದ ವ್ಯಕ್ತಿಗಳಿಗೆ ಫೋನ್ ಮಾಡತೊಡಗಿದೆ. 'ಸಾರಿ, ನಾವು ಕ್ರಿಶ್ಚಿಯನ್ನರು' ಪ್ರತಿಯೊಬ್ಬ ವ್ಯಕ್ತಿಯಿಂದ ಬಂದ ಉತ್ತರ. ಇಸ್ರೇಲಿನಿಂದ ಬಂದ ಮೇಲೆ, ನಾನು ಕಾದಂಬರಿ ಬರೆದೇ ಬರೆಯುತ್ತೇನೆ ಎಂದು ಗಟ್ಟಿಯಾಗಿತ್ತು. ಸಂಕೋಚ, ಮುಜುಗರ ಬಿಟ್ಟು ಸ್ನೇಹಿತರೊಡನೆ ಹಂಚಿಕೊಳ್ಳತೊಡಗಿದೆ. ಎಷ್ಟೋ ಮಂದಿ ಸ್ನೇಹಿತರು ಬೆಂಗಳೂರಿನಲ್ಲಿ ಯಹೂದಿಗಳನ್ನು ಹುಡುಕುವ ನನ್ನ 'ಸಾಹಸ'ಕ್ಕೆ ಜೊತೆಯಾದರು.

ಮತ್ತೊಮ್ಮೆ ರುದ್ರಭೂಮಿಗೆ ಹೋದೆ. ಎಂಟು ವರ್ಷಗಳ ನಂತರ ಇಲ್ಲಿಗೆ ಭೇಟಿ ಕೊಡುತ್ತಿದ್ದೆ. ಇಲ್ಲಿ ಹೊಸದೊಂದು ಸಮಾಧಿ ಎದ್ದುನಿಂತಿತ್ತು. ಅದು 'ಮಾರೀಸ್ ಮೋಸಸ್' ಅವರ ಸಮಾಧಿಯಾಗಿತ್ತು. ಅವರು ೨೦೦೧ರಲ್ಲಿ ತೀರಿಕೊಂಡಿದ್ದರು. ನಮ್ಮ ಮನೆಯಲ್ಲಿ ೨೦೦೧ರ ದೂರವಾಣಿ ಡೈರೆಕ್ಟರಿ ಇತ್ತು. ಬಿಡಿಸಿ ಮಾರಿಸ್ ಮೋಸಸ್ ಹೆಸರು ಹುಡುಕಿದೆ, ಸುಲಭವಾಗಿ ಸಿಕ್ಕಿತು! ವಿಳಾಸ ನೋಡಿದೆ, '೧೯, ಕ್ಯಾವೆಲ್ರಿ ರಸ್ತೆ' ಎಂದಿತ್ತು. ಅದೆಲ್ಲೋ ದಂಡಿನ ಜಾಗದಲ್ಲಿರಬೇಕು ಎಂದು, ಒಂದು ಸಂಜೆ ಎಂ. ಜಿ. ರಸ್ತೆಯಲ್ಲಿ ಇಳಿದು, ದಂಡಿನ ಜಾಗದಲ್ಲೆಲ್ಲ ಅಲೆದಾಡಿದೆ. ಎಲ್ಲೂ ಕ್ಯಾವಲ್ರಿ ರಸ್ತೆ ಕಾಣಲಿಲ್ಲ. ಕೊನೆಗೆ ಬ್ರಿಗೇಡ್ ರಸ್ತೆಯಿಂದ ಕಮರ್ಷಿಯಲ್ ರಸ್ತೆಗೆ ಬರುವ ಕಾಮರಾಜ ರಸ್ತೆಯಲ್ಲಿ ನಡೆಯುತ್ತಾ, ಅಲ್ಲಿ ವೃತ್ತದಲ್ಲಿ ನಿಂತ ಪೊಲೀಸಪ್ಪನ ಬಳಿ ಹೋಗಿ 'ನಿಮಗೇನಾದರೂ ಕ್ಯಾವೆಲ್ರಿ ರಸ್ತೆ ಎಲ್ಲಿ ಎಂದು ಗೊತ್ತೆ?' ಕೇಳಿದೆ. 'ಇದೇ ಕ್ಯಾವೆಲ್ರಿ ರಸ್ತೆ, ಈಗ ಇದಕ್ಕೆ ಕಾಮರಾಜ ರಸ್ತೆ ಅಂತ ಹೆಸರಿಟ್ಟಿದ್ದಾರೆ' ಎಂದ. ಅದೇ ರಸ್ತೆಯಲ್ಲಿ ನಾಲ್ಕು ಬಾರಿ ಅಲೆದಿದ್ದೆ! ಈ ರಸ್ತೆಯಲ್ಲಿ ಎಲ್ಲಾದರೂ ಸಿಗಲೇಬೇಕು ಮೋಸಸ್ ಅವರ ಮನೆ ಎಂದು ಉದ್ದಕ್ಕೆ ಹೊರಟೆ. ಕಮರ್ಷಿಯಲ್ ರಸ್ತೆಯ ಬಳಿ ಬಂದಂತೆ ಕ್ಯಾವಲ್ರಿ ರಸ್ತೆ ಅಂಗಡಿಗಳ ಸಂಖ್ಯೆಗಳು ಮೂರಂಕಿಯಲ್ಲಿದ್ದವು. ನನಗೆ ಬೇಕಾದದ್ದು ಎರಡಂಕಿಯ ಮನೆ. ಹಾಗೇ ಮತ್ತಷ್ಟು ಕೆಳಗೆ ಬಂದೆ, ಎಡಕ್ಕೆ ನೋಡುತ್ತೇನೆ '೧೯' ಅಂಕಿಯಿದ್ದ ಹಳೆಯ ಕಟ್ಟಡ ಕಂಡಿತು. ಅದು ಮನೆ ಆಗಿರಲಿಲ್ಲ, 'ಈಸ್ಟರ್ನ್ ಲಾಡ್ಜ್' ಆಗಿತ್ತು. ೧೯೨೧ರಲ್ಲಿ ಕಟ್ಟಿದ ಈ ಕಟ್ಟಡದ ಮೇಲಿನ ನಕ್ಷತ್ರದ ಚಿತ್ರವನ್ನು ನೋಡಿದೊಡನೆ ಇದೇ ಯಹೂದಿಗಳ ಮನೆಯೆಂದು ಗುರುತಿಸಿದೆ. ಒಳಗೆ ಹೋಗಿ ವಿಚಾರಿಸಿದಾಗ, ಇದು ಮೋಸಸ್ ಕುಟುಂಬಕ್ಕೆ ಸೇರಿದ 'ಲಾಡ್ಜ್' ಎಂದು ತಿಳಿಯಿತು. ಅದೆಷ್ಟೋ ಫೋನುಗಳ ನಂತರ ಮೋಸಸ್ ಕುಟುಂಬಕ್ಕೆ ಸೇರಿದ ದೀಪಾ ಮೋಸಸ್ ಅವರು ಮೊಬೈಲ್‌ನಲ್ಲಿ ಸಿಕ್ಕಿದರು. ಇದೇ ಸಮಯಕ್ಕೆ, ಇಂಟರ್ನೆಟ್‌ನಲ್ಲಿ 'ಬೆಂಗಳೂರಿನ ಯಹೂದಿಗಳ ಬಗ್ಗೆ ನನ್ನ ಹುಡುಕಾಟಕ್ಕೆ ಸಹಾಯ ಮಾಡಲು ಸಂದೇಶ ಬಿಟ್ಟಿದ್ದ' ಕೆ. ಎಸ್. ನವೀನ್ ಅವರು 'ಬೆಂಗಳೂರಿನ ಟರ್ಫ್ ಕ್ಲಬ್'ನಲ್ಲಿ ಒಬ್ಬರು ಯಹೂದಿ ಇರುವುದನ್ನು ಇ-ಮೇಲ್ ಮೂಲಕ ತಿಳಿಸಿದರು.

ತಕ್ಷಣ ಟರ್ಫ್ ಕ್ಲಬ್‌ಗೆ ಫೋನ್ ಮಾಡಿದೆ. ಸಿಡ್ನಿ ಮೋಸಸ್ ಅವರ ಮನೆ ನಂಬರ್ ಮತ್ತು ಮೊಬೈಲ್ ದೊರೆಯಿತು. ತಮ್ಮ ಕುಟುಂಬ ಒಂದು ಶತಮಾನಕ್ಕೂ ಹಿಂದೆ ಬೆಂಗಳೂರಿಗೆ ಬಂದಿರುವುದನ್ನು ಅವರು ತಿಳಿಸಿದರು. ದೀಪಾ ಮೋಸಸ್ ಅವರನ್ನು ಭೇಟಿಯಾಗುವವರೆಗೂ ಅವರು ಸಿಡ್ನಿ ಮೋಸಸ್ ಅವರ ಪತ್ನಿ ಎಂದು ತಿಳಿದಿರಲಿಲ್ಲ. 'ಮೇನ್ ಗಾರ್ಡ್ ರಸ್ತೆ'ಯ 'ರೂಬೆನ್ ಹೌಸ್'ಗೆ ದೀಪಾ ಆಹ್ವಾನಿಸಿದರು. 'ಸಫೀನಾ ಪ್ಲಾಸಾ' ಇರುವ ರಸ್ತೆಯಲ್ಲಿರುವ ಸುಮಾರು ನೂರು ವರ್ಷಗಳಷ್ಟು ಹಳೆಯದಾದ ಮನೆಯ ಒಳಗೆ ಹೊಕ್ಕಂತೆ, ಬಾಗಿಲಿಗೆ ಬಡಿದ 'ಮೆಸೂಜಾ' ಕಂಡಿತು. ಇದು ಯಹೂದಿ ಮನೆಗಳ ಗುರುತು. ದೀಪಾ ಮೋಸಸ್ ಇದ್ದರು. ಅವರು ಪಂಜಾಬಿಗಳೆಂದೂ, ಸಿಡ್ನಿ ಮೋಸಸ್ ಅವರನ್ನು ವಿವಾಹವಾಗಿರುವುದಾಗಿಯೂ ತಿಳಿದು ಬಂದಿತು. ತಮ್ಮ ೮೫ ವರ್ಷದ ಅತ್ತೆಯನ್ನು ಭೇಟಿ ಮಾಡಿಸುವುದಾಗಿ ಹೇಳಿದರು. ಮತ್ತೆ ವಾರ-ತಿಂಗಳುಗಳೇ ಕಳೆದವು. ದೀಪಾ ವಿದೇಶಕ್ಕೆ ಹೋಗಿದ್ದರು. ಸಿಡ್ನಿಯವರಿಗೆ ಫೋನ್ ಮಾಡಿದಾಗ ತಾಯಿ ಸೀಮಾ ಮೋಸಸ್ ಆಸ್ಪತ್ರೆಯಲ್ಲಿರುವುದು ಕೇಳಿ, ಎದೆ ಹೊಡೆದುಕೊಂಡಿತು. ಬೆಂಗಳೂರಿನ



ಇಸ್ರೇಲ್ ದೇಶದ ಅಧ್ಯಕ್ಷರಾದ ಸರ್ ವೈಸ್‌ಮನ್ ಭಾರತಕ್ಕೆ ಭೇಟಿ ನೀಡಿದ್ದರು. ಬೆಂಗಳೂರಿನ 'ರೂಬೆನ್ ಹೌಸ್'ನಲ್ಲಿ ಕಳೆದ ಸಮಯವನ್ನು ನೆನೆದು ಸರ್ ವೈಸ್‌ಮನ್ ರೂಬೆನ್ ಕುಟುಂಬದ ಸೀಮಾ ಮೋಸಸ್ ಅವರನ್ನು ಭೇಟಿ ಮಾಡಿದಾಗ ತೆಗೆದ ಚಿತ್ರ.

ಯಹೂದಿಗಳ ಇತಿಹಾಸಕ್ಕೆ ಕೊಂಡಿಯಾಗಿರುವ ಹಿರಿಯ ಜೀವ ಅವರದು. ಅವರ ಆರೋಗ್ಯ ಸುಧಾರಿಸಿಕೊಂಡು ಮನೆಗೆ ಬಂದರು. ಸಿಡ್ನಿ ಮೋಸಸ್ ಬೆಂಗಳೂರಿನ ಯಹೂದಿ ಇತಿಹಾಸವನ್ನು ನನ್ನೊಡನೆ ಹಂಚಿಕೊಂಡರು.

* * *

ಸ್ವಾತಂತ್ರ್ಯಪೂರ್ವದ ಬೆಂಗಳೂರಿನಲ್ಲಿ ಒಟ್ಟು ಐದು ಯಹೂದಿ ಕುಟುಂಬಗಳಿದ್ದವು. ರೂಬೆನ್ ಮೋಸಸ್, ಇಸಾಕ್ ಕೋಹೆನ್, ಕಡೂರಿ, ನೋಹ್, ಜೆ ಮೋಸಸ್ – ಈ ಐದು ಕುಟುಂಬಗಳು. ಬೆಂಗಳೂರಿನಲ್ಲಿ ಒಂದು ಶತಮಾನಕ್ಕೂ ಹೆಚ್ಚು ಕಾಲ ನೆಲೆಸಿರುವ ಕುಟುಂಬ ರೂಬೆನ್ ಮೋಸಸ್ ಅವರದು. ಉಳಿದ ನಾಲ್ಕು ಕುಟುಂಬಗಳು ಎರಡನೇ ಮಹಾಯುದ್ಧದ ನಂತರ ವಿದೇಶಗಳಿಗೆ ವಲಸೆ ಹೋದವು. ಬ್ರಿಟಿಷರ ಸೇನೆಯಲ್ಲಿ ಅನೇಕ ಯಹೂದಿ ಸೈನಿಕರು ಮತ್ತು ಅಧಿಕಾರಿಗಳು ಇದ್ದರು. ಬ್ರಿಟಿಷರ 'ರಾಯಲ್ ಏರ್‌ಫೋರ್ಸ್'ನಲ್ಲಿದ್ದ ಯುದ್ಧ ವಿಮಾನ ಚಾಲಕ ಸರ್ ಎಸ್ಟೆರ್ ವೈಸ್‌ಮನ್ ಬೆಂಗಳೂರಿನಲ್ಲಿ ಅನೇಕ ವರ್ಷಗಳನ್ನು ಕಳೆದರು. ನಂತರ ಈತ ಇಸ್ರೇಲ್ ದೇಶದ ಅಧ್ಯಕ್ಷರಾದರು.

ಕಳೆದ ಶತಮಾನದ ಆರಂಭ. ಕೋಲಾರದಲ್ಲಿ ಚಿನ್ನ ಸಿಕ್ಕಿದ ಸಮಯ. ಈ 'ಕೋಲಾರ್ ಗೋಲ್ಡ್ ರಷ್' ಸಮಯದಲ್ಲಿ, ಅಮೆರಿಕದಿಂದ ಬೆಂಗಳೂರಿಗೆ ಬಂದ ಯಹೂದಿ – ರೂಬೆನ್ ಮೋಸಸ್. ಇರಾಕಿನ ಮೂಲದ ಈತನ ಕುಟುಂಬ ಅಮೆರಿಕದಲ್ಲಿ ನೆಲೆಸಿತ್ತು. ಸ್ಯಾನ್‌ಫ್ರಾನ್‌ಸಿಸ್ಕೋ ಭೂಕಂಪದ ನಂತರ, ರೂಬೆನ್ ಮೋಸಸ್ ಬೆಂಗಳೂರಿಗೆ ಬಂದರು. ರೂಬೆನ್ ಊರಿಂದೂರಿಗೆ ತಮ್ಮ ಸರಕು ಹೊತ್ತು ಅಲೆದು ಮಾರುವ 'ತಿರುಗು ವ್ಯಾಪಾರಿ'. ಯಾವ ನೆಲದಲ್ಲೇ ಆಗಲಿ, ಬೇರಿಳಿಸಿ ಬೆಳೆಯುವ ಸಾಮರ್ಥ್ಯ ಯಹೂದಿಗಳಿಗಿದೆ. ಬೆಂಗಳೂರಿನಲ್ಲಿ ಕಾಲೂರಿ ನಿಂತ ರೂಬೆನ್, ಯಶಸ್ವೀ ವ್ಯಾಪಾರಿಯಾಗಿ ಬೆಳೆದರು. ಅರಮನೆ ರಸ್ತೆಯಲ್ಲಿರುವ 'ಹ್ಯಾಸಲ್‌ಮೇರ್' ಎಂಬ ಮನೆಯಲ್ಲಿ ಅವರ ವಾಸ. ರೂಬೆನ್ ಕೊಲ್ಕತ್ತೆಯ 'ರಾಮಾ' ಎಂಬುವವರನ್ನು ವಿವಾಹವಾದರು. ಹೀಬ್ರೂ ಭಾಷೆಯಲ್ಲಿ 'ರಾಮಾ' ಎಂದರೆ 'ಕರುಣೆ'.



*ಗೋರಿಪಾಳ್ಯದ ಯಹೂದಿ ರುದ್ರಭೂಮಿಯಲ್ಲಿ ಮಲಗಿರುವ 'ಇಸಾಕೋ' ಎಂಬ ರಷಿಯನ್ ಮಹಿಳೆಯ ಸಮಾಧಿ. ಸ್ವಾತಂತ್ರ್ಯಪೂರ್ವದ ದಿನಗಳಲ್ಲಿ, ರಷಿಯನ್ ಸರ್ಕಸ್ ಬೆಂಗಳೂರಿಗೆ ಬಂದಾಗ, ಸರ್ಕಸ್ಸಿನ ಮಾಲಿಕರ ಪತ್ನಿ ಇಲ್ಲಿಯೇ ತೀರಿಕೊಂಡರು. ಆಕೆಯನ್ನು ಈ ರುದ್ರಭೂಮಿಯಲ್ಲಿ ಹೂಳಲಾಯಿತು.*

ರೂಬೆನ್ ಮೋಸಸ್ ಬಹಳಷ್ಟು ದೂರದೃಷ್ಟಿಯ ಉದ್ಯಮಿ. ಇಂದಿನ ಕಮರ್ಷಿಯಲ್ ರಸ್ತೆಯ ಅರ್ಧ ಭಾಗದಷ್ಟು ಜಾಗವನ್ನು ಅವರು ಕೊಂಡಿದ್ದರು. (ಮುಂದೆ ಇದು ಏಳು ಜನ ಮಕ್ಕಳ ನಡುವೆ ಹಂಚಿ, ಕಡೆಗೆ ರೂಬೆನ್ ಶೂ ಅಂಗಡಿ ಮತ್ತು ಮನೆ ಮಾತ್ರ ಉಳಿಯಲಿತ್ತು). ಇಪ್ಪತ್ತನೇ ಶತಮಾನದ ಆರಂಭದಲ್ಲಿಯೇ ರೂಬೆನ್, ಇಂದಿನ ಕಮರ್ಷಿಯಲ್ ರಸ್ತೆಯಲ್ಲಿ 'ರೂಬೆನ್ ಮೋಸಸ್ ಅಂಡ್ ಸನ್ಸ್ ಶೂ ಅಂಗಡಿ'ಯನ್ನು ತೆರೆದರು. ಅದು ಅಂದಿಗೆ, ಏಷಿಯಾದಲ್ಲೇ ಅತಿ ದೊಡ್ಡ ಶೂ ಅಂಗಡಿಯಾಗಿತ್ತು.

೧೯೨೧ರಲ್ಲಿ ಕ್ಯಾವಲ್ರಿ ರಸ್ತೆಯಲ್ಲಿ ರೂಬೆನ್ ಅವರು ಮನೆ ಕಟ್ಟಿಸಿದರು. ಇಂದು 'ಈಸ್ಟನ್ ಲಾಡ್ಜ್' ಆಗಿರುವ ಈ ಮನೆ, ಇರಾಕಿನ 'ಕಸಪಾ' ಮನೆಗಳ ಶೈಲಿಯಲ್ಲಿದೆ. 'ಮೇನ್ ಗಾರ್ಡ್ ರಸ್ತೆ'ಯಲ್ಲಿರುವ 'ರೂಬೆನ್ ಹೌಸ್'ನಲ್ಲಿ ಬೂಟುಗಳು ತಯಾರಾಗುತ್ತಿದ್ದವು. ಈ ಕಾರ್ಖಾನೆಯ ಒಂದು ಹಜಾರದಂತಹ ಭಾಗವನ್ನು ರಾಮಾ ಮೋಸಸ್ ಪ್ರಾರ್ಥನಾ ಮಂದಿರವಾಗಿ ಪರಿವರ್ತಿಸಿದರು. ಬೆಂಗಳೂರಿನಲ್ಲಿ ಆಗ 'ಸಿನೆಗಾಗ್' ಇರಲಿಲ್ಲ. (ಈಗಲೂ ಇಲ್ಲ). ರಾಮಾ ಮೋಸಸ್ ಕೊಚಿನ್‌ನ 'ಸಿನೆಗಾಗ್'ನಿಂದ ಪವಿತ್ರ 'ಟೋರಾ' ತರಿಸಿದರು. ಬೈಬಲಿನ ಹಳೆಯ ಒಡಂಬಡಿಕೆಯ ಐದು ಅಧ್ಯಾಯಗಳಿರುವ 'ಟೋರಾ' ಯಹೂದಿಗಳ ಪವಿತ್ರ ಗ್ರಂಥ. ಪ್ರತಿ ಶುಕ್ರವಾರದ 'ಸಬಾತ್' ರಾತ್ರಿ, ರಾಮಾ ಮೋಸಸ್ ಅವರ ಮನೆ ತೆರೆದು ನಿಲ್ಲುತ್ತಿತ್ತು. ಧಾರ್ಮಿಕ ವಿಧಿ ವಿಧಾನದಲ್ಲಿ ಕತ್ತರಿಸಿದ 'ಕೋಶರ್' ಅಡುಗೆ ಸಿದ್ಧವಾಗುತ್ತಿತ್ತು. ದೇವರ ಪ್ರಾರ್ಥನೆ ಆರಂಭವಾಗುತ್ತಿತ್ತು. ಸಬಾತಿನ ರಾತ್ರಿ ಬೆಂಗಳೂರಿನ ಯಹೂದಿಗಳೆಲ್ಲ ಇಲ್ಲಿ ನೆರೆಯುತ್ತಿದ್ದರು. 'ರೂಬೆನ್ ಹೌಸ್'ಗೆ ಬಂದ 'ಸಂದರ್ಶಕರ ಪುಸ್ತಕ'ವೊಂದನ್ನು ಮೋಸಸ್ ಕುಟುಂಬ ಅತ್ಯಂತ ಜೋಪಾನವಾಗಿ ಕಾದಿರಿಸಿದೆ. ಅದರಲ್ಲಿ ಭಾರತದ ಮೂಲೆ ಮೂಲೆಯಿಂದ ಬಂದ ಯಹೂದಿಗಳ ಸಹಿ ಮತ್ತು ವಿಳಾಸವಿದೆ. ಜೊತೆಗೆ ಅಮೆರಿಕ, ಇಂಗ್ಲೆಂಡ್, ಪ್ಯಾಲೆಸ್ಟೈನ್ ಮುಂತಾದ ಅನೇಕ ದೇಶಗಳಿಂದ ಬಂದ ಯಹೂದಿಗಳ ಸಹಿಯೂ ಇದೆ. ಈ ಪುಸ್ತಕದಲ್ಲಿ ೨೬ ಸೆಪ್ಟೆಂಬರ್ ೧೯೪೬ರಂದು ಸರ್ ವೈಸ್‌ಮನ್ ಅವರು ಸಹಿ ಮಾಡಿದ್ದಾರೆ. ಅವರು ಬರೆದ ವಿಳಾಸ ಹೀಗಿದೆ : '೪, ಮೆಲ್ಚೆಟ್ ರಸ್ತೆ, ಹೈಫಾ, ಪ್ಯಾಲೆಸ್ಟೈನ್'. ಇಂದು 'ಪ್ಯಾಲೆಸ್ಟೈನ್ ಎಂಬ ನೆಲ ಇರಲೇ ಇಲ್ಲ' ಎಂದು ವಾದಿಸುವ ಇಸ್ರೇಲೀಯರ ದೇಶಕ್ಕೆ ಅಧ್ಯಕ್ಷರಾದ ವೈಸ್‌ಮನ್ ಅವರ ವಿಳಾಸದಲ್ಲಿ 'ಪ್ಯಾಲೆಸ್ಟೈನ್' ಪದ ವಿಪರ್ಯಾಸವಾಗಿ ನನಗೆ ಕಂಡಿತು.

* * *

ಮೈಸೂರು ರಸ್ತೆಯ ಯಹೂದಿಗಳ ರುದ್ರಭೂಮಿಯ ಹಿನ್ನೆಲೆಯೂ ಸಿಕ್ಕಿತು. ಒಂದು ಶತಮಾನಕ್ಕೂ ಹಿಂದೆಯೇ, ಮೈಸೂರು ಮಹಾರಾಜರ ಬಳಿ ಸುಬೇದಾರ್ ಸವ್ಗಾಂವ್ಕರ್ ಎಂಬ 'ಬೆನ್ ಇಸ್ರೇಲಿ' ಯಹೂದಿ, ಇಂಜಿನಿಯರ್ ಆಗಿ ಕೆಲಸ ಮಾಡುತ್ತಿದ್ದರು. ಅವರ ಕಾರ್ಯದಕ್ಷತೆಯನ್ನು ಮೆಚ್ಚಿಕೊಂಡ ಮೈಸೂರು ಮಹಾರಾಜರು, ಬೆಂಗಳೂರಿನ ಗೋರಿಪಾಳ್ಯಕ್ಕೆ ಅಂಟಿದಂತಿರುವ ಮೈಸೂರು ರಸ್ತೆಯಲ್ಲಿ 'ಯಹೂದಿಗಳ ರುದ್ರಭೂಮಿ'ಗೆ ಜಾಗವನ್ನು ನೀಡಿದ್ದರು.

ಅಂದು ಗೋರಿಪಾಳ್ಯದ ಆ ಯಹೂದಿ ಸಮಾಧಿಗಳು ನನ್ನೊಳಗೊಂದು ಕತೆಯನ್ನು ಹುಟ್ಟು ಹಾಕಿದ್ದವು. ಹಿಟ್ಲರನ ನೆಲದಿಂದ ಗಾಂಧಿಯ ನೆಲಕ್ಕೆ ಬಂದ ಪುಟ್ಟ ಯಹೂದಿ ಬಾಲೆಯ ಕತೆಯದು. ಎಂಟು ವರ್ಷಗಳಲ್ಲಿ ನಾನು ಕಂಡ ಯಹೂದಿಗಳ ಜಗತ್ತನ್ನು ಕಾದಂಬರಿಯಲ್ಲಿ ತೆರೆದಿಡಲು ಪ್ರಯತ್ನಿಸುತ್ತಿದ್ದೇನೆ. ಅಂದು ಹೊತ್ತಿ ಉರಿದಿತ್ತು ಜರ್ಮನಿ, ನಿಂತು ನೋಡಿತ್ತು ಜಗತ್ತು. ಇಂದು ಹಿಟ್ಲರ್ ಎಲ್ಲಿ ಬೇಕಾದರೂ ಹುಟ್ಟಬಲ್ಲ, ಜರ್ಮನಿಯಲ್ಲಿ, ಇಸ್ರೇಲಿನಲ್ಲಿ, 'ಅಹಿಂಸೆಯೇ ಪರಮ ಧರ್ಮ' ಎಂದು ಸಾರಿದ ಭಾರತದಲ್ಲೂ ಕೂಡ. 'ನಮ್ಮ ನಡುವೆ ಎಲ್ಲಿ ಕೂಡಾ ಹುಟ್ಟಿಬಿಡಬಲ್ಲ, ನಮ್ಮೊಳಗೇ ಜನಿಸಿಬಿಡಬಲ್ಲ ಹಿಟ್ಲರನನ್ನು ತಡೆಹಿಡಿವ ಹೊಣೆ ನಮ್ಮದು' ಎಂಬ ನಂಬಿಕೆಯ ಹಿನ್ನೆಲೆಯಲ್ಲಿ ಕಾದಂಬರಿ ಸಿದ್ಧವಾಗುತ್ತಿದೆ.

**ನೇಮಿಚಂದ್ರ**
ನಂ. ೪೦೧, ವಿಜಯ ಟವರ್ಸ್, ೨ನೇ ಮುಖ್ಯರಸ್ತೆ
ಆರ್.ಪಿ.ಸಿ. ಲೇಔಟ್, ವಿಜಯನಗರ ೨ನೇ ಹಂತ
ಬೆಂಗಳೂರು-೪೦

# ಜೀವವೈವಿಧ್ಯತೆಗೆ



# ಪರ್ವತಗಳ ಕೊಡುಗೆ

ಡಾ|| ಪಿ. ಶಿವರಾಮ ರೈ

ಪರ್ವತಗಳು ಪ್ರಾಚೀನ ಕಾಲದಿಂದಲೂ ಮನುಷ್ಯರ ಗಮನ ಸೆಳೆದಿವೆ. ಪ್ರಪಂಚದ ಹಲವಾರು ನಾಗರಿಕತೆಗಳು ಪರ್ವತಗಳನ್ನು ದೇವರ ನಿವಾಸವೆಂದು ಪರಿಗಣಿಸಿವೆ. ಸದೃಢ ಶಿಖರಗಳು ಆಕ್ರಮಣಕಾರರ ದಾಳಿಯಿಂದ ನಾಗರಿಕತೆಗಳನ್ನು ರಕ್ಷಿಸಿವೆ. ಪರ್ವತಗಳು ಋಷಿಮುನಿಗಳಿಗೆ ಆಧ್ಯಾತ್ಮಿಕ ಉನ್ನತಿಯನ್ನಿತ್ತಿವೆ. ಮಹಾ ಕಾವ್ಯಗಳು ಮತ್ತು ಶ್ರೇಷ್ಠ ಸಾಹಿತ್ಯಗಳ ರಚನೆಗೆ ಪ್ರೇರಣೆ ನೀಡಿವೆ. ಜೀವವಿಜ್ಞಾನದ ಉನ್ನತಮಟ್ಟದ ಸಂಶೋಧನೆಗಳಿಗೆ ಪರ್ವತಗಳ ರಮ್ಯನೋಟ ಆಧಾರವಾಗಿದೆ. ಸಾಗರಗಳನ್ನು ಹೊರತುಪಡಿಸಿದರೆ ಪರ್ವತಗಳೇ ಭೂಮಿಯ ಮೇಲಿನ ಶ್ರೇಷ್ಠ ಪರಿಸರ ವ್ಯವಸ್ಥೆಗಳಾಗಿವೆ.

**ಪರ್ವತಗಳ ಕೊಡುಗೆ**

ಜಗತ್ತಿನ ಸಿಹಿನೀರಿನ ಅವಶ್ಯಕತೆಯ ಅರ್ಧಕ್ಕಿಂತ ಹೆಚ್ಚಿನ ಭಾಗವನ್ನು ಪರ್ವತಗಳು ಪೂರೈಸುತ್ತವೆ. ಪರ್ವತಗಳು ಪ್ರಮುಖ ನದಿಗಳಿಗೆ ಉಗಮಸ್ಥಾನಗಳಾಗಿವೆ. ವಿಶಾಲವಾದ ನದೀ ಮುಖಜಭೂಮಿಗಳು ಪರ್ವತಗಳ ಸೃಷ್ಟಿಯಾಗಿವೆ. ನದಿಗಳು ಹೊತ್ತು ತಂದ ಮರಳು ಮತ್ತು ಫಲವತ್ತಾದ ಮಣ್ಣು ಆಹಾರ ಧಾನ್ಯಗಳ ಉತ್ಪತ್ತಿಯನ್ನು ಹೆಚ್ಚಿಸುತ್ತದೆ. ಸಮುದ್ರದಿಂದ ಆವಿಯಾಗುವ ನೀರಿನ ಹನಿಗಳನ್ನು ಪರ್ವತಗಳು ತಡೆಹಿಡಿದು ಮಳೆ ಸುರಿಸುತ್ತವೆ. ಹವಾಮಾನವನ್ನು ಕ್ರಮಬದ್ಧಗೊಳಿಸುತ್ತವೆ. ಗುಡ್ಡಬೆಟ್ಟಗಳು ಹಳ್ಳಿಹಳ್ಳಿಗಳ ಪರಿಸರ ವ್ಯವಸ್ಥೆಯನ್ನು ಸುಸ್ಥಿತಿಯಲ್ಲಿಡಲು ಸಹಕಾರಿಯಾಗುತ್ತವೆ.

**ಜೀವವೈವಿಧ್ಯತೆಯ ಭಂಡಾರ**

ಪ್ರಪಂಚದ ಶೇ. ೨೦ರಷ್ಟು ಭಾಗವನ್ನು ಆವರಿಸಿಕೊಂಡಿರುವ ಪರ್ವತಗಳು ಶೇ. ೧೦ರಷ್ಟು ಜನಸಂಖ್ಯೆಗೆ ಆಶ್ರಯ ನೀಡುತ್ತವೆ. ಪರಿಸರ ವ್ಯವಸ್ಥೆಯಲ್ಲಿ ಗುಡ್ಡಬೆಟ್ಟಗಳು, ಪರ್ವತಗಳು, ಮಳೆ-ಕಾಡು, ಹುಲ್ಲುಗಾವಲು, ತುಂದ್ರಾ, ಮರುಭೂಮಿ, ಬಂಡೆಗಳು, ಹಿಮಪ್ರವಾಹ ಇತ್ಯಾದಿ ಸೇರಿಕೊಂಡಿವೆ.

ಭಾರತದಲ್ಲಿ ಜೀವವೈವಿಧ್ಯತೆಯನ್ನೊಳಗೊಂಡ ಪೂರ್ವ ಹಿಮಾಲಯ ಮತ್ತು ಪಶ್ಚಿಮ ಘಟ್ಟಗಳೆಂಬ ಎರಡು ಪ್ರಮುಖ ಪರಿಸರ ವಲಯಗಳಿವೆ. ಇವು ಸ್ಥಳೀಯ ಪ್ರಭೇದಗಳನ್ನೊಳಗೊಂಡ ಅಮೂಲ್ಯ ಭಂಡಾರಗಳು. ವೈವಿಧ್ಯಮಯ ಸಸ್ಯ ಮತ್ತು ಪ್ರಾಣಿ ಸಂಕುಲಗಳ ಮೂಲಸ್ಥಾನಗಳು. ವಲಸೆ ಹೋಗುವ ಪ್ರಾಣಿಗಳಿಗೆ ಆಶ್ರಯ ತಾಣಗಳು.

ಪ್ರಪಂಚದಾದ್ಯಂತ ಮಿಲಿಯಗಟ್ಟಲೆ ಜನರು ತಮ್ಮ ಸಾಮಾಜಿಕ, ಆರ್ಥಿಕ ಅಭಿವೃದ್ಧಿಗಾಗಿ ಪರ್ವತ ಪ್ರದೇಶಗಳ ಅರಣ್ಯಗಳನ್ನು ಅವಲಂಬಿಸಿದ್ದಾರೆ. ಇಳಿಜಾರಿನಲ್ಲಿರುವ ಅರಣ್ಯಗಳು ಮಣ್ಣಿನ ಸವಕಳಿಯನ್ನು ಕಡಿಮೆ ಮಾಡಿ ನೆರೆ, ಭೂಕಂಡ, ಮಂಜುಗಡ್ಡೆಗಳನ್ನು ತಡೆಗಟ್ಟುತ್ತವೆ. ಆಹಾರ, ನಾರು, ಉರುವಲು, ಔಷಧಿ ಮೊದಲಾದ ವಸ್ತುಗಳನ್ನು ಒದಗಿಸುತ್ತವೆ.

ಪರ್ವತ ಪ್ರದೇಶಗಳ ಕಾಡುಗಳು ಸೂಕ್ಷ್ಮ ಹವಾಮಾನವನ್ನೊಳಗೊಂಡಿದ್ದು ಸಸ್ಯ ಮತ್ತು ಪ್ರಾಣಿ ಸಂಕುಲಗಳಿಂದ ಸಮೃದ್ಧವಾಗಿವೆ. ಪರ್ವತ ಪ್ರದೇಶಗಳಲ್ಲಿ ಪ್ರತಿಯೊಂದು ಪ್ರಭೇದವೂ ಪರಿಸರ ವ್ಯವಸ್ಥೆಯನ್ನು ಕಾಪಾಡುವಲ್ಲಿ ಮುಖ್ಯ ಪಾತ್ರ ವಹಿಸುತ್ತದೆ.

ಪರ್ವತ ಪ್ರದೇಶಗಳ ರಮ್ಯನೋಟ ಸಾಹಸ ಬಯಸುವ ಪ್ರವಾಸಿಗಳನ್ನು ಕೈ ಬೀಸಿ ಕರೆದು ಸ್ಫೂರ್ತಿ ನೀಡುತ್ತದೆ. ಶೀಘ್ರವಾಗಿ ಬೆಳೆಯುತ್ತಿರುವ ಪ್ರವಾಸಿ ,ತಾಣಗಳು ಸಂದರ್ಶಕರನ್ನು ದಿನನಿತ್ಯ ಆಕರ್ಷಿಸುತ್ತವೆ. ಪರ್ವತ ಪ್ರದೇಶಗಳಿಂದ ಇನ್ನಷ್ಟು ಸೌಲಭ್ಯಗಳನ್ನು ಪಡೆದುಕೊಳ್ಳುವ ಆಕಾಂಕ್ಷೆಯಿಂದ ಇಂದು ಅವುಗಳನ್ನು ಹಾನಿಗೆಡಹಲಾಗುತ್ತಿದೆ. ಅರಣ್ಯನಾಶವು ಮೈದಾನು ಪ್ರದೇಶ ಮತ್ತು ಕಣಿವೆಗಳಿಗೆ ಆಘಾತವುಂಟುಮಾಡುತ್ತಿದೆ.

ಜಾಗತಿಕ ಉಷ್ಣತೆಯ ಏರುವಿಕೆ ಮೊದಲು ಪರ್ವತ ಪ್ರದೇಶಗಳಲ್ಲಿ ಕಾಣಿಸಿಕೊಳ್ಳುತ್ತದೆ ಎಂದು ಅಧ್ಯಯನಗಳಿಂದ ತಿಳಿದುಬಂದಿದೆ. ಹಿಮ ಕರುಗುವಿಕೆಯಿಂದಾಗಿ ನೇಪಾಳ ಮತ್ತು ಭೂತಾನದ ಕೆಲವು ಸರೋವರಗಳಲ್ಲಿ ಅಧಿಕ ನೀರು ತುಂಬಿಕೊಂಡಿದೆ. ಅಭಿವೃದ್ಧಿ ಕಾರ್ಯಗಳಿಗಾಗಿ ಕಾಡು ಕಡಿಯುವುದು ಹೊಸ ಸಮಸ್ಯೆಗಳನ್ನು ಸೃಷ್ಟಿಸುತ್ತದೆ. ನಿತ್ಯಹರಿದ್ವರ್ಣದ ಕಾಡುಗಳನ್ನು ಕಡಿದು ವಾಣಿಜ್ಯ ಬೆಳೆಗಳನ್ನು ಬೆಳೆಸಲಾಗುತ್ತಿದೆ. ಕೆಲವು ಕಡೆ ಶೀಘ್ರವಾಗಿ ಬೆಳೆಯುವ ಅಕೇಶಿಯ, ನೀಲಗಿರಿ, ಸರ್ವೆ ಮರಗಳನ್ನು ನೆಡಲಾಗುತ್ತಿದೆ. ಜೀವವೈವಿಧ್ಯತೆಯ ನಾಶ ಪರಿಸರ, ನೀತಿಶಾಸ್ತ್ರ, ಆರ್ಥಿಕ ಮತ್ತು ಆರೋಗ್ಯದ ಮೇಲೆ ಕೆಟ್ಟ ಪರಿಣಾಮ ಬೀರುತ್ತದೆ.

ಪ್ರವಾಸೋದ್ಯಮದ ಶೇ. ೧೫ರಿಂದ ೨೦ ಪಾಲು ಈಗ ಬೆಟ್ಟ ಪ್ರದೇಶಗಳ ಸಂದರ್ಶನಕ್ಕೆ ಸೀಮಿತವಾಗಿದೆ. ಯಾತ್ರಾರ್ಥಿಗಳ ತಂಡ ಪುಣ್ಯಕ್ಷೇತ್ರಗಳನ್ನು ಮುತ್ತುತ್ತಿದೆ. ಪ್ರವಾಸಿಗಳು ಎಸೆದ ಕಸದ ರಾಶಿ ಹಿಮಾಲಯವನ್ನೂ ಆವರಿಸಿಬಿಟ್ಟಿದೆ. ಪ್ರವಾಸೋದ್ಯಮ ಗುಡ್ಡಗಾಡು ಜನರ ದೈನಂದಿನ ಚಟುವಟಿಕೆಗಳನ್ನು ಪರಾಧೀನಗೊಳಿಸಿದೆ.

**ಪರ್ವತ ಪ್ರದೇಶಗಳ ನಿರಂತರ ಅಭಿವೃದ್ಧಿ**

ಪರ್ವತ ಪ್ರದೇಶಗಳ ಅಭಿವೃದ್ಧಿಯ ಕುರಿತು ಮಾತುಕತೆಗಳು ಸಭೆ, ಸಮ್ಮೇಳನಗಳಲ್ಲಿ ನಡೆಯುತ್ತವೆ. ಈ ಕುರಿತು ಕೆಲವು ಕಾರ್ಯಕ್ರಮಗಳನ್ನೂ ಕೈಗೊಳ್ಳಲಾಗಿದೆ. ಈ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವುದರಲ್ಲಿ ಕೆಲವು ಗೊಂದಲಗಳಿವೆ. ಪರ್ವತ ಪ್ರದೇಶಗಳಲ್ಲಿ ಅರಣ್ಯಗಳನ್ನು ನಾಶಮಾಡಿ ಬಯಲು ಪ್ರದೇಶಗಳಲ್ಲಿ ಗಿಡಗಳನ್ನು ನೆಡಲಾಗುತ್ತಿದೆ. ಅಣೆಕಟ್ಟುಗಳಿಗೆ ಪ್ರಾಶಸ್ತ್ಯ ನೀಡಿ ನೀರಿನ ಮೂಲಗಳ ಅಭಿವೃದ್ಧಿಯತ್ತ ಗಮನ ಹರಿಸಲಾಗುವುದಿಲ್ಲ.

೨೦೦೨ನೇ ಇಸವಿಯನ್ನು 'ಅಂತಾರಾಷ್ಟ್ರೀಯ ಪರ್ವತಗಳ ವರ್ಷ' ಎಂದು ಸಾರಲಾಗಿತ್ತು. ಬೆಟ್ಟ ಪ್ರದೇಶಗಳ ಜನರನ್ನು ಸ್ಥಳಾಂತರಗೊಳಿಸದೆ, ಅರಣ್ಯಗಳನ್ನು ನಾಶಪಡಿಸದೆ, ಅಭಿವೃದ್ಧಿ ಕಾರ್ಯಗಳು ಸಾಗಬೇಕಾಗಿವೆ. ಇದು ನನಸಾದರೆ ಪರ್ವತ ಪ್ರದೇಶಗಳ ಮಿಲಿಯಗಟ್ಟಲೆ ಜನರ ಜೀವನಕ್ಕೆ ಸ್ಫೂರ್ತಿ ನೀಡಿದಂತಾಗುವುದು.



ಡಾ|| ಪಿ. ಶಿವರಾಮ ರೈ
೩೦೩, ಕ್ಯಾಸೆಲ್ ಅಪಾರ್ಟ್‌ಮೆಂಟ್,
ಕೆನರಾ ಕ್ಲಬ್ ಎದುರು, ಕದ್ರಿ ಕಂಕನಾಡಿ,
ಮಂಗಳೂರು - ೫೭೫ ೦೦೨



# ಒಂದು ಮೌಲಿಕ ಅಧ್ಯಯನ




ಲೇಖಕರು : ಡಾ|| ಕೃಷ್ಣ ಕೊಲ್ಹಾರಕುಲಕರ್ಣಿ
ಪುಟ : ೩೫೬ ಬೆಲೆ ರೂ. ೨೦೦/-
ಸಿಕ್ಯಾಬ ಆದಿಲಶಾಹಿ ಅಧ್ಯಯನ ಸಂಸ್ಥೆ, ಬಿಜಾಪುರ.

**ಬಿ**ಜಾಪುರ ಆದಿಲಶಾಹಿ ಸಾಮ್ರಾಜ್ಯದ ರಾಜಕೀಯ, ಸಾಂಸ್ಕೃತಿಕ, ಸಾಮಾಜಿಕ, ಮತ್ತು ಇತಿಹಾಸದ ಕುರಿತು ಅಧಿಕೃತವಾಗಿ ಮಾತನ್ನಾಡುವವರು, ಆಳವಾಗಿ ಸಂಶೋಧಿಸಿ ಈ ಪುಸ್ತಕ ಪ್ರಕಟಿಸಿದವರು ಬಿಜಾಪುರದವರೇ ಆದ ಡಾ|| ಕೃಷ್ಣ ಕೊಲ್ಹಾರಕುಲಕರ್ಣಿಯವರು. ಹಗಲಿರುಳೂ ಈ ಕಾರ್ಯಕ್ಕಾಗಿ ಶ್ರಮಿಸುತ್ತಿದ್ದಾರೆ. ಖ್ಯಾತ ಸಂಶೋಧಕರಾದ ಡಾ|| ಅ. ಸುಂದರರು ಹೇಳುವಂತೆ "ಆದಿಲಶಾಹಿ ಅರಸು ಮನೆತನ ವಿಷಯದ ಅಧ್ಯಯನ ಕ್ಷೇತ್ರದಲ್ಲಿ ಇದೊಂದು ವಿಶಿಷ್ಟ ಮೌಲಿಕ ಗ್ರಂಥವಾಗಿದೆ. ಆದಿಲಶಾಹಿ ಅರಸು ಮನೆತನದ ಇತಿಹಾಸ ಸಂಸ್ಕೃತಿಯ ಮುಖ್ಯಾಂಶಗಳು ಇಂದಿಗೂ ನಮಗೂ, ಕ್ಷುಬ್ಧ ಪರಿಸ್ಥಿತಿಯಲ್ಲಿರುವ ನಮ್ಮ ಸಮಾಜಕ್ಕೂ ಮಾದರಿಯಾಗಬಹುದು. ವಿಶಿಷ್ಟ ನಿರೂಪಣಾಶೈಲಿ ಆಸಕ್ತಿಯನ್ನುಂಟು ಮಾಡುವಂತಿದೆ. ಅವರ ಆಳ ವ್ಯಾಪಕ ಅಧ್ಯಯನಕ್ಕೆ ಈ ಪುಸ್ತಕ ಸಾಕ್ಷಿಯಾಗಿದೆ."

ಪುಸ್ತಕ ಸುಂದರವಾಗಿದ್ದು ಆಕರ್ಷಕವಾಗಿದೆ. ಮುಖಪುಟದಲ್ಲಿ ತರುಣ ಎರಡನೆಯ ಇಬ್ರಾಹಿಮ ಆದಿಲಶಾಹಿಯ ಜಲವರ್ಣ ಚಿತ್ರವಿದೆ. ಒಳಪುಟಗಳಲ್ಲಿ ಇನ್ನುಳಿದ ಎಲ್ಲಾ ಆದಿಲಶಾಹಿಗಳ ವರ್ಣಚಿತ್ರ, ಅವರು ನಿರ್ಮಿಸಿದ ಕೆಲ ವಾಸ್ತುಶಿಲ್ಪ ಒಳಗೊಂಡಿದೆ. ಒಟ್ಟು ಹತ್ತು ಅಧ್ಯಾಯಗಳಲ್ಲಿ ಕಥಾ ಹಂದರವಿದೆ. ದಕ್ಷಿಣ ಭಾರತದಲ್ಲಿ ಮಹಮ್ಮದೀಯರ ಪ್ರವೇಶ ಮತ್ತು ಬಹಮನಿ ರಾಜ್ಯ ಸ್ಥಾಪನೆ, ಆದಿಲಶಾಹಿ ರಾಜ್ಯ ಸ್ಥಾಪನೆ, ಆದಿಲಶಾಹಿ ವೈಭವ ಅವನತಿ, ಸಮುದಾಯ ಪರಿಸ್ಥಿತಿ, ಭಾಷೆ ಸಾಹಿತ್ಯ ಮತ್ತು ಶಾಸನ ಸಾಹಿತ್ಯ, ವರ್ಣ ಚಿತ್ರಕಲೆ, ಸಂಗೀತ ಮತ್ತು ಶಿಕ್ಷಣ, ವಾಸ್ತುಶಿಲ್ಪ, ಶಾಹಿ ವಂಶಾವಳಿ ಪರಿಭಾಷೆ – ಶಬ್ದಗಳು, ಹೀಗೆಲ್ಲವುಗಳ ವಿವರಣೆ ಇದರಲ್ಲಿದೆ. ಮಧ್ಯಯುಗೀನ ಭಾರತದ, ಅದರಲ್ಲೂ ವಿಶೇಷವಾಗಿ ಕರ್ನಾಟಕದ, ಚರಿತ್ರೆ ಪೂರ್ತಿಗೊಳ್ಳಬೇಕಾದರೆ ಬಿಜಾಪುರದ ಆದಿಲಶಾಹಿಗಳ ಚರಿತ್ರೆಯನ್ನು ಅಭ್ಯಸಿಸಲೇ ಬೇಕಾಗುತ್ತದೆ. ಕ್ರಿ.ಶ. ೧೪೮೯ರಿಂದ ೧೬೮೬ರವರೆಗೆ ಎರಡುನೂರು ವರ್ಷ ಕಾಲ ದಕ್ಷಿಣ ಭಾರತದ ಬಹುಭಾಗವನ್ನು ಆಳುತ್ತಿದ್ದ ಆದಿಲಶಾಹಿಗಳು ಇಲ್ಲಿಯ ನೆಲ, ಜಲ ಮತ್ತು ಜನತೆಯ ಮೇಲೆ ಅಚ್ಚಳಿಯದ ಪ್ರಭಾವವನ್ನು ಬೀರಿದ್ದಾರೆ. ಹಾಗಾಗಿ ಕಲೆ ಸಾಹಿತ್ಯ ಸಂಗೀತ ವಾಸ್ತುಶಿಲ್ಪ ಹೀಗೆ ಎಲ್ಲದರ ಮೇಲೂ ಆದಿಲಶಾಹಿಗಳ ಛಾಪು ಇದೆ. ಈಗಾಗಲೇ ಬಿಜಾಪುರ ಕುರಿತಾದ ಇತಿಹಾಸ ಪ್ರಸಿದ್ಧವಿದೆ. ಸ್ಥಾಪಕ ಯೂಸುಫಖಾನ ಬಿಜಾಪುರದಲ್ಲಿ ತನ್ನ ಸ್ವಂತದ ರಾಜ್ಯ ಪ್ರಾರಂಭಿಸುವ ಹೊತ್ತಿಗೆ ವಿಜಯನಗರ ತನ್ನ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಬಿಜಾಪುರ ಪುಟ್ಟ ಸಂಸ್ಥಾನವಾಗಿತ್ತು. ಮುಂದಿನ ಇಸ್ಮಾಯಿಲ್, ಪ್ರಥಮ ಇಬ್ರಾಹಿಮರು ಆಗೀಗ ಶಾಹೀ ರಾಜರುಗಳೊಂದಿಗೆ, ವಿಜಯನಗರದವರೊಂದಿಗೆ ಯುದ್ಧ ಮಾಡಿ ಸಿಕ್ಕಷ್ಟನ್ನು ಪಡೆಯುತ್ತಿದ್ದರು. ಹೀಗೆ ಮುಕ್ಕಾಲು ಶತಮಾನ ಕುಂಟುತ್ತ ಸಾಗಿದ ಆದಿಲಶಾಹಿ ರಾಜ್ಯದ ದೈವ ತೆರೆದದ್ದು ರಕ್ಕಸಗಿ-ತಂಗಡಗಿಯ ಕ್ರಿ.ಶ. ೧೫೬೫ರ ಘನಘೋರ ಕಾಳಗದಲ್ಲಿ. ಆಗ ಆದಿಲಶಾಹಿ ರಾಜ್ಯದ ಅಭ್ಯುದಯದ ಆರಂಭವಾಯ್ತು. ಇದರ ರೂವಾರಿ ಮೊದಲ ಅಲಿ ಆದಿಲಶಾಹ. ರಾಜ್ಯದ ವಿಸ್ತಾರವಾಯಿತು.

ಎರಡನೆಯ ಅಲಿ ಆದಿಲಶಹನ ಸಮಯದಲ್ಲಿ ಅವನತಿಗೆ ಪ್ರಾರಂಭಗೊಂಡು, ಈತನ ಮಗ ಸಿಕಂದರನ ಕಾಲಕ್ಕೆ ಔರಂಗಜೇಬನ ವಶವಾಯಿತು. ಆಗ್ಗೆ ರಾಜ್ಯ ಅತ್ಯಂತ ಹೀನಾಯ ಸ್ಥಿತಿಯಲ್ಲಿತ್ತು.

ವಿಜಯನಗರ ಪತನಕ್ಕೆ ಪೂರ್ವ ಬಿಜಾಪುರಕ್ಕೆ ಆಗಮಿಸಿದ ಜೇಸುಯಿಟ್ ಪಾದ್ರಿಯೊಬ್ಬರು ಕಂಡ ಬಿಜಾಪುರ – "ಬಹುತೇಕ ಜನರು ಹಳೆಯ ಹಾಗೂ ಹರಿದ ಗುಡಿಸಲುಗಳಲ್ಲಿ ವಾಸಿಸುತ್ತಾರೆ. ಇಡೀ ಊರ ತುಂಬ ಹುಡುಕಾಡಿದರೆ ಕೇವಲ ಹತ್ತೆಂಟು ಮನೆಗಳು ಮಾತ್ರ ಗಟ್ಟಿಮುಟ್ಟಾಗಿದ್ದವೆಂದು ಹೇಳಬಹುದು. ಆದರೂ ನಗರವು ಗೋವೆ ಪಟ್ಟಣಕ್ಕಿಂತ ದೊಡ್ಡದಾಗಿದೆ. ನಗರದ ತುಂಬೆಲ್ಲ ಮುಸ್ಲಿಮರಿದ್ದಾರೆ."

ಮುಂದಿನ ನಲವತ್ತು ವರ್ಷಗಳಲ್ಲಿ ಅಂದರೆ ಕ್ರಿ.ಶ. ೧೬೦೪ರಲ್ಲಿ ಮೊಗಲ ರಾಯಭಾರಿ ಅಸದಬೇಗನು ಎರಡನೆಯ ಇಬ್ರಾಹಿಮ ಆದಿಲಶಹನ ಆಸ್ಥಾನಕ್ಕೆ ಭೆಟ್ಟಿ ಕೊಟ್ಟಾಗ ಹೀಗೆ ಬರೆದಿದ್ದಾನೆ – "ನಾನು ಇಳಿದುಕೊಂಡಿದ್ದ ಸ್ಥಳದ ಸುತ್ತಮುತ್ತಲೂ ಹೊರಂಗಳವಿದ್ದ ಉಪ್ಪರಿಗೆಯ ಮನೆಗಳಿದ್ದವು. ವಾತಾವರಣ ಆರೋಗ್ಯಕರವಾಗಿದ್ದಿತು. ನಾಲ್ಕು ಮೈಲು ಉದ್ದ ನಾಲ್ವತ್ತು ಅಡಿ ಅಗಲವಾದ ಪೇಟೆ ಇತ್ತು. ಪ್ರತಿಯೊಂದು ಅಂಗಡಿಯ ಎದುರಿಗೂ ಸುಂದರ ಹಸಿರು ಗಿಡಗಳಿದ್ದವು. ಇತರತ್ರ ಕಾಣದಂತೆ ಅಲ್ಲಿಯ ಪೇಟೆ ಸ್ವಚ್ಛವೂ ಸುಂದರವೂ ಆಗಿತ್ತು. ಪೇಟೆಗಳಲ್ಲಿ ಜವಳಿ ಅಂಗಡಿಗಳು, ರತ್ನದ ಅಂಗಡಿಗಳು, ಶೆರೆ ಅಂಗಡಿಗಳು, ಮೀನದ ಅಂಗಡಿಗಳು ಇತ್ಯಾದಿಯಾಗಿ ಅಸಂಖ್ಯ ಅಂಗಡಿಗಳಿದ್ದವು. ನೃತ್ಯ ಹಾಗೂ ಸಂಗೀತದ ಕಚೇರಿಗಳೂ ಅಲ್ಲಿ ನಡೆಯುತ್ತಿದ್ದವು. ರತ್ನಾಭರಣಗಳಿಂದ ಅಲಂಕೃತರಾದ ಕಡು ಕೆಂಪು ವರ್ಣದ ಸುಂದರ ಮುಖದ ತರುಣಿಯರು ಬಂದವರ ಇಚ್ಛೆಯನ್ನು ಪೂರ್ತಿಗೊಳಿಸಲು ಸದಾ ಸಿದ್ಧರಾಗಿದ್ದರು."...

ಇಂಥ ವೈಭವದ (?) ತುತ್ತ ತುದಿಯಲ್ಲಿಯ ಬಿಜಾಪುರ ಸಿಕಂದರ ಆದಿಲಶಾಹಿಯ ಕಾಲದಲ್ಲಿ ತುಂಬ ಹದಗೆಟ್ಟಿತ್ತು. ಆದಿಲಶಾಹಿಗಳ ಅಸ್ತಿತ್ವವನ್ನೇ ಅಲುಗಾಡಿಸುತ್ತಿದ್ದ ಮೊಗಲರು-ಮರಾಠರು ಒಂದೆಡೆಯಾದರೆ, ರಾಜಧಾನಿಯಲ್ಲೆ ಹಲವಾರು ಬಣಗಳು, ರಾಜ್ಯಪಾಲರಲ್ಲಿಯ ಜಗಳ, ಬಡಿದಾಟ, ನಿರಂತರ ಯುದ್ಧ ಕಪ್ಪ-ಕಾಣಿಕೆಗಳೆಲ್ಲ ರಾಜ್ಯದ ಭಂಡಾರವನ್ನೇ ಸೂರೆ ಮಾಡಿದವು. ಶಿವಾಜಿಯ ಗೆಲುವು, ಒಂದರ ಮೇಲೊಂದು ಕೋಟೆಗಳ ವಶ. ಇವುಗಳಿಂದ ಬಿಜಾಪುರವು ತತ್ತರಿಸಿತು. ಖವಾಸಖಾನನ ಕೊಲೆಯಿಂದ ರಾಜ್ಯದಲ್ಲಿ ಬಂಡಾಯವೆದ್ದಾಗ, ಒಂದೆಡೆ ಶಿವಾಜಿ ಇನ್ನೊಂದೆಡೆ ಮೊಗಲರು ಆದಿಲಶಾಹಿಗಳ ಸರ್ವನಾಶಕ್ಕೆ ಸಿದ್ಧರಾಗಿದ್ದರು. ಔರಂಗಜೇಬನು ಸ್ವತಃ ಮುತ್ತಿದನು. ಆದಿಲಶಾಹಿ ರಾಜ್ಯ ಉಳಿಯದೆಂದು ಸಿಕಂದರನಿಗೂ, ಶಾರ್ಜಾಖಾನನಿಗೂ ನಿಶ್ಚಯವಾಯಿತು. ೧೩ ಸೆಪ್ಟೆಂಬರ್ ೧೬೮೬ ಸಿಕಂದರ ಆದಿಲಶಹನು ಔರಂಗಜೇಬನ ಕೈದಿಯಾದ. ದಕ್ಷಿಣ ಭಾರತವನ್ನು ಗೆಲ್ಲಬೇಕೆಂಬ ಔರಂಗಜೇಬನ ಕನಸು ನನಸಾಗಿತ್ತು. ಬಿಜಾಪುರ ಪತನಹೊಂದಿ ಶಾಹಿ ಅಸ್ತಿತ್ವ ಹೋಯಿತು. ಇವೆಲ್ಲವುಗಳ ಜೊತೆಗೇ ಈ ಪುಸ್ತಕದಲ್ಲಿ, ಶಾಹಿ ಕಾಲದ ಆಡಳಿತ, ಧಾರ್ಮಿಕ ಪರಿಸ್ಥಿತಿ, ಸೂಫಿಗಳು-ಸಂತರು, ಸಾಹಿತ್ಯ, ಫರ್ಮಾನು-ಸನದುಗಳು, ಉಡುಗೆ-ಊಟ-ವಸತಿ-ಜನಸಾಮಾನ್ಯರ ಸ್ಥಿತಿಗತಿ, ಉದ್ಯೋಗ-ವ್ಯವಸಾಯ, ನಾಣ್ಯಗಳು, ಪ್ರಚಲಿತ ಭಾಷೆಗಳು, ಪಂಡಿತರು-ಕವಿಗಳು, ಬಜಾರುಗಳು, ಶಿಲಾಶಾಸನ, ಸಾಹಿತ್ಯ, ಶಿಕ್ಷಣ, ಸಂಗೀತೋತ್ಸವ, ವಾಸ್ತುಶಿಲ್ಪ, ನೀರಿನ ವ್ಯವಸ್ಥೆ, ವಂಶಾವಳಿ, ದಕ್ಷಿಣ ಭಾರತದಲ್ಲಿ ಮುಸ್ಲಿಮರು, ಇವೆಲ್ಲವುಗಳನ್ನು ವಿವರವಾಗಿ ಸಾಧಾರದೊಂದಿಗೆ ತಿಳಿಸಿದ್ದಾರೆ.

ಆಶ್ಚರ್ಯವೆಂದರೆ ಹಿಂದು-ಮುಸ್ಲಿಮರ ಮಧ್ಯೆ ನಡೆದ ದಂಗೆ ಲೂಟಿ ಸಾವು-ನೋವುಗಳ ದಾಖಲೆಗಳಿಲ್ಲ.

[illegible]

ಆದರೆ ಇದೇ ಇತಿಹಾಸಕಾರರು ಶಿಯಾ-ಸುನ್ನಿಗಳ ಮಧ್ಯದ ಬಡಿದಾಟವನ್ನು ಅನೇಕಸಲ ದಾಖಲಿಸಿದ್ದಾರೆ. ಹಿಂದು - ಮುಸ್ಲಿಮ್ ಪರಸ್ಪರ ಸಹಬಾಳುವೆಯ ದ್ಯೋತಕವಾಗಿದೆ.

ಸ್ವತಃ ಇಬ್ರಾಹಿಮ ಆದಿಲಶಹನೇ "ಜಗದ್ಗುರು" ವಾಗಿ ಸರಸ್ವತಿಯನ್ನು ಆರಾಧಿಸಿದ್ದಾನೆ. ಈತನ ಸಂದೇಶವೇ

– "ಭಾಕಾನ್ಯಾರೀ ನ್ಯಾರೀ ಭಾವ ಏಕಕಹಾ ತುರುಕ-ಕಹಾ ಬರಹಾಮನ

ಉತ್ತಮ ಭಾಗನೀಕೋಸೋ ಸೋಹೀಜಾ ಸರಸುತೀಹು ಈ ಪ್ರಸನ್ನ ಇಬ್ರಾಹಿಮ ಸೊಂಸಾರ ಚಾಹೆ ವಿದ್ಯಾಸಬದ ಗುರುಸೇವಾ – ಜಪಕರ ಏಕಮನ।"... ಇದಾಗಿದೆ. ಮೊದಲನೆಯ ಇಬ್ರಾಹಿಮ ಆದಿಲಶಹನು ಸ್ಥಳೀಯ ಭಾಷೆಯನ್ನು ಆಡಳಿತದಲ್ಲಿ ಜಾರಿಗೆ ತಂದನು.

ನ್ಯಾಯ ನೀಡುವಲ್ಲಿ ಹಿಂದು ಮುಸ್ಲಿಮರ ಮಧ್ಯೆ ತಾರತಮ್ಯವಿರಲಿಲ್ಲ.

ಇವರ ಕಾಲದಲ್ಲಿ ಅನೇಕ ಕವಿ ಸಾಹಿತಿ - ಚರಿತ್ರೆಕಾರರು ದೇಶ-ವಿದೇಶಗಳಿಂದ ಬಂದು ನೆಲೆಸಿದ್ದರಲ್ಲದೆ ಅರಮನೆಯಲ್ಲಿ ಒಂದು ದೊಡ್ಡ ಗ್ರಂಥಾಲಯವೂ ಇತ್ತು. ಆಸ್ಥಾನದಲ್ಲಿ ಹಲವಾರು ಪಂಡಿತ-ವಿದ್ವಾಂಸರುಗಳು ಇದ್ದರು. ಮತ್ತು ಅವರು ವಿವಿಧ ವಿಷಯಗಳಲ್ಲಿ ಗ್ರಂಥ ರಚಿಸುತ್ತಿದ್ದರು. ಅವೆಲ್ಲ ವಿವಿಧ ಭಾಷೆಗಳಲ್ಲಿವೆ. ಪರ್ಷಿಯನ್, ಅರ್‍ಯಾಬಿಕ್ ಮತ್ತು ಸ್ಥಳೀಯ ಭಾಷೆಗಳಲ್ಲಿ ಅಲ್ಲದೆ ಇವುಗಳೆಲ್ಲದರ ಮಿಶ್ರಣದಿಂದ ಉಂಟಾದ ಹೊಸ ಭಾಷೆಯಲ್ಲಿ ವಿಶ್ವಮಾನ್ಯ ಕೃತಿಗಳು ರಚಿತವಾಗಿವೆ ಎಂಬುದು ವಿಶೇಷವಾಗಿದೆ.

ಎರಡನೆಯ ಅಲಿ ಆದಿಲಶಹನು ದಖಣಿಯಲ್ಲಿ ಶ್ರೇಷ್ಠ ಕವಿಯಾಗಿದ್ದನು. ಪರ್ಷಿಯನ್ ಕವಿಗಳಿಗೂ-ವಿದ್ವಾಂಸರಿಗೂ ಆಶ್ರಯವನ್ನು ನೀಡಿದ್ದನು.

ಎರಡನೆಯ ಇಬ್ರಾಹಿಮ ಆದಿಲಶಹನ ಆಸ್ಥಾನದಲ್ಲಿದ್ದ ಕವಿ ಅಬ್ದುಲ್ಲಾ ದೇಹಲವಿ "ಇಬ್ರಾಹಿಮ ನಾಮಾ" ಕಥನ ಕಾವ್ಯ ರಚಿಸಿದ್ದು ಇದರಲ್ಲಿ ಬಿಜಾಪುರ ನಗರ ವೈಭವವನ್ನು ಹೀಗೆ ವರ್ಣಿಸುತ್ತಾನೆ.

"ವಿದ್ಯಾಪುರ ನಗರ ಹೈಭಿ ಉಸಕೊ ಜೋ ನಾವೂ ಸುನೋ ಅಬಸಿಫತ । ಶಹರಹನ ತಖ್ತ ಠಾವೂ ಕಿ ಧನ ಉಸ ಜಮೀನ ಠಾವೂ ಹೈ ತಖ್ತ ಭರ ಬಸ್ಯಾ ಸೀಸ ಜಿಸಕೆ ವಿದ್ಯಾಪೂರ ನಗರ ॥"

ಬಿಜಾಪುರದ ವರ್ಣನೆಯಲ್ಲಿ ಅಲ್ಲಿಯ ಕೋಟೆ-ಕೊತ್ತಲಗಳು ಮಹಲು ಬಜಾರುಗಳು ಇತ್ಯಾದಿಗಳ ಚಿತ್ರ ಸುಂದರವಾಗಿ ಬಂದಿದೆ. ರಾಜನ ದರ್ಬಾರು ಆತನ ಆಶ್ರಯದಾತರು ಕವಿಸಾಹಿತಿಗಳು ಆತನ ದಿಕ್-ದಿಗಂತಗಳ ಕೀರ್ತಿ ಆತನಿಗಿರುವ ಜಗದ್ಗುರು ಉಪಾಧಿ ಆತನ ಆಸ್ಥಾನವೆಂದರೆ ಇಂದ್ರನ ಆಸ್ಥಾನವೂ ಅದಕ್ಕೆ ಸಮವಿಲ್ಲ.

"ಇಂದರ ಏಕ ಅಂಭರಾವತೀ ರಹನಥಾರ
ವಿದ್ಯಾಪುರ ನಗರ ಶಹವೈಸೆ ಭಪಹಜಾರ।"

ಇವರ ಆಸ್ಥಾನದಲ್ಲಿ ಮುನ್ನೂರಕ್ಕಿಂತ ಹೆಚ್ಚಿಗೆ ಸೂಫಿಸಂತರಿದ್ದರು.

ಆದಿಲಶಾಹಿಗಳ ಕಾಲದಲ್ಲಿ ಚಿಕಣ ಚಿತ್ರಕಲೆಯು ಬೆಳೆದಿತ್ತು. ಲಲಿತ ಕಲೆಗಳಲ್ಲಿ ಆಸಕ್ತರು. ವಾಸ್ತುಶಿಲ್ಪದ ಪ್ರತೀಕವಾಗಿ ಅವರ ಅದ್ಭುತ ಅವಶೇಷಗಳು ಉಳಿದಿವೆ. ಇಂದು ಪ್ರಪಂಚದಲ್ಲೆಲ್ಲ ಪ್ರಸಿದ್ಧಿ ಹೊಂದಿದ ಕ್ರಿ.ಶ. ೧೫೭೦ ರಲ್ಲಿ ರಚಿತ ಚಿತ್ರ "ನಂಜುಮ್-ಉಲ್-ಉಲುಮ್" ಬಿಜಾಪುರದ ಚಿತ್ರಕಲೆಯ ಮೊದಲ ಕೃತಿ. ತಮ್ಮದೇ ಸ್ವತಂತ್ರ ಶೈಲಿಯನ್ನು ರೂಢಿಸಿಕೊಂಡಿದ್ದವು. ಅತ್ಯಂತ-ಹಳೆಯ ಬಿಜಾಪುರ ಶೈಲಿಯ ರಾಗಮಾಲಿಕಾ ಚಿತ್ರಗಳು ಪ್ರಸಿದ್ಧಿಯಾದವು. ಭಿತ್ತಿ ಚಿತ್ರಗಳು ಇನ್ನೂ ಇವೆ. ಇಲ್ಲಿಯ 'ವಾಸ್ತುಶಿಲ್ಪ'ದಲ್ಲಿಯ ಸೌಂದರ್ಯ ಪ್ರಜ್ಞೆಹಾಗೂ ನವೀನ ರೀತಿಯ ರಚನಾ ವಿಧಾನ ದಕ್ಷಿಣ ಭಾರತದಲ್ಲಷ್ಟೇ ಅಲ್ಲ ಇಡೀ ದೇಶದಲ್ಲೇ ತನ್ನ ಸ್ಥಾನ ಭದ್ರವಾಗಿಸಿಕೊಂಡಿದೆ.

ಕನ್ನಡದಲ್ಲಿ ಇಂಥದ್ದೊಂದು ಪುಸ್ತಕದ ಕೊರತೆಯಿತ್ತು. ಅದನ್ನು ಲೇಖಕರು ತುಂಬಿಕೊಟ್ಟು ಕನ್ನಡಿಗರ ಚಿರಋಣಿಯಾಗಿದ್ದಾರೆ. ಜೊತೆಗೇ ತಮ್ಮ ಹೆಜ್ಜೆ ಗುರುತನ್ನೊಂದು ಇತಿಹಾಸ - ಸಂಶೋಧನೆಯಲ್ಲಿ ಶಾಶ್ವತವಾಗಿರಿಸಿದ್ದಾರೆ.

**ಹಣಮಂತ ತಾಸಗಾಂವಕರ**
ಸುಧನ್ವ, ೫ನೇ ಮುಖ್ಯರಸ್ತೆ, ಎಫ್. ಅಡ್ಡರಸ್ತೆ, ಸೆಕ್ಟರ್ ನಂ. ೧೮
ಪ್ಲಾಟ್ ನಂ. ೨೫, ನವನಗರ, ಬಾಗಲಕೋಟ - ೫೮೭ ೧೦೧

# ಬೆಂಗಳೂರಿನ ಚಾಣಾಕ್ಷ ದೇವರುಗಳು

ದೇವರಲ್ಲಿ ನಂಬುಗೆ ಇಡಲು ಅಡ್ಡಿಯಿಲ್ಲ. ಆದರೆ ದೇವರುಗಳು ಬೇರೆ, ದಿಢೀರ್ ಹುಟ್ಟಿಕೊಳ್ಳುವ ದೇವರುಗಳು ಬೇರೆ.

ಈರಪ್ಪ ಎಂ. ಕಂಬಳಿ

**ಮಾ**ತಿಗೆ ಮೊದಲು 'ದೇವರೇ ದೇವರೇ' ಅನ್ನುವ, 'ಮನುಷ್ಯನ ಎಲ್ಲ ಯಶಸ್ಸುಗಳಿಗೆ ಸುಖ ಸವಲತ್ತುಗಳಿಗೆ ದೇವರು ಕಣ್ಣು ಬಿಟ್ಟರೇನೇ ಸಾಧ್ಯ' ಎಂದು ನಂಬುವ, ಮನುಷ್ಯ ಪ್ರಪಂಚದ ಸಕಲ ಜೀವನ ವ್ಯಾಪಾರವನ್ನು ನಿಯಂತ್ರಿಸುವ ಕಾಣದ ಕೈಯೊಂದಿದ್ದು ಆ ಶಕ್ತಿಯೇ ದೇವರೆಂದು ಕುರುಡಾಗಿ ನಂಬಿ ಆರಾಧಿಸುವ, ಅಷ್ಟೇ ಏಕೆ, ತನ್ನ ಕರ್ತೃತ್ವ ಶಕ್ತಿಯ ಮೇಲೆ ತನಗೇ ಪೂರ್ಣ ವಿಶ್ವಾಸವಿಲ್ಲದ ಮನುಷ್ಯ ಹಾಗೆ ದುರ್ಬಲ ಮನಸ್ಸಿನವನಾಗಿ ತನ್ನೆಲ್ಲ ಆಗುಹೋಗುಗಳಿಗೆ ಇಲ್ಲದ ದೇವರನ್ನು ಆರೋಪಿಸುವಾಗಿನ ಹಿನ್ನೆಲೆಯೇ ಅತ್ಯಂತ ಕುತೂಹಲಕಾರಿಯಾದುದಾಗಿದೆ.

ಅದನ್ನು ಮುಗ್ಧತೆಯೆನ್ನಬೇಕೋ, ಅಜ್ಞಾನವೆನ್ನಬೇಕೋ, ಅವೆರಡರಿಂದಲೂ ಪ್ರೇರಿತವಾದ ಮೂರ್ಖತನವೆನ್ನಬೇಕೋ ? ಬಾಳಿಗೊಂದು ನಂಬಿಕೆ ಬೇಕೇ ಬೇಕು ಎನ್ನುವ ಹಠಮಾರಿತನದಿಂದ ಪೋಷಿಸಿಕೊಂಡು ಬಂದ ಖೊಟ್ಟಿ ನಂಬಿಕೆಯೆಂದು ಉಪೇಕ್ಷಿಸಿ ಬಿಡಬೇಕೋ ? ಆರಂಭದ ಅನಾಗರಿಕ ಕಾಲದ ದಿನಗಳಲ್ಲಿ ನಿಸರ್ಗದ ಕುತೂಹಲಗಳಿಗೆಲ್ಲ ಪ್ರೀತಿಯ/ಭೀತಿಯ ಹಿನ್ನೆಲೆಯಲ್ಲಿ ಬಂದ ನಂಬಿಕೆಯನ್ನು ಅನೂಚಾನವಾಗಿ ಆಚರಣೆಯಲ್ಲಿ ಮುಂದುವರಿಸಿಕೊಂಡು ಬಂದದ್ದರ ಫಲವೆನ್ನಬೇಕೋ ? ಈ ಜಿಜ್ಞಾಸೆ ಎಲ್ಲ ಕಾಲಕ್ಕೂ ಕಾಡಿದೆ. ಆದರೆ, ವೈಜ್ಞಾನಿಕವಾಗಿ – ವೈಚಾರಿಕವಾಗಿ ಇಷ್ಟೊಂದು ಮುಂದುವರೆದಿದ್ದಾಗ್ಯೂ ಅನಾಗರಿಕ ಕಾಲದ ಆ ಕುರುಡು ನಡೆವಳಿಕೆಯನ್ನು ಹೊಸ ಹೊಸ ರೀತಿಯಲ್ಲಿ ಅತ್ಯಾಧುನಿಕವಾಗಿಯೇ ಮುಂದುವರೆಸಿಕೊಂಡು ಹೋಗುತ್ತಿರುವುದು ಮಾತ್ರ ಅಚ್ಚರಿಯ ಸಂಗತಿ.

ಮಾತು ಮಾತಿಗೆ 'ದೇವರು ಕಣ್ಣು ಬಿಟ್ಟರೆ' ಎಂದು ಉಲ್ಲೇಖಿಸುವವರ ನಡುವೆ ನಾವಿದ್ದೇವೆ. ಮನುಷ್ಯ ಪ್ರಯತ್ನವಿಲ್ಲದೆ ಅದಾವ ದೇವರು ತಾನೇ ಕಣ್ಣು ಬಿಡಲು ಸಾಧ್ಯ ? ನಮ್ಮೆಲ್ಲ ಕಷ್ಟ-ಸುಖಗಳಿಗೆ ನಾವೇ ಹೊಣೆಗಾರರೆಂಬ ಸರಳ ಸತ್ಯವನ್ನು ಅರಿಯದೆ – ಮನುಷ್ಯನ ಎಲ್ಲ ಆಗು-ಹೋಗುಗಳಿಗೆ ಎಲ್ಲ ಸಲ್ಲದ ದೇವರನ್ನು ಆರೋಪಿಸುವ ಪ್ರವೃತ್ತಿಗೆ ಕನಿಕರವಾಗಬೇಕಲ್ಲವೆ ? ಯಾವನಾದರು 'ತಾನು ದೇವರನ್ನು ಕಂಡಿದ್ದೇನೆ' ಎಂದು ಹೇಳುತ್ತಾನೆಂದರೆ, ಒಂದು ಅವನು ತಲೆ ಕೆಟ್ಟವನಾಗಿರಬೇಕು, ಇಲ್ಲಾ ಆತ್ಮವಂಚನೆ ಮಾಡಿಕೊಂಡು ಹಾಗೆ ಸುಳ್ಳು ಹೇಳುತ್ತಿರಬೇಕು ಎಂದು ಭಾವಿಸಬೇಕಾಗುತ್ತದೆ. ಭಾರತದಲ್ಲಿ ಅಂಥ ವಿಕ್ಷಿಪ್ತ ವಿಲಕ್ಷಣ ಮನಸ್ಸಿನ ಅವಧೂತರ, ದೇವಮಾನವರ ಬಹುದೊಡ್ಡ ಪರಂಪರೆಯೆ ಇದೆ. ಅಂಥವರ ಬಳಿ ಹೋಗಿ 'ನೀವು ಕಂಡ ದೇವರನ್ನು ನಮಗೂ ಇಷ್ಟು ತೋರಿಸಿ' ಎಂದೇನಾದರೂ ನೀವು ಅವಲತ್ತುಕೊಂಡರೆ, ಅದಕ್ಕೆ ಅವರು ಭಯಂಕರ ಸಾಧನೆ – ತಪ್ಪಸ್ಸು ಮಾಡಬೇಕೆಂದು ಕರೆ ಕೊಡುತ್ತ ಜಾರಿಕೊಳ್ಳುತ್ತಾರೆ. ಇದ್ದುದನ್ನು ಇರುವ ಹಾಗೆ ಕಾಣುವುದಕ್ಕೆ ಯಾವ ಅಡ್ಡಿಯೂ ಇಲ್ಲ, ಆದರೆ, ಇಲ್ಲದುದನ್ನು ಇದೆಯೆಂದು ಸಾಧಿಸಿ ತೋರಿಸಲು ಸಾಕಷ್ಟು ಹೆಣಗಬೇಕಾಗುತ್ತದೆ. ಹಾಗೆ ಹೆಣಗಿದರೂ ಫಲಿತಾಂಶ ಶೂನ್ಯವೇ ಆಗಿರುತ್ತದೆ. ಅದು ಒತ್ತಟ್ಟಿಗಿರಲಿ.

ತಾವು ಕೊಳೆಗೇರಿಯಲ್ಲಿ ಕ್ರಿಮಿಗಳಂತೆ ಬದುಕುತ್ತಿದ್ದರೂ ನಂಬಿದ್ದ ತಮ್ಮ ದೇವರಿಗೆ ಏನೆಲ್ಲ ಕೊಡಲು ಮುಂದೆ ಬರುವ ಕಡು ಬಡವರು, ಕೆಳ ಮಧ್ಯಮ ವರ್ಗದ ಜನರು ನಮ್ಮಲ್ಲಿದ್ದಾರೆ. ಅವರ ಆ ನಂಬಿಕೆಯ ದುರ್ಲಾಭ ಮಾಡಿಕೊಳ್ಳುವ ಲಫಂಗರು ದೇವರನ್ನು ಸೃಷ್ಟಿಸುವ ಹುನ್ನಾರದಲ್ಲಿ ಅವ್ಯಾಹತವಾಗಿ ಅಬಾಧಿತವಾಗಿ ತೊಡಗಿಕೊಂಡಿರುತ್ತಾರೆ. ಇದೊಂದು ಹೊರನೋಟಕ್ಕೆ ಕಾಣದ ಗುಪ್ತ ವ್ಯಾಪಾರೋದ್ಯಮವೆಂಬ ವಿಷಯ ಬಹುಜನ ಸಮುದಾಯದ ಅರಿವಿಗೆ ಬರುವುದೇ ಇಲ್ಲ. ಬಂದರೂ ಅದನ್ನು ಗಂಭೀರವಾಗಿ ತೆಗೆದುಕೊಳ್ಳದೆ ಕ್ಷಮಿಸಿಬಿಡುವವರೇ ಬಹಳ. ಹಾಗಾಗಿ ಭಾರತದಂಥ ಬಡ ದೇಶಗಳಲ್ಲಿ ಇಂಥವು ಬಹುದೊಡ್ಡ ಪರಂಪರೆಯಾಗಿ ಬೇರುಬಿಡಲು ಅವಕಾಶವಾಗಿದೆ. ಅದಕ್ಕೆ ಅವಿದ್ಯೆ, ಅಜ್ಞಾನಗಳೂ ಪೂರಕವಾಗಿರುತ್ತವೆ. ಜನರಲ್ಲಿನ ಆ ಮೌಢ್ಯ – ಕುರುಡು ನಂಬಿಕೆಯ ಪ್ರಯೋಜನ ಪಡೆದುಕೊಂಡಂತೆಯೇ, ಊರಿಗೊಬ್ಬ ಕೇರಿಗೊಬ್ಬ ಅವಧೂತರು, ಬಾಬಾಗಳು ಹುಟ್ಟಿಕೊಳ್ಳುತ್ತಾರೆ. ತಮ್ಮ ಚಾಣಾಕ್ಷ ಮಾತುಗಾರಿಕೆಯಿಂದ, ಕೈಚಳಕಗಳಿಂದ ಸಾಮಾನ್ಯ ಜನರನ್ನು ಮರುಳು ಮಾಡುತ್ತಾರೆ. ಆಗ





ದೇವರು – ಧರ್ಮದ ಹೆಸರಿನಲ್ಲಿ ಶೋಷಣೆ ನಿರಾತಂಕವಾಗಿ ಶುರುವಿಟ್ಟುಕೊಳ್ಳುತ್ತದೆ. ಇದು, ನಾನು ಅಲೆಮಾರಿಯಾಗಿ ಕಂಡ ಈ ಮುಂದೆ ಹೇಳಲಿರುವ ಒಂದೆರಡು ಘಟನೆಗಳಿಗೆ ಪೀಠಿಕಾ ರೂಪದ ಟಿಪ್ಪಣಿ.

ಬೆಂಗಳೂರೆಂಬೋ ಜನಾರಣ್ಯದಲ್ಲಿ ಸುತ್ತೂ ಕಡೆಯಿಂದ ಬೇಕಾಬಿಟ್ಟಿ ಬಂದು ಸೇರಿದ ವಿವಿಧ ನಮೂನೆಯ ಜನ ಸಮುದಾಯಗಳಿರುವಂತೆಯೇ, ಅಷ್ಟೂ ಪ್ರಕಾರದ ದೇವರು-ದಿಂಡರ ಸಂಕೀರ್ಣ ಆಚರಣೆಯ ದೇವಗಣವನ್ನೂ ಗುರುತಿಸಬಹುದಾಗಿದೆ. 'ಅವರವರ ಭಾವಕ್ಕೆ ಅವರವರ ಭಕುತಿಗೆ, ಅವರವರ ತೆರನಾಗೇ' ರೂಪಗೊಂಡ ಪರಿ ಅಚ್ಚರಿ ಹುಟ್ಟಿಸುವಂಥದ್ದು. ಕೆಲವೊಮ್ಮೆ ಋತುಮಾನ ಬದಲಾದಾಗ ಕಾಡುವ ಸಾಂಕ್ರಾಮಿಕ ರೋಗಗಳಂತೆ ಸೀಜನ್‌ವೈಜ್ ದೇವರುಗಳ ಉಪಟಳಗಳೂ ಉಂಟು. ಉದಾಹರಣೆಗೆ ಡಿಸೆಂಬರ್ ಬಂತೆಂದರೆ ಅಯ್ಯಪ್ಪನ ಸೀಜನ್ ಇತ್ಯಾದಿ.

ಮನುಷ್ಯರಾದ ನಾವು ದೇವರಿಗಂತೂ ಹುಟ್ಟುವುದಿಲ್ಲ; ಆದರೆ ಮನುಷ್ಯ ಮಾತ್ರ ಬೇಕಾಬಿಟ್ಟಿ ದೇವರನ್ನು ಹುಟ್ಟಿಸುವುದರಲ್ಲಿ ನಿಸ್ಸೀಮನಾಗಿದ್ದಾನೆ ಎನ್ನುವುದು ಸುಳ್ಳಲ್ಲ. ನನ್ನ ಈ ಮಾತಿನ ಕಟು ವಾಸ್ತವ ಕಾಣಬೇಕೆಂದಿದ್ದರೆ ಸೀದಾ ಬೆಂಗಳೂರಿಗೆ ಬನ್ನಿರಿ. ಹಾದಿಬೀದಿಗಳು, ಸಂದುಗೊಂದುಗಳು, ಗಲ್ಲಿ ಗಟಾರಗಳಲ್ಲೆಲ್ಲಾ ಎಡತಾಕುವ ದೇವರುಗಳೋ ದೇವರುಗಳು. ಬೆಂಗಳೂರಲ್ಲಿ ದೇವರುಗಳು ಎಷ್ಟೊಂದು ಅಗ್ಗ? ಬಹುಶಃ ಬೆಂಗಳೂರಿನಲ್ಲಿರುವಷ್ಟು ಕರ್ಮಠರು ಇನ್ನೆಲ್ಲಿಯೂ ಇರಲಿಕ್ಕಿಲ್ಲ.

ಅಂತಾರಾಷ್ಟ್ರೀಯ ಮಟ್ಟದ ಮಾಹಿತಿ ತಂತ್ರಜ್ಞಾನದ ಐ.ಟಿ.ಪಾರ್ಕ್ ಇರುವ ಬೆಂಗಳೂರಿನ ಹೊಟ್ಟೆಯೊಳಗೆ ಅನಾಗರಿಕ ಕಾಲದ ಮಿದುಳು – ಮಾಂಸಖಂಡಗಳಿನ್ನೂ ಜೀವಂತವಾಗಿವೆಯೆಂಬುದನ್ನು ಈಗ ಒಪ್ಪುತ್ತೀರಲ್ಲವೆ? ಇಲ್ಲಸಲ್ಲದ ದೇವರ ಭಯ ಕಾಡುವುದು ಸದಾ ಪಾಪಭೀರುಗಳನ್ನು, ಇಲ್ಲಾ ದುರ್ಬಲ ಮನಸ್ಸಿನ ಮುಗ್ಧರನ್ನು! ಹಾಗಾದರೆ ಬೆಂಗಳೂರಿನಲ್ಲಿ ಪಾಪಿಗಳೇ ಅಧಿಕ ಸಂಖ್ಯೆಯಲ್ಲಿದ್ದಾರೆಂದು ಭಾವಿಸಬೇಕೆ !? ಇಲ್ಲಾ ಅಸ್ಪಷ್ಟ ಮನಸ್ಸಿನ ಜನರೇ ತುಂಬಿದ್ದಾರೆಂದು ಪರಿಭಾವಿಸಬೇಕೇ ? ಎಂಜಲಗೈಯಲ್ಲಿ ಕಾಗೆಯನ್ನೂ ಓಡಿಸದ ಕುಳಗಳು ದೇವರ ಹುಂಡಿಗೆ ಧಾರಾಳವಾಗಿ ಸುರಿಯುವುದಾಗಲಿ, ದೇವರ ಕಾರ್ಯಕ್ಕೆಂದರೆ ಕೈಬಿಚ್ಚಿ ಕೊಡುವುದನ್ನಾಗಲಿ ನೋಡಿದ ಬಸವಣ್ಣನವರು ಹನ್ನೆರಡನೆಯ ಶತಮಾನದಲ್ಲಿಯೇ 'ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯ !' ಎಂದು ಉದ್ಗರಿಸಿರುವುದು ಯಥಾರ್ಥವೇ ಆಗಿದೆ.

ಏಕಮುಖ ಸಂಚಾರಕ್ಕೂ ಯೋಗ್ಯವಲ್ಲದ ಅಲಸೂರು ಮುಖ್ಯರಸ್ತೆಯನ್ನು ನೋಡಬೇಕು. ಅದನ್ನು ಹಳೆ ಮದರಾಸು ರಸ್ತೆ ಎಂತಲೂ ಕರೆಯುತ್ತಾರೆ. ಸತತ ಅತಿಕ್ರಮಣಕ್ಕೆ ತುತ್ತಾಗಿ ಮೊದಲೇ ಇಕ್ಕಟ್ಟಾದ ಆ ರಸ್ತೆಯ ಚಿಕ್ಕ ಫುಟ್‌ಪಾತ್‌ಗಳ ಮೇಲೆ ಗುಡಿ-ಗುಂಡಾರ ಅರಳಿಗಕಟ್ಟೆಗಳೂ ಸೇರಿ ಸಂಚಾರಕ್ಕೆ ಅಡ್ಡಿಯಾಗಿರುವುದು ಯಾವ ದೇವರಿಗೆ ಪ್ರೀತಿ ? ಹೀಗೆ, ಖಾಲಿ ನಿವೇಶನ, ಜನನಿಬಿಡ ಫುಟ್‌ಪಾತ್, ಸಾರ್ವಜನಿಕ ಉದ್ಯಾನ, ಸರ್ಕಾರಿ ಜಾಗೆ, ಶಾಲಾ ಮೈದಾನ, ಹೀಗೆ ಎಲ್ಲೆಂದರಲ್ಲಿ ಅಕ್ರಮವಾಗಿ ರಾತ್ರೋ ರಾತ್ರಿ ದೇವರನ್ನು ಹಡೆದು ಕೂರಿಸಿಬಿಡುವ ; ಅದರ ಹಿಂದಿರುವ ಒಬ್ಬಿಬ್ಬರು ಚಾಣಾಕ್ಷರ ಗೈರತ್ತನ್ನು ಪ್ರಶ್ನಿಸುವವರಾದರು ಯಾರು ? ಇಂತಹ ಅಕ್ರಮ ದೇವರುಗಳನ್ನು ಕಿತ್ತೆಸೆಯಲು ಆ ದೇವರ ಮೈ ಮುಟ್ಟುವ ಬಲ ಯಾವ ಮಗನಿಗಿದೆ ? ಮೌಢ್ಯದ ಪರಮಾವಧಿಯಾದ ಇವನ್ನು ಕ್ಯಾನ್ಸರ್ ಗೆಡ್ಡೆಗಳಂತೆ ನಗರದ ಹೊಟ್ಟೆಯೊಳಗಿಟ್ಟುಕೊಂಡೂ ಬೆಂಗಳೂರನ್ನು ಸಿಂಗಪುರ ಮಾದರಿಯ ಅತ್ಯಾಧುನಿಕ ನಗರವಾಗಿ ಬಡಾಯಿಸಬೇಕಾಗಿದೆ !

ಬೆಂಗಳೂರಿನ ತೆಕ್ಕೆಯೊಳಗೆ ಅದೆಷ್ಟು ಪ್ರಕಾರದ ಜನಗಳಿದ್ದಾರೋ ಅಷ್ಟೂ ಪ್ರಕಾರದ ದೇವರುಗಳಿವೆಯೆಂಬ ನನ್ನ ಮಾತನ್ನು ಈಗ ಅಲ್ಲಗಳೆಯುವ ಧಾರ್ಷ್ಟ್ಯ ಯಾರಿಗಿದೆ ? ಇಲ್ಲಿನ ಬೇವಾರ್ಸಿ ಬೀದಿಗಳಿಂದ ಹಿಡಿದು ಐಸಾತಿ ಬಡಾವಣೆಗಳ ತನಕ ಎಲ್ಲೆಂದರಲ್ಲಿ ಎಡತಾಕುವ ದೇವರುಗಳೊ ದೇವರುಗಳು. ಆ ಪೈಕಿ ಪುರಾಣ ಕತೆಗಳಿಂದಲೂ ಪ್ರಖ್ಯಾತನಾದ – ಬಹುಜನ ಸಮುದಾಯವನ್ನು ಹೆದರಿಸಿಕೊಂಡೇ ತನ್ನ ಬೇಳೆ ಬೇಯಿಸಿ ಕೊಳ್ಳುತ್ತ ಬಂದ ಭೀಕರ ರೂಪಿನ 'ಸನಿ ಮಾತುಮ'ನ ಪ್ರಕರಣವನ್ನು ಉಲ್ಲೇಖಿಸಿದ್ದೇನೆ.

ಕೊಳಚೆ ಪ್ರದೇಶದ ಒಂದು ಬೀದಿಯ ಕೊನೆಯಲ್ಲಿ ಹೇಳುವವರು ಕೇಳುವವರು ಯಾರೂ ಇಲ್ಲದೇ ನಿರೂಮಳಾಗಿ, ಅದ್ಯಾರೋ ನರ ಮಾನವರ ಹರಕೆಯ ಫಲವಾಗಿ ನೀಲಿಬಣ್ಣದಲ್ಲಿ ಮುಳುಗೆದ್ದ 'ಸನಿ ಮಾತುಮ'ನ ಕಟ್ಟಿಗೆಯ ಮೂರ್ತಿಯೊಂದು ಡಬ್ಬಿ ಅಂಗಡಿಯಲ್ಲಿ ಪ್ರತಿಷ್ಠಾಪನೆಯಾಗಿತ್ತು. ಪಾಪ! ಭಕ್ತರಿಗೆ ಅದೇನು ಬರವೋ. ಮನುಷ್ಯರಾರೂ ಅದರ ಕಡೆಗೆ ಸುಳಿಯದೇ, ಯಾರೂ ಇಲ್ಲದ ಹೊತ್ತಿನಲ್ಲಿ ಬರೀ ಬೀದಿ ನಾಯಿಗಳಷ್ಟೆ ಬಳಿಸಾರಿ ತಮಗಿಷ್ಟವಾದ ರೀತಿಯಲ್ಲಿ ನಡೆದುಕೊಳ್ಳುತ್ತಿದ್ದವು.

ನೆರೆ ನಾಡಿನಿಂದ ಬೆಂಗಳೂರಿಗೆ ಅನ್ನ ಹುಡುಕಿಕೊಂಡು ಬಂದ ತಮಿಳರ ಕುಟುಂಬವೊಂದು ಅದನ್ನು ಗಮನಿಸಿತು. ಹಸಿವಿಗೆ ದೇಶ-ಭಾಷೆಗಳ ಹಂಗೂ ಇರುವುದಿಲ್ಲ ಅಲ್ಲವೆ ? ತಮ್ಮ ಕೈಯಲ್ಲಿನ ಪುಡಿಗಾಸು ಖರ್ಚು ಮಾಡಿ ಆ ಸನಿಮಾತುಮನ ಡಬ್ಬಿಗೆ ನಾಕು ಚಕ್ರಗಳನ್ನು ಅಳವಡಿಸಿದರು. ಮೈ ಬಗ್ಗಿಸಿ ದುಡಿಯಲು ಮನಸ್ಸಿಲ್ಲದ ಆ ಕುಟುಂಬದ ಸದಸ್ಯರೆಲ್ಲ ಈಗ ಸದ್ರಿ ಸನಿ ಮಾತುಮನ ಉತ್ಸವದ ಉಸ್ತುವಾರಿಯ ಹೊಣೆ ಹೊತ್ತುಕೊಂಡರು. ಅಂತೂ ದುರಸ್ತಿಯಾದ ಸನಿ ಮಾತುಮನ ಡಬ್ಬಿ ರಥ ಒಂದು ದಿನ ಬೀದಿಗಳಲ್ಲಿ ಮೆರವಣಿಗೆ ಹೊರಡಲು ಸಿದ್ಧವಾಗಿ ನಿಂತಿತ್ತು.

ಗಂಟಲಿಗೆ ಎರಡು ಪಾಕೀಟು ಸಾರಾಯಿ ಸುರಿದುಕೊಂಡವನಾಗಿ 'ಜಡ್ಡಿ ನಕಾ ನಕ್ಕ ನಕಾ' ಎಂದು ಅತ್ಯಂತ ಆವೇಶಭರಿತನಾಗಿ ಹಲಗೆ ಬಡಿದುಕೊಂಡು ನಡೆದ. ಕುಟುಂಬದ ಹಿರಿಯ ಸದಸ್ಯನೊಬ್ಬ ತನ್ನ ಶರೀರದ ಮೇಲೆ ಎಲ್ಲೆಲ್ಲಿ ಕೂದಲು ಬೆಳೆಯಬಹುದೋ ಅಲ್ಲೆಲ್ಲಾ ಕೂದಲನ್ನು ಯಥೇಚ್ಛ ಬೆಳೆಯಗೊಟ್ಟವನಾಗಿ, ಬರೀ ಮೈಗೆ ಕುಂಕುಮ ಮೆತ್ತಿಕೊಂಡು ಹಿಡಿಹಿಡಿ ಅಗ್ಗದ ಊದುಕಡ್ಡಿ ಉರಿಸುತ್ತ ಮತ್ತೊಂದು ಕೈಯಲ್ಲಿ ಗಂಟೆ ಅಲ್ಲಾಡಿಸುತ್ತ ಸನಿ ಮಾತುಮನ ಸ್ಯಾಚ್ಯೂ ಪಕ್ಕದಲ್ಲಿಯೇ ನಡೆದಿದ್ದ. ಆಧುನಿಕ ನಾಗರಿಕತೆಯಲ್ಲಿ ಹಾಗೆ ಕಾಡುಮೃಗದಂತೆ ಕೂದಲು ಬೆಳೆಸಿಕೊಂಡಿರುವುದೇ ಒಂದು ಗಮನ ಸೆಳೆಯುವ ಸಂಗತಿ. ಅದಕ್ಕೆ ಅಮಾಯಕರೂ ಅಡ್ಡಬೀಳುತ್ತಾರೆ.

ಬೀದಿ ಕೊನೆಯಲ್ಲಿ ಅನಾಥವಾಗಿದ್ದ 'ಸನಿ ಮಾತುಮ'ನನ್ನು ಈ ತೆರನಾಗಿ ತಮ್ಮ ಸುಪರ್ದಿಗೆ ತೆಗೆದುಕೊಂಡ ಸದರಿ ಸನಿ ಕುಟುಂಬದ ಇಬ್ಬರು ಹೆಂಗಸರು ಬೀದಿಯ ಎರಡೂ ಕಡೆಯ ಮನೆಗಳನ್ನು ಜಾಲಾಡುತ್ತ ಕಾಸು, ತಪ್ಪಿದರೆ ದವಸ ಧಾನ್ಯ ವಸೂಲು ಮಾಡುತ್ತ ಮುನ್ನಡೆಯುತ್ತಿದ್ದರು. ಆ ಹಲಗೆ ಉರವಣಿಗೆಯ ಸಪ್ಪುಡಿಗೆ ಕುತೂಹಲದಿಂದ ಬಾಗಿಲು ತೆರೆದು ಹೊರಗಿಣಿಕಿದ ನಗರ ವಾಸಿ ಹೆಂಗಸರು, ಮನೆಯಲ್ಲಿ ಗಂಡಸರಿಲ್ಲದ ಹೊತ್ತಿನಲ್ಲಿ ಹಾಗೆ ತಮ್ಮ ಬೀದಿಯಲ್ಲಿ ಒಕ್ಕರಿಸಿದ ಸನಿಮಾತುಮನ ಅಕರಾಳ ವಿಕರಾಳ ಅಲಂಕಾರ ನೋಡಿದವರೇ ಬೆಚ್ಚಿದವರಾಗಿ, 'ನಿನ್ನ ಕಾಕದೃಷ್ಟಿಯನ್ನು ನಮ್ಮ ಮೇಲೆ ಬೀರಬ್ಯಾಡ ಕಣಪ್ಪೋ' ಎಂದು ಕೆನ್ನೆ ಕೆನ್ನೆ ಬಡಿದುಕೊಂಡು, ಹೆಚ್ಚು ಹೊತ್ತು ತಮ್ಮ ಮನೆಯಂಗಳದಲ್ಲಿ ನಿಲ್ಲುವುದಕ್ಕೂ ಅವಕಾಶ ಕೊಡದೆ ಕಾಸನ್ನೋ ಕಾಳುಕಡ್ಡಿಯನ್ನೋ ಧಾರಾಳವಾಗಿ ಸುರಿದು ಮುಂದಕ್ಕೆ ಸಾಗ ಹಾಕುತ್ತಿದ್ದವರೇ ಭಾಳಾ !

* * *

ಅಲ್ಲೊಬ್ಬ ಇಲ್ಲೊಬ್ಬ ಚಾಣಾಕ್ಷಮತಿ ದೇವರನ್ನು ಹುಟ್ಟು ಹಾಕಿ ಮುಗ್ಧರನ್ನು ಒಲಿಯುವಂತೆ ಮಾಡಿ, ಆ ಮೂಲಕ ಅದನ್ನು ವ್ಯಾಪಾರೀ ಕೇಂದ್ರವನ್ನಾಗಿಸಿ ತಮ್ಮ ಬೇಳೆ ಬೇಯಿಸಿಕೊಳ್ಳುತ್ತಿರುವುದು ಎಲ್ಲ ಕಾಲ-ದೇಶಗಳಲ್ಲೂ ನಡೆದುಬಂದ ಸಂಗತಿ. ಅದರಲ್ಲೂ ಧರ್ಮಭೀರುಗಳ ನೆಲವೆಂದು ಖ್ಯಾತಿವೆತ್ತ ಭಾರತದಲ್ಲಿಯಂತು ಇದು ಇನ್ನೂ ಜಾಸ್ತಿ. ನಿದರ್ಶನಕ್ಕೆ ಬೆಂಗಳೂರಿನ ಜನನಿಬಿಡ ರಸ್ತೆಗಳಾದ ಅವೆನ್ಯೂ ರಸ್ತೆ, ಬಿ.ವಿ.ಕೆ. ಅಯ್ಯಂಗಾರ್ ರಸ್ತೆಗಳನ್ನು ನೋಡಿರಿ. ದೊಡ್ಡ ದೊಡ್ಡ ದೇವಸ್ಥಾನಗಳನ್ನು ಕಟ್ಟಿ ಅದರ ಎಡ-ಬಲಗಳಲ್ಲಿ ವ್ಯಾಪಾರೀ ಮಳಿಗೆಗಳನ್ನು ಹಿಗ್ಗಿಸಿಕೊಂಡು ರಾಜಾರೋಷವಾಗಿ ಫುಟ್‌ಪಾತ್‌ಗಳ ಅತಿಕ್ರಮಣ ಮಾಡಿ ಮೆರೆಯುತ್ತಾರೆ. ಯಾಕೆಂದರೆ, ಇಲ್ಲಿನ ಪ್ರತಿ ಇಂಚು ನೆಲಕ್ಕೂ ಚಿನ್ನದ ಬೆಲೆಯಿದೆ. ಫುಟ್‌ಪಾತ್ ಕಬಳಿಸುವುದಕ್ಕಾಗಿ ಅಲ್ಲಿನ ಆಜುಬಾಜಿನ ವ್ಯಾಪಾರೀಗಳೇ ದೇವಸ್ಥಾನ ಕಟ್ಟಲು ಕುಮ್ಮಕ್ಕು ಕೊಡುತ್ತಾರೆ. ಅದರಿಂದ ತಮಗೆ ಶಾಶ್ವತ ರಕ್ಷಣೆ ದೊರೆಯುತ್ತದೆ. ಪ್ರತಿಯಾಗಿ ಆ ದೇವಸ್ಥಾನ ಸುಭದ್ರವಾಗಿರುವಂತೆ ಇವರು ನೋಡಿಕೊಳ್ಳುತ್ತಾರೆ. ಇಂಥ ಕಡೆ ದೇವಸ್ಥಾನ ನಿರ್ಮಿಸುವುದೂ ವ್ಯಾಪಾರದ ಒಂದು ನಾಜೂಕಾದ ಅಂಗವಾಗಿದೆ.

* * *

ಅದೊಂದು ಸರ್ಕಾರೀ ನೌಕರರು ಅಧಿಕಾರಿಗಳೇ ಹೆಚ್ಚಾಗಿ ವಾಸಿಸುವ ಪ್ರತಿಷ್ಠಿತ ಬಡಾವಣೆ. ಎಲ್ಲರೂ ಅಕ್ಷರವಂತರೇ. ಸದನದಲ್ಲಿ ರೂಪುಗೊಳ್ಳುವ ಶಾಸನಗಳನ್ನು ಮುಂದಾಗಿಯೇ ಅವಲೋಕಿಸುವ ಅಧಿಕೃತ ವಕ್ತಾರರು ಬೇರೆ. ಅಂಥ ಬಡಾವಣೆಯ ಅಂಚಿನಲ್ಲಿ ಒಂದು ದಿನ ಬೆಳಿಗ್ಗೆ ಎದ್ದು ಕಣ್ಣುಬಿಡುವ ಹೊತ್ತಿಗೆ ಆಶ್ಚರ್ಯ ಕಾದಿತ್ತು. ಜನನಿಬಿಡ ಮುಖ್ಯರಸ್ತೆಯ ನಡುಮಧ್ಯದಲ್ಲಿಯೇ ಮೇರಿಯಮ್ಮನ ಚಂದದ ಗೊಂಬೆಯನ್ನು ಹೊತ್ತು ಡಬ್ಬಿಯೊಂದು ಏಕಸ್ತಂಭದ ಮೇಲೆ ರಾರಾಜಿಸುತ್ತಿತ್ತು. ರಾತ್ರೋ ರಾತ್ರಿ ಅದರ ಬೆನ್ನಿಗೇ ಇರುವ ವಿದ್ಯುತ್ ಕಂಬದಿಂದ ನೇರವಾಗಿ ಪುಕ್ಕಟೆ ವಿದ್ಯುತ್ ಸರಬರಾಜೂ ಯಥೇಚ್ಛವಾಗಿ ಸಿಕ್ಕಿತ್ತು.

ಸರಿ, ಆಯಕಟ್ಟಿನ ಆ ಸರ್ಕಾರಿ ಜಾಗ ಇನ್ನೇನು ಮೇರಿಯಮ್ಮನ ಪಾಲಾಗಲಿದೆ ಅನ್ನುವ ಹೊತ್ತಿಗೆ, ಒಂದು ವಾರದೊಳಗಾಗಿ, ಅದರ ಪಕ್ಕದ ಉಳಿಕೆ ಜಾಗದಲ್ಲಿ ಬಿಕರಿಯಾಗದೆ ಉಳಿದಿದ್ದ ಮಣ್ಣಿನ ಗಣಪನೊಬ್ಬ ಹಾಡು ಹಗಲೇ ಒಕ್ಕರಿಸಿದ್ದ. ಮುಂದಿನ ಬೆಳವಣಿಗೆಯನ್ನು

೬೦ನೇ ಪುಟಕ್ಕೆ

# ಬ್ರಾಹ್ಮಣ-ಕ್ಷತ್ರಿಯ ಸಂಘರ್ಷ

**ಶ್ರೀಶ ಉಡುಪ**

**ಕಾ**ಶ್ಮೀರದ 'ತಂತ್ರವಾರ್ತಿಕ' ಗ್ರಂಥ ಹಿಂದೂ ಧರ್ಮಕ್ಕೆ ನೀಡುವ ವ್ಯಾಖ್ಯೆ ಹೀಗಿದೆ: 'ಹೀನಂ ಚ ದೂಷ್ಯಂತೇವ ಹಿಂದೂಃ ಇತಿ ಉಚ್ಯತೇ।'

'ಹೀನರು ಮತ್ತು ದೂಷಣೆಗೆ ಒಳಗಾದವರೇ ಹಿಂದೂಗಳು' ಎಂಬ 'ಹಿಂದೂ' ಶಬ್ದದ ಕುರಿತಾದ ವ್ಯಾಖ್ಯೆ ಬಹಳ ಸ್ವಾರಸ್ಯಕರವಾಗಿದೆ. ಈ ವ್ಯಾಖ್ಯೆಯು 'ಹಿಂದೂ' ಪದಕ್ಕೆ ಇದೆ ಎಂಬುದನ್ನು ತಿಳಿದರೆ ಪ್ರಾಯಶಃ ತಾವು ಹಿಂದೂ ಎಂದು ಕರೆದುಕೊಳ್ಳಲು ಯಾರೂ ಇಷ್ಟಪಡಲಾರರೇನೋ? ಪರಸ್ಪರ ಕೆಸರೆರಚಾಟದ ಜೀವನದಿಂದ ರೋಸಿ ಹೋದವನೊಬ್ಬ ಈ ವ್ಯಾಖ್ಯೆ ನೀಡಿರಲಿಕ್ಕೂ ಸಾಕು. ಯಾಕೆಂದರೆ ಹಿಂದೂ ಧರ್ಮದ ಇತಿಹಾಸದುದ್ದಕ್ಕೂ ಕ್ಷತ್ರಿಯ-ಬ್ರಾಹ್ಮಣರಲ್ಲಿ ಪರಸ್ಪರ ಮೇಲುಗೈ ಸಾಧಿಸಲು ನಡೆಯುತ್ತಲೇ ಇದ್ದ ಕಸರತ್ತುಗಳನ್ನು ಕಾಣಬಹುದು. ಅದನ್ನೀಗ ಸ್ವಲ್ಪ ನೋಡೋಣ.

ಋಗ್ವೇದೀಯ ಕಾಲದಲ್ಲಿದ್ದ ದೈನಂದಿನ ಕಿರಿಯ ಯಾಗಗಳು ಮತ್ತು ವಿಶೇಷ ಯಜ್ಞಗಳು ಹಿಂದೂ ಧರ್ಮವೆಂದು ಆ ಕಾಲದಲ್ಲಿ ಪರಿಗಣಿಸಲ್ಪಟ್ಟವು. ಆದರೆ ಕ್ರಮೇಣ ಖಾಸಗಿ ಆಸ್ತಿಯ ಉಗಮವಾಗಿ ರಾಜರು ಅಥವಾ ಶ್ರೀಮಂತರಲ್ಲಿ ಸಮೃದ್ಧಿಯು ಹೆಚ್ಚಾದಂತೆ ದೊರಕಿದ ವಿರಾಮ ಕಾಲದಲ್ಲಿ ಪುರೋಹಿತರ ನೆರವಿನಿಂದ ಯಾಗಗಳನ್ನು ನಡೆಸಿ ಸಂತೋಷದೊಂದಿಗೆ ಗರ್ವವನ್ನುಪಟ್ಟುಕೊಳ್ಳುತ್ತಿದ್ದರು. ಒಣ ಪ್ರತಿಷ್ಠೆಗಾಗಿ ಯಥೇಚ್ಛವಾಗಿ ದಾನ ದಕ್ಷಿಣೆಗಳನ್ನು ನೀಡುತ್ತಿದ್ದರು. ಮೊದಲೇ ಸಮಯಸಾಧಕ ಗುಣವನ್ನು ಹೊಂದಿದ್ದ ಪುರೋಹಿತರು ಯಾಗಗಳ ಪೋಷಕರ ಒಣ ಪ್ರತಿಷ್ಠೆಯಿಂದ ತಮಗೊದಗಬಹುದಾದ ಅನುಕೂಲಗಳನ್ನು ಚೆನ್ನಾಗಿಯೇ ಉಪಯೋಗಿಸಿಕೊಂಡು ದಾನ-ದಕ್ಷಿಣೆಗಳ ಪ್ರಮಾಣದಲ್ಲಿ ಹೆಚ್ಚಳವುಂಟಾದಂತೆ ಸರಳವಾಗಿದ್ದಂಥ ಯಜ್ಞವಿಧಿಗಳು ಸಂಕೀರ್ಣ ವ್ಯವಸ್ಥೆಯಾಗಿ ರೂಪುಗೊಳ್ಳುವಂತೆ ನೋಡಿಕೊಳ್ಳುತ್ತಿದ್ದರು. ಇಂತಹ ಯಜ್ಞಗಳು ಬ್ರಾಹ್ಮಣರಿಗೆ ಭಾರಿ ಬೆಲೆಯ ಉಡುಗೊರೆಗಳನ್ನು ನೀಡುವ ಅಟ್ಟಹಾಸದೊಂದಿಗೆ ಮುಕ್ತಾಯವಾಗುತ್ತಿದ್ದವು.

ಕ್ರಮೇಣವಾಗಿ ಬ್ರಾಹ್ಮಣವರ್ಗ ಜನರ ಧಾರ್ಮಿಕ ಭಾವನೆಯನ್ನು ಸೂರೆಗೊಳ್ಳುವುದರಿಂದ ಸಮಾಜದಲ್ಲಿ ತಮಗೆ ದೊರಕಬಹುದಾದ ಸ್ಥಾನಮಾನವನ್ನು ಉಪಯೋಗಿಸಿಕೊಂಡು ಆ ಗುರಿಯತ್ತ ಸಾಗತೊಡಗಿತು. ಆ ಊಹೆ ಕೇವಲ ಊಹೆಯಾಗದೇ ವಾಸ್ತವ ಸತ್ಯವಾಗಿ ನಂತರದ ಕಾಲಮಾನದಲ್ಲಿ ಸಾಧಿಸಲ್ಪಟ್ಟಿತು. ಹೀಗಾಗಿ ಯಜ್ಞಶಾಲೆಗಳೇ ಶಾಸನ ಸಭೆಗಳಾಗಿ ಪರಿವರ್ತನೆಗೊಂಡವು. ಪುರೋಹಿತರಿಲ್ಲದೆಯೂ ಋಗ್ವೇದ ಕಾಲದಲ್ಲಿ ಯಜ್ಞ ನಡೆಯುತ್ತಿತ್ತು. ಆದರೆ ಈಗ ಪುರೋಹಿತರಿಲ್ಲದೆಯೇ ಯಜ್ಞಗಳನ್ನು ನಡೆಸುತ್ತಿದ್ದವರ ಹಕ್ಕುಗಳನ್ನು ನಿಷೇಧಿಸುವಂತಹ ಕಾನೂನುಗಳು ಯಜ್ಞದ ಜ್ವಾಲೆಯಿಂದ ಚಿಮ್ಮಲಾರಂಭಿಸಿದವು. ಐತರೇಯ ಬ್ರಾಹ್ಮಣವು 'ಇಡೀ ಯಜ್ಞ ಪುರೋಹಿತರಿಂದ ಆಧಾರಿತವಾಗಿದೆ. ಯಜ್ಞದಿಂದಲೇ ಯಾಜ್ಞಿಕ ಬದುಕಿದ್ದಾನೆ' ಎಂದು ಸಾರಿತು (ii, ೩೨).

ಕೊನೆಕೊನೆಗೆ ಕ್ಷತ್ರಿಯರ ಮೇಲೆ ಬ್ರಾಹ್ಮಣರ ಹಿಡಿತ ಎಷ್ಟಾಯಿತೆಂದು 'ಐತರೇಯ ಬ್ರಾಹ್ಮಣ'ದ ಈ ಭಾಗದಿಂದ ತಿಳಿದುಕೊಳ್ಳಬಹುದು:

''ಕುಲಪುರೋಹಿತರಿಲ್ಲದೇ ರಾಜ ನೀಡಿದ ನೈವೇದ್ಯವನ್ನು ದೇವತೆಗಳು ಸೇವಿಸುವುದಿಲ್ಲ. ಆದ್ದರಿಂದ ರಾಜ ಯಜ್ಞ ಮಾಡುವ ಉದ್ದೇಶವಿಲ್ಲದಿದ್ದರೂ ಸಹ ಬ್ರಾಹ್ಮಣನನ್ನು ಕುಲಪುರೋಹಿತನನ್ನಾಗಿ ನೇಮಕ ಮಾಡಿಕೊಳ್ಳಬೇಕು. ಕುಲಪುರೋಹಿತರನ್ನು ಅಗ್ನಿ ವೈಶ್ವಾನರ ಎಂದು ದೈವೀಕರಿಸಲಾಗಿದೆ. ಅವನು ಐದು ಮಾರಕ ಅಗ್ನಿಗಳನ್ನು ಪಡೆದಿದ್ದಾನೆ. ಒಂದು ಅವನ ಮಾತುಗಳಲ್ಲಿದೆ. ಇನ್ನೊಂದು ಅವನ ಪಾದಗಳಲ್ಲಿದೆ; ಮತ್ತೊಂದು ಅವನ ಚರ್ಮದಲ್ಲಿದೆ; ಇನ್ನೊಂದು ಅವನ ಹೃದಯದಲ್ಲಿದೆ; ಮತ್ತೊಂದು ಅವನ ಜನನಾಂಗದಲ್ಲಿದೆ. ಪ್ರಜ್ವಲಿಸುತ್ತಿರುವ ಈ ಶಕ್ತಿಗಳಿಂದ ಆತ ರಾಜನ ಮೇಲೆ ದಾಳಿ ನಡೆಸುತ್ತಾನೆ. ಆಗ ಅವನು ಆಸೀನನಾಗಲು ಚಾರಕರು ದರ್ಭೆಯನ್ನು ಹಾಕುತ್ತಾರೆ. ಅವನ ಮಾತಿನಲ್ಲಿರುವ ವಿನಾಶಕರ ಶಕ್ತಿಯನ್ನು ರಾಜ ಶಮನ ಮಾಡುತ್ತಾನೆ. ಅವನನ್ನು ವಸ್ತ್ರಾಭರಣಗಳಿಂದ ಅಲಂಕರಿಸಿ ಅವನ ಚರ್ಮದಲ್ಲಿರುವ ವಿನಾಶಕರ ಶಕ್ತಿಯನ್ನು ಒಲಿಸಿಕೊಳ್ಳುತ್ತಾನೆ. ಅವನ ಪಾದಗಳನ್ನು ತೊಳೆಯುವುದರಿಂದ ರಾಜ ಅವನ ಪಾದಗಳಲ್ಲಿರುವ ಶಕ್ತಿಯನ್ನು ಒಲಿಸಿಕೊಳ್ಳುತ್ತಾನೆ. ಭೂರಿಭೋಜನವನ್ನೇರ್ಪಡಿಸಿ ಅವನನ್ನು ಸಂತೃಪ್ತಿಗೊಳಿಸುವುದರಿಂದ ಅವನ ಹೃದಯದಲ್ಲಿರುವ ಶಕ್ತಿಯನ್ನು ರಾಜ ಒಲಿಸಿಕೊಳ್ಳುತ್ತಾನೆ.

''ಅರಮನೆಯ ಆವರಣದಲ್ಲಿ ಅವನು ಅಂಕೆಶಂಕೆಯಿಲ್ಲದೆ ಇರಲು ಬಿಟ್ಟರೆ ಪುರೋಹಿತನ ಜನನಾಂಗದಲ್ಲಿರುವ ವಿನಾಶಕರ ಶಕ್ತಿಯನ್ನು ಶಮನಗೊಳಿಸಿದಂತಾಗುತ್ತದೆ. (ಪಾನಮತ್ತ ಆಮೋದ ಪ್ರಮೋದಗಳು ಕಡಿಮೆಯಾಗಿರಲಿಲ್ಲ. ಪುರೋಹಿತರು ಸುಂದರವಾದ ಉಯ್ಯಾಲೆಗಳಲ್ಲಿ ಕುಳಿತಿರುತ್ತಿದ್ದರು. ಸುತ್ತಲೂ ನರ್ತಕಿಯರು ನರ್ತಿಸುತ್ತಿದ್ದರು. ಸಂಗೀತ ಅದಕ್ಕೆ ಶೋಭೆಯನ್ನು ನೀಡುತ್ತಿತ್ತು. ಅಶ್ಲೀಲ ಸಂಭಾಷಣೆಗಳಿಗೆ ಅವಕಾಶವಿತ್ತು. ಪಗಡೆಯಾಟ ನಡೆಯುತ್ತಿತ್ತು. ಸುಂದರಿಯರೊಂದಿಗೆ ಪುರೋಹಿತರು ರಮಿಸುತ್ತಿದ್ದರು. ಇವೆಲ್ಲಕ್ಕೂ ರಾಜ ಅವಕಾಶ ಮಾಡಿಕೊಡಬೇಕಾಗಿತ್ತು.) ಅವನ ದೇಹದಲ್ಲಿರುವ ಈ ಎಲ್ಲ ಮಾರಕ ಶಕ್ತಿಗಳನ್ನು ಒಲಿಸಿಕೊಂಡ ಮೇಲೆ ಅವನು ರಾಜನ ಯಜ್ಞಾಕಾಂಕ್ಷೆಯ ಬಗ್ಗೆ ಸುಪ್ರೀತನಾಗಿ ಅವನನ್ನು ಸ್ವರ್ಗಲೋಕಕ್ಕೆ ಕಳುಹಿಸುತ್ತಾನೆ; ಅವನಿಗೆ ರಾಜಗಾಂಭೀರ್ಯವನ್ನೂ ಶೂರತ್ವವನ್ನೂ, ಆಳ್ವಿಕೆ ಮಾಡಲು ರಾಜ್ಯ ಮತ್ತು ಪ್ರಜೆಗಳನ್ನೂ ದಯಪಾಲಿಸುತ್ತಾನೆ. ರಾಜ ಹೀಗೆ ಮಾಡದಿದ್ದರೆ ಈ ಎಲ್ಲ ವರಗಳೂ ಆತನಿಗೆ ಇಲ್ಲವಾಗುತ್ತವೆ.'' (ಐ.ಬ್ರಾ. viii, ೨೪)

'ವೇನ' ಎಂಬ ಮಹಾರಾಜ ಬ್ರಾಹ್ಮಣ ನಿರ್ಮಿತ ಕಟ್ಟುಪಾಡುಗಳನ್ನು ಉಲ್ಲಂಘಿಸಿದ ಕಾರಣ ಅವನನ್ನು 'ತಪಸ್‌ಶಕ್ತಿಯಿಂದ ನಾಶ'ಗೊಳಿಸಿದ ಕಥೆಯೊಂದು ಮಹಾಭಾರತದಲ್ಲಿ ಬರುತ್ತದೆ. ನಂತರ ಮಗ ಪೃಥುವನ್ನು ಸಿಂಹಾಸನದ ಮೇಲೆ ಕೂರಿಸಿ ಅವನಿಗೆ ಹೀಗೆನ್ನುತ್ತಾರೆ: 'ನೀನು ಬ್ರಾಹ್ಮಣರನ್ನು ಶಿಕ್ಷಿಸುವುದಿಲ್ಲವೆಂದೂ ವರ್ಣಸಂಕರವನ್ನು ನಿಲ್ಲಿಸುತ್ತೇನೆಂದೂ ಪ್ರಮಾಣ ಮಾಡು.'

ತಾವು ಪುರೋಹಿತ ವರ್ಗದ ಗುಲಾಮರಾಗುತ್ತಿರುವುದು ಕ್ರಮೇಣ ಕ್ಷತ್ರಿಯರ ಅರಿವಿಗೆ ಬಂತು. ಅವಮಾನಕರ ದಾಸ್ಯತನವನ್ನು ಕೊನೆಗೊಳಿಸಲು ಮತ್ತು ಧಾರ್ಮಿಕ ವಿಷಯವಾಗಿ ವಿದ್ವತ್ತಿನಲ್ಲಿ ತಾವು ಸರಿಸಮಾನರೆಂದು ಪುರೋಹಿತರಿಗೆ ತೋರಿಸಲು ಕ್ಷತ್ರಿಯರು ಪ್ರಯತ್ನಿಸಿದರು.

ಪ್ರಾಯಶಃ ವರ್ಣಾಶ್ರಮಧರ್ಮದ ವಿಷಯವಾಗಿ ಇವರೀರ್ವರ ನಡುವೆ ನಡೆಯುತ್ತಿದ್ದ ತಿಕ್ಕಾಟವನ್ನು ವಸಿಷ್ಠ-ವಿಶ್ವಾಮಿತ್ರರ ಹೋರಾಟ ಪ್ರತಿನಿಧಿಸುತ್ತದೆ. ಧಾರ್ಮಿಕ ವಿಷಯಗಳನ್ನು ಬ್ರಾಹ್ಮಣ ವರ್ಗದವರು ತಮಗೆ ಮಾತ್ರ ನಿಗದಿಗೊಳಿಸಿಕೊಳ್ಳುವುದನ್ನು ಕ್ಷತ್ರಿಯರು ವಿರೋಧಿಸುವುದನ್ನು ಅದು ಬಿಂಬಿಸುತ್ತದೆ. ಕ್ಷತ್ರಿಯನೇಕೆ ಪುರೋಹಿತನಾಗಬಾರದು ಎಂಬುದು ಒಟ್ಟಾರೆಯಾಗಿ ಈ ಹೋರಾಟದ ಸಾರಾಂಶ.

ಇನ್ನು ಹಿರಣ್ಯಕಶಿಪು, ಬಲಿ ಮತ್ತು ಶ್ರೀರಾಮನ ವೃತ್ತಾಂತವನ್ನು ಒಂದೊಂದನ್ನಾಗಿ ನೋಡೋಣ.

ತಾವು ನೇರವಾಗಿ ಬ್ರಹ್ಮನಿಂದಲೇ ಸೃಷ್ಟಿಯಾಗಿದ್ದೇವೆಂಬಂಥ ಮಾತುಗಳಿಂದ ಮತ್ತು ತಾವೇ ರೂಪಿಸಿದ ವಿಧಿಗಳನ್ನು ಕಡ್ಡಾಯ ಆಚರಣೆಗಳನ್ನಾಗಿಸಿ ಬ್ರಾಹ್ಮಣ ವರ್ಗ ನಿಸ್ಸಂದೇಹವಾಗಿ ಕ್ಷತ್ರಿಯ ವರ್ಗದ ಮೇಲೆ ಹಿಡಿತ ಸಾಧಿಸಿತು. ಕ್ಷತ್ರಿಯರಿಗಿಂತ ತಾವು ಮೇಲೆಂಬ ಭಾವನೆಯನ್ನು ಜನರ ಮನದಲ್ಲಿ ರೂಪಿಸಿದ್ದರಿಂದ ಪುರೋಹಿತ ವರ್ಗ ತನ್ನ ಮಹತ್ವಾಕಾಂಕ್ಷೆಯ ಕ್ಷೇತ್ರವನ್ನು ವಿಸ್ತರಿಸಿಕೊಂಡು ತನ್ನ ಹಕ್ಕುಗಳನ್ನು ಘೋಷಿಸಿಕೊಂಡಿತು. ಹೀಗಾಗಿ ಆದಿವಾಸಿಗಳನ್ನು ಅವರ ನಾಯಕರುಗಳನ್ನು ವ್ಯವಸ್ಥಿತವಾಗಿ ಸಂಘಟಿಸುವ ಪ್ರಕ್ರಿಯೆಗೆ ಚಾಲನೆ ದೊರಕಿತು.

ಹಿರಣ್ಯಕಶಿಪುವಿನ ಮಗ ಪ್ರಹ್ಲಾದನು ವಿದೇಶೀ ಆರ್ಯರಿಗೆ ಸಹಾನುಭೂತಿ ತೋರಬೇಡವೆಂದು ಎಚ್ಚರಿಸಿದರೂ ಆರ್ಯ ಜೀವನ ದೃಷ್ಟಿಯನ್ನು ಸ್ವೀಕರಿಸಿದನು. ಆರ್ಯರೊಂದಿಗೆ ಸಹಮತ ಇಲ್ಲದಂತಹ ಹಿರಣ್ಯಕಶಿಪುವನ್ನು ಸಿಂಹಾಸನದಿಂದ ಕೆಳಗಿಳಿಸಲು ನಡೆಸಿದ ಸಂಚುಗಳನ್ನು ರೂಪಕಾತ್ಮಕ ಭಾಷೆಯಲ್ಲಿ ವರ್ಣಿಸಲಾಯಿತು. ಈ ರಹಸ್ಯ ಒಳಸಂಚಿನ ಸುತ್ತ ಹೆಣದುಕೊಂಡಿರುವ ನರಸಿಂಹಾವತಾರದ ಕಥೆಯು ಆ ಕಾಲದ ಆರ್ಯರ ರಾಜಕೀಯದ ಮೇಲೆ, ಅದರಲ್ಲೂ ವಿಶೇಷವಾಗಿ ಪುರೋಹಿತಶಾಹಿಯ ರಾಜಕೀಯದ ಮೇಲೆ ಬೆಳಕನ್ನು ಬೀರುತ್ತದೆ. ಕೊನೆಗೆ ಹಿರಣ್ಯಕಶಿಪುವಿನ ಕೊಲೆಯನಂತರ ಈ ಪ್ರಹಸನ ಮುಕ್ತಾಯವಾಗುತ್ತದೆ. ಆಮೇಲೆ ಪ್ರಹ್ಲಾದನ್ಯಾರೋ... ಪುರೋಹಿತರ್‍ಯಾರೋ..?

ಮುಂದೆ ಪ್ರಹ್ಲಾದನ ಮೊಮ್ಮಗ ಬಲಿಯ ಆಡಳಿತೆಯಲ್ಲಿ ಆದಿವಾಸಿಗಳ ಶಕ್ತಿ ಸಂಘಟಿತವಾಗತೊಡಗಿತು. ಆರ್ಯ ನಾಗರಿಕತೆಯನ್ನು ಒಪ್ಪಿಕೊಂಡಿದ್ದ ತಮ್ಮ ರಾಜನನ್ನು ಪ್ರಜೆಗಳು ಪದೇಪದೇ ವಿದೇಶೀ ನೆಲಸಿಗರಾದ ಆರ್ಯರ ಮೇಲೆ ಯುದ್ಧ ಸಾರಲು ಪ್ರೇರೇಪಿಸಲು ಯತ್ನಿಸಿದರು. ಬಲಿಯ ಶಕ್ತಿ ಯಾವ ಮಟ್ಟದಲ್ಲಿದ್ದಿತೆಂದರೆ ಅವನ ರಾಜಕೀಯ ಮತ್ತು ಸೈನಿಕ ಸಿದ್ಧತೆಗಳು ಅವನು ಪ್ರಾಚೀನ ಭಾರತದ ಚಕ್ರವರ್ತಿಯಾಗುವ ಎಲ್ಲ ಲಕ್ಷಣಗಳನ್ನು ಹೊಂದಿದ್ದವು. ಇಂತಹ ಪ್ರಾಬಲ್ಯವನ್ನು ಹೊಂದಿದ್ದಂತಹ ಬಲಿ ಆದಿವಾಸಿ ಕ್ಷತ್ರಿಯನಾಗಿದ್ದುದರಿಂದ ತಮಗುಂಟಾಗಬಹುದಾದ ಅಪಾಯವನ್ನು ಶಂಕಿಸಿದ ಪುರೋಹಿತವರ್ಗ ಅವನ ಅಂಧಶ್ರದ್ಧೆಯನ್ನು ತಮ್ಮ ಅನುಕೂಲಕ್ಕಾಗಿ ಚೆನ್ನಾಗಿಯೇ ಬಳಸಿಕೊಂಡರು. ಒಡಂಬಡಿಕೆಯ ಕರಡಿಗೆ ಸಮ್ಮತಿಸಲು ಅವನನ್ನು ಒಪ್ಪಿಸಲಾಯಿತು ಮತ್ತು ನಂತರ ಅವನನ್ನು ಮಟ್ಟ ಹಾಕಿ ಪುರೋಹಿತಶಾಹಿ ಸಾರ್ವಭೌಮತ್ವವನ್ನು ಸ್ಥಾಪಿಸಲಾಯಿತು. ಇಂತಹ ಧೂರ್ತ ರಾಜಕೀಯದ ರೂಪುರೇಷೆಯನ್ನು ಅವನಾಗಲೇ ಅನುಭವಿಸಿದ್ದರಿಂದ ಪ್ರಹ್ಲಾದನು ಚೆನ್ನಾಗಿ ಗುರುತಿಸಿದ್ದನು ಮತ್ತು 'ವಾಮನ'ನ ಕೋರಿಕೆಯನ್ನು ಈಡೇರಿಸಲು ಸಮ್ಮತಿಸುವ ಮೊದಲು ಆಳವಾಗಿ ಪರಿಶೀಲಿಸಲು ಬಲಿಗೆ ಗಂಭೀರ ಸಲಹೆಯನ್ನು ನೀಡಿದ್ದನು. ಒಂದೇ ಒಂದು ಹನಿ ರಕ್ತವನ್ನು ಚೆಲ್ಲದೆ, ನಿಮಿಷ ಮಾತ್ರದ ಯುದ್ಧ ಕೂಡ ನಡೆಯದೆ ಕ್ಷತ್ರಿಯರು ಬ್ರಾಹ್ಮಣರ ಕೈಯಲ್ಲಿ ಉಪಕರಣಗಳಾಗಿ ಬಿಟ್ಟರು. ಇಡಿಯ ಕ್ಷತ್ರಿಯ ಕುಲ ಒಮ್ಮೆಗೆ ಮಿಡುಕಿತು.... ಪ್ರಹ್ಲಾದನ ಸಲಹೆ ನಿಷ್ಪ್ರಯೋಜಕವಾಯಿತು.....

ಮುಂದೆ ನಡೆದದ್ದು ಕ್ಷತ್ರಿಯ ಯುವಕನೋರ್ವನಿಂದ ಖ್ಯಾತ ಬ್ರಾಹ್ಮಣ ಜಮದಗ್ನಿಯ ಮೂದಲಿಕೆ ಹಾಗೂ ಕೊಲೆ.... ಅವನಿಗೆ ನೂರಾರು ಕ್ಷತ್ರಿಯರಿಂದ ದೊರಕಿದ ಸಹಾನುಭೂತಿ.... ಹಲವೆಡೆ ಪುರೋಹಿತರ ಅವಮಾನ, ಬ್ರಾಹ್ಮಣ ರಾಜಕೀಯ ರಚನೆಯ ಮೂಲೋತ್ಪಾಟನೆಯ ಯತ್ನ, ಪರಿಣಾಮವಾಗಿ ಕ್ಷತ್ರಿಯ ಕುಲದ ಮೇಲೆ ಭಯಾನಕ ಯುದ್ಧ ಸಾರಿದ ಪರಶುರಾಮ ಮತ್ತು ಆತ ಕ್ಷತ್ರಿಯ ರಾಜ ರಾಮನನ್ನೆದುರಿಸುವವರೆಗೆ ಬ್ರಾಹ್ಮಣ ವರ್ಗದ ದಿಗ್ವಿಜಯ....

ರಾಮನಿಗೆ ಪಟ್ಟಾಭಿಷೇಕವಾಗದಂತೆ ತಡೆದ ಮಂಥರೆ ಕೇವಲ ರೂಪಕ ಅಷ್ಟೆ. ಅವಳ ಹಿಂದೆ ಬ್ರಾಹ್ಮಣ ವರ್ಗದ ಕೈವಾಡವಿತ್ತು ಎಂಬುದು ರಾಮಾಯಣವನ್ನು ಸೂಕ್ಷ್ಮವಾಗಿ ನೋಡಿದರೆ ತಿಳಿಯುವಂತಹ ವಿಷಯ. ರಾಜಕುಮಾರ ರಾಮನು ಕ್ಷತ್ರಿಯವರ್ಗ ಘೋಷಿಸಿಕೊಂಡಿದ್ದ ಗುಲಾಮತನವನ್ನು ಒಪ್ಪಿಕೊಳ್ಳದೇ ಯಜ್ಞಗಳ ಕುರಿತು ಪುರೋಹಿತರು ಸೃಷ್ಟಿಸಿದ ಸಿದ್ಧಾಂತಗಳನ್ನು ಪ್ರಶ್ನಿಸುತ್ತಾ ಪ್ರತಿಭಟನಾ ಶಕ್ತಿಯನ್ನು ಪ್ರದರ್ಶಿಸಿದ್ದನು. ಆತನ ಅನ್ವೇಷಕ ಪ್ರಶ್ನೆಗಳ ಪರಿಣಾಮವಾಗಿ 'ಯೋಗವಾಸಿಷ್ಠ'ವೆಂಬ ಗ್ರಂಥವು ರೂಪುಗೊಂಡಿತು.

ವಸಿಷ್ಠನಿಗೆ ಸವಾಲೊಡ್ಡಿದ್ದ ಕ್ಷತ್ರಿಯ ವಿಶ್ವಾಮಿತ್ರನ ಒಡನಾಟದಲ್ಲಿ ರಾಮನಿದ್ದುದೂ ಕೂಡಾ ಬ್ರಾಹ್ಮಣರಿಗೆ ಸಹ್ಯವಾಗಲಿಲ್ಲ. ಇವೆಲ್ಲಕ್ಕಿಂತ ಮುಖ್ಯವಾಗಿ ರಾಮ, ಜನಕ ಮಹಾರಾಜನ ಪುತ್ರಿ ಸೀತೆಯನ್ನು ವರಿಸಿದ್ದು ಪುರೋಹಿತರಿಗೆ ತಡೆದುಕೊಳ್ಳಲಾಗಲಿಲ್ಲ. ಏಕೆಂದರೆ ವೇದಗಳಿಗೆ ಸಂವಾದಿಯಾಗಿ ಅಥವಾ ಸಂಘರ್ಷಾತ್ಮಕವಾಗಿ ಉಪನಿಷತ್ ಚಳುವಳಿಯನ್ನು ಆರಂಭಿಸಿದವನು ಜನಕ. ಅಂದರೆ ಬ್ರಾಹ್ಮಣ ಧರ್ಮದ ವಿರುದ್ಧ ಸಾಗಿದ ಬೌದ್ಧಿಕ ಚಳುವಳಿಯ (ಕ್ರಾಂತಿಯ) ನೇತಾರನಾಗಿದ್ದುಕೊಂಡು ಅದನ್ನು ಮುನ್ನಡೆಸಿದವನು ಜನಕ ಮಹಾರಾಜ. ಆದ್ದರಿಂದ ರಾಮ ತಂದೆ ದಶರಥನಂತೆ ತಮಗೆ ವಿಧೇಯತನವನ್ನು ತೋರಲಾರ ಎಂದು ಭಾವಿಸಿ ರಾಮನಿಗೆ ಪಟ್ಟಾಭಿಷೇಕವಾಗದಂತೆ ತಡೆಗಟ್ಟಲು ಬ್ರಾಹ್ಮಣರು ನಿರ್ಧರಿಸಿದರು. ಹೀಗಾಗಿ ದುರ್ಬಲ ಮನಸ್ಸಿನ ದಶರಥ ರಾಮನನ್ನು ಕಾಡಿಗಟ್ಟಿ ದುಃಖದಿಂದ ತಾನು ಅಂತ್ಯವನ್ನು ಕಂಡುಕೊಂಡನು.

ನಂತರ ರಾವಣನನ್ನು ಸೋಲಿಸಿದ ಮಹಾವೀರನಾಗಿ, ಆದರೆ ಹಲವಾರು ಕಾರಣಗಳಿಂದ ಮಾನಸಿಕವಾಗಿ ಜರ್ಜರಿತನಾಗಿ, ಸೀತೆಯೊಂದಿಗೆ ರಾಮ ಹಿಂತಿರುಗಿದಾಗ ಮತ್ತೆ ಪುರೋಹಿತರಿಗೆ ಸಂಕಟಕ್ಕಿಟ್ಟುಕೊಂಡಿತು. ಮಾನಸಿಕವಾಗಿ ಜರ್ಜರಿತನಾದ ಆತನನ್ನು ತಮ್ಮ ಅಧಿಕಾರವನ್ನು ಒಪ್ಪಿಕೊಳ್ಳುವಂತೆ ಸುಲಭವಾಗಿ ಮಾಡಬಹುದೆಂದು ಲೆಕ್ಕ ಹಾಕಿದರು. ಆದರೆ ಜನಕನ ನೆಂಟಸಿಕೆ ಇರುವ ತನಕ ಆತನನ್ನು ಒಲಿಸಿಕೊಳ್ಳಲು ಅಸಾಧ್ಯವಾಗಿತ್ತು. ಜನಕನಿಂದ ಆತನನ್ನು ಬೇರ್ಪಡಿಸಲು ಆತನ ಮನಃಸ್ಥಿತಿ ಅನುಕೂಲಕರವಾಗಿತ್ತು. ಕೊನೆಗೆ ಸೀತೆಯ ಪರಿತ್ಯಾಗ ಮಾಡುವುದರ ಮೂಲಕ ಜನಕನ ನೆಂಟಸ್ತಿಕೆಯನ್ನು ತ್ಯಜಿಸುವಂತೆ ಆತನನ್ನು ಒತ್ತಾಯಿಸಿದರು ಮತ್ತು ಸಫಲರೂ ಆದರು. ತನ್ನ ಮಾವನನ್ನು ಆದರ್ಶವಾಗಿರಿಸಿ ಇನ್ನೊಂದು ಬ್ರಾಹ್ಮಣ ವಿರೋಧಿ ಕ್ರಾಂತಿಯನ್ನು ಪ್ರಾರಂಭಿಸಲು ವಿಪುಲ ಅವಕಾಶಗಳಿದ್ದರೂ ಅದಕ್ಕೆ ಬದಲಾಗಿ, ತನ್ನ ವಿವೇಕಕ್ಕೆ ವಿರುದ್ಧವಾಗಿ ಪ್ರೀತಿಯ ಸೀತೆಯನ್ನು ಪರಿತ್ಯಜಿಸಲು ಒಪ್ಪಿಕೊಳ್ಳುತ್ತಾನೆ.

ಅಂತಿಮವಾಗಿ ಸೀತೆ ಕಾಡು ಪಾಲಾದಳು... ಅದರೊಂದಿಗೆ ಕ್ಷತ್ರಿಯರಲ್ಲಿ ಉಳಿದಿದ್ದ ಪ್ರತಿಭಟನಾ ಶಕ್ತಿಯೂ......

ಬ್ರಾಹ್ಮಣರು ರಾಮನ ಮೇಲೆ ಸಾಧಿಸಿದ ಸಂಪೂರ್ಣ ಪ್ರಾಬಲ್ಯವನ್ನು, ಬ್ರಾಹ್ಮಣರು ಮಾತ್ರ ಮಾಡಲು ಹಕ್ಕಿರುವ ತಪಸ್ಸನ್ನು ಶೂದ್ರ ಆಚರಿಸಿದ ಅಪರಾಧಕ್ಕಾಗಿ ಅವರ ಅಪ್ಪಣೆಯಂತೆ ರಾಮ ಶಂಬೂಕನ ಶಿರಚ್ಛೇದನವನ್ನು ಮಾಡುವಲ್ಲಿ ಕಾಣಬಹುದು.

ಕ್ಷತ್ರಿಯ ವರ್ಗ ಅನುಭವಿಸಿದ ಈ ಪರಾಭವವು, ಈ ಬೌದ್ಧಿಕ ಪತನವು ಇಡಿಯ ಕ್ಷತ್ರಿಯ ಸಮುದಾಯದ ಒಂದು ಐತಿಹಾಸಿಕ ಪರಾಭವವೆಂದು ಗುರುತಿಸಬಹುದು. ಬ್ರಾಹ್ಮಣರನ್ನು ಎದುರು ಹಾಕಿಕೊಂಡು ಪ್ರತಿಭಟಿಸುವ ಶಕ್ತಿ, ಎದೆಗಾರಿಕೆ ಇನ್ನೆಷ್ಟು ಮಾತ್ರಕ್ಕೂ ಅವರಲ್ಲಿ ನಂತರ ಉಳಿಯದಿರುವುದನ್ನು ನಾವು ಕಾಣುತ್ತೇವೆ.

ಪ್ರಸ್ತುತ ಬದುಕಿನ ಕುರಿತು ಪ್ರಾಚೀನ ಭಾರತದ ಈ ಸಂಘರ್ಷ ಏನನ್ನಾದರೂ ಸೂಚಿಸುತ್ತದೆಯೆ ?


**ಶ್ರೀಶ ಉಡುಪ**

ಕೈಕಂಬ, ಅಜೆಕಾರು, ಕಾರ್ಕಳ ತಾ।, ಉಡುಪಿ ಜಿ। - ೫೭೪ ೧೦೧



# ಸಂಸ್ಕೃತಿ ಮತ್ತು ಧರ್ಮ

ಎಸ್. ಎಸ್. ಹಿರೇಮಠ

ಇವನ್ನೆಲ್ಲ ನಮ್ಮವನ್ನಾಗಿ ಮಾಡಿಕೊಳ್ಳುವ ಅಸಾಂಪ್ರದಾಯಿಕ ಶಿಕ್ಷಣ ಕ್ರಮ "ಓಪನ್ ಯುನಿವರ್ಸಿಟಿ"ಯಂಥ ಸಂಸ್ಥೆಗಳ ಮೂಲಕ ಎಷ್ಟರಮಟ್ಟಿಗೆ ಸಫಲವಾಗುತ್ತಿದೆಯೋ ನೋಡಬೇಕು. ಇದು ವ್ಯಾಪಕ "ರೂಢಿ"ಯಾಗಿ ನಮ್ಮಲ್ಲಿಲ್ಲ. ಎಲ್ಲ ಜ್ಞಾನಶಿಸ್ತುಗಳನ್ನು ಅರಿತೇ ಬದುಕು ಸಾಗಿಸಬೇಕಿಲ್ಲವಾದ್ದರಿಂದ ಮತ್ತು ಅವುಗಳ ಅಷ್ಟಿಷ್ಟು ತಿಳುವಳಿಕೆ ಬದುಕುವದಕ್ಕೆ ಸಾಕಾಗುವುದರಿಂದ ಈ "ರೂಢಿ"ಯ ಬಗ್ಗೆ ತಲೆಕೆಡಿಸಿಕೊಳ್ಳುತ್ತಿಲ್ಲ.

ಆದರೆ ಸಾಮಾಜಿಕ ಬದುಕು ಹೆಚ್ಚು ಹೆಚ್ಚು ಸುಂದರವಾಗಬೇಕು, ಪ್ರಗತಿಪರವಾಗಿರಬೇಕು ಎಂಬ ಹಂಬಲವೇ "ಸಂಸ್ಕೃತಿ"ಯ ಮೂಲಭೂತ ಆಶಯ. ಇದು ಕೈಗೂಡಬೇಕಾದರೆ "ಅಷ್ಟಿಷ್ಟು" ತಿಳುವಳಿಕೆ ಯಾವುದಕ್ಕೂ ಸಾಲದು. ಆಧುನಿಕ ಮಾನವ ಎದುರಿಸುತ್ತಿರುವ ಹಲವಾರು ಬಗೆಯ ಸಮಸ್ಯೆಗಳಿಗೆ, "ಅರಿವು" ಸಮರ್ಪಕವಾಗಿ ಹೆಚ್ಚುತ್ತ ಹೋಗಬೇಕಾದ ಜರೂರಿದೆ. ಇದನ್ನು ಜ್ಞಾನಕ್ರಮದಲ್ಲಿ, ಅಂದರೆ ಶಾಲೆ, ಕಾಲೇಜು, ವಿಶ್ವವಿದ್ಯಾಲಯದಂಥ ಸಾಂಪ್ರದಾಯಿಕ ಶಿಕ್ಷಣ ವ್ಯವಸ್ಥೆಯಲ್ಲಿ ಅಳವಡಿಸುವ ಕುರಿತು ಗಂಭೀರವಾಗಿ ಆಲೋಚಿಸಬೇಕಿದೆ. ಒಂದು ಬಗೆಯ ಕುರುಡು ಗ್ರಹಿಕೆ ಪಠ್ಯಗಳನ್ನು ಅಳವಡಿಸುವ ಶಿಕ್ಷಣ ಪ್ರಕ್ರಿಯೆಯನ್ನು ಮುಂದುವರಿಸಿಕೊಂಡು ಹೋಗುವುದರಲ್ಲಿ ಅಂತರ್ಗತವಾಗಿದೆ. ಇಂಥ ಕುರುಡು ಗ್ರಹಿಕೆಗಳಲ್ಲಿ ಹಿಂದೊಮ್ಮೆ ಅರ್ಥ ಕಂಡಿದ್ದಿರಬಹುದು. ಆದರೆ ಅವೇನೇ ಇಂದಿಗೂ ಮಾದರಿಗಳಾಗಬೇಕಿಲ್ಲ. ಹೊಸ ಬೆಳಕಿನಲ್ಲಿ ಅವನ್ನೆಲ್ಲ ಆಗಾಗ ಪರಿಷ್ಕರಿಸುತ್ತಿರಬೇಕು. ಉದಾಹರಣೆಗೆ – "ಸಂಸ್ಕೃತಿ" ಸಮಾಜಶಾಸ್ತ್ರ (ಸೋಶಿಯಾಲಜಿ) ಇಲ್ಲವೆ ಹೆಚ್ಚು ಸಮರ್ಪಕವಾಗಿ ಹೇಳುವುದಾದರೆ ಮಾನವಶಾಸ್ತ್ರಕ್ಕೆ (ಅಂಥ್ರಪಾಲಾಜಿ) ಸಂಬಂಧಿಸಿದ ಪರಿಭಾಷೆ. "ಧರ್ಮ"ವನ್ನು ಮುಖ್ಯವಾಗಿ ತತ್ವಶಾಸ್ತ್ರದ (ಫಿಲಾಸಫಿ) ಪರಿಭಾಷೆಯಾಗಿ ನೋಡುವುದು ಸೂಕ್ತ. ಇವನ್ನು ಈ ರೀತಿ ಪರಿಭಾವಿಸಿಕೊಳ್ಳುವುದರ ಅಗತ್ಯವೇನೆಂದರೆ ಈ ಕ್ಷೇತ್ರಗಳಲ್ಲಿ ಹುಟ್ಟಿರುವ ಸಮಸ್ಯೆಗಳಿಗೆ ಈ ಜ್ಞಾನಶಿಸ್ತುಗಳಲ್ಲೇ ಪರಿಹಾರ ಕಂಡುಕೊಳ್ಳಬೇಕಾಗುತ್ತದೆನ್ನುವುದರಿಂದ. ಸಂಸ್ಕೃತಿಯಲ್ಲಿ ಧರ್ಮವನ್ನು ಬೆರೆಸುತ್ತಿರುವ ಆಧುನಿಕ ಪ್ರಯತ್ನಗಳ ಕುರಿತು ಇಲ್ಲಿ ಯೋಚಿಸಲಾಗಿದೆ.

ನಮ್ಮ ಬದುಕಿಗೆ ಒಂದಿಷ್ಟು "ಅರ್ಥಶಾಸ್ತ್ರ", "ರಾಜ್ಯಶಾಸ್ತ್ರ", "ತತ್ವಶಾಸ್ತ್ರ", "ರಸಾಯನಶಾಸ್ತ್ರ", "ಜೀವಶಾಸ್ತ್ರ" ಮುಂತಾದುವೆಲ್ಲ ಬೇಕು. ಜಗತ್ತಿನಲ್ಲಿ ಇರುವ ಎಲ್ಲ ಜ್ಞಾನಗಳೂ ಮಾನವಸಂಬಂಧಿ ಮತ್ತು ಮಾನವೋಪಯೋಗಿ. ಮಾನವ ಸಮಾಜದ ಮತ್ತು ಪ್ರಕೃತಿಯ ಕುರಿತ ವೈಜ್ಞಾನಿಕ ಚಿಂತನೆಗಳೇ ವಿವಿಧ ಶಾಸ್ತ್ರಶಿಸ್ತುಗಳು. ಬದುಕಿನ ಅಗತ್ಯತೆಯ ಹಿನ್ನೆಲೆಯಲ್ಲಿ ವಿಜ್ಞಾನ ವಿಷಯಗಳನ್ನು ಓದುವ ವಿದ್ಯಾರ್ಥಿಗಳಿಗೆ ತತ್ವಜ್ಞಾನವನ್ನು ತೌಲನಿಕವಾಗಿ ಓದಿಸುವ ಅಗತ್ಯವಿದೆ. ಕನ್ನಡ ಮುಂತಾದ ಭಾಷೆಗಳ ಕಲಿಕೆಯಲ್ಲಿ ಸೃಜನಶೀಲ ಕೃತಿಗಳಿಗೆ ಒತ್ತು ಕೊಡುತ್ತ ಬಂದಿರುವಲ್ಲಿ ಒಂದು ದೊಡ್ಡ ಕೊರತೆ ಮತ್ತು ಮಿತಿ ಉಂಟಾಗಿದೆ. ಅವನ್ನೂ ಕೂಡ ವೈಜ್ಞಾನಿಕವಾಗಿ ಓದಿಸುತ್ತಿಲ್ಲ. ಶರಣರ ವಚನಗಳನ್ನು, ಹಳೆಯ ಕಾವ್ಯಗಳನ್ನು ಪಠ್ಯವಾಗಿಟ್ಟಾಗ ಎದುರಾಗುವ ಸಮಸ್ಯೆಗಳ ಬಗ್ಗೆ ನಾವು ಯೋಚಿಸುತ್ತಲೇ ಇಲ್ಲ. ರಸವಿಮರ್ಶೆ, ಸಾಂಸ್ಕೃತಿಕ ವಿಮರ್ಶೆಯಂಥ ಕೆಲವು ಚೌಕಟ್ಟುಗಳಲ್ಲಿ ಅವನ್ನು ಗ್ರಹಿಸಲಾಗುತ್ತಿದೆಯಷ್ಟೇ. ಭೌತಶಾಸ್ತ್ರ, ರಸಾಯನಶಾಸ್ತ್ರಗಳ ನೆರವು ಪಡೆಯುವುದು ತಮಾಷೆಯಾಗಿ ಕಾಣಬಹುದೇನೋ. ಆದರೆ ಇಂಥ ಪ್ರಾಕೃತಿಕ ವಿಜ್ಞಾನಗಳ ಕನಿಷ್ಠ ಅರಿವು ಇಲ್ಲದವರು, ಇದ್ದರೂ ಅದನ್ನು ಬಳಸಿಕೊಳ್ಳಲಿಕ್ಕಾಗದವರು "ವೈಜ್ಞಾನಿಕ"ವಾಗಿ ಹೇಗೆ ಪಾಠ ಮಾಡಬಲ್ಲರು? ವಚನಗಳನ್ನು ಆಧುನಿಕ ತತ್ವಜ್ಞಾನಿಯ ಹಿನ್ನೆಲೆಯಲ್ಲಿ ನೋಡಲಿಕ್ಕಾಗದಿದ್ದರೆ, ಪ್ರಗತಿಪರ ಸಮಾಜಶಾಸ್ತ್ರ, ಇತಹಾಸಾದಿಗಳ ಹಿನ್ನೆಲೆಯಲ್ಲಿ ನೋಡಲಾಗದಿದ್ದರೆ ವಿದ್ಯಾರ್ಥಿಗಳಿಗೆ ವಾಕರಿಗೆ ಬರುವುದು ಸಹಜ. ಊಳಿಗಮಾನ್ಯ ಕರ್ನಾಟಕದ ಮಧ್ಯ ಯುಗದ ಆ ರಚನೆಗಳು ಇಂದಿಗೂ ಯಾಕೆ, ಹೇಗೆ ಪ್ರಸ್ತುತವಾಗುತ್ತವೆ ಅಥವಾ ಅವುಗಳ ಮಿತಿಗಳೇನು ಎಂಬ ಪ್ರಶ್ನೆ ಎದುರಿಸಲೇಬೇಕು. ತತ್ವಜ್ಞಾನದಲ್ಲಿ ಪ್ರಗತಿಪರವಾದುದು ಯಾವುದು, "ಸತ್ತಿರುವುದು" (ದೇವಿಪ್ರಸಾದ ಚಟ್ಟೋಪಾಧ್ಯಾಯ) ಯಾವುದು ಎಂದು ತರ್ಕಬದ್ಧವಾಗಿ ನಿರ್ಧರಿಸಿಕೊಳ್ಳಬೇಕು. ಸತ್ತಿರುವುದನ್ನು ಮತ್ತೆ ಜೀವಂತಗೊಳಿಸುವ ವ್ಯರ್ಥ ಪ್ರಯತ್ನ ಸರಿಯಲ್ಲ.

ಇಲ್ಲಿ ಒಂದು ನಿದರ್ಶನವನ್ನು ನೋಡೋಣ. ಕುವೆಂಪು ವಿಶ್ವವಿದ್ಯಾಲಯದ ಬಿ. ಎ. ದ್ವಿತೀಯ ವರ್ಷದ ಐಚ್ಛಿಕ ಕನ್ನಡ ಓದುವ ವಿದ್ಯಾರ್ಥಿಗಳಿಗೆ "ವಚನ ಕಮ್ಮಟ" ಎಂಬ ಪಠ್ಯವನ್ನು ನಿಗದಿ ಮಾಡಲಾಗಿದೆ. ಈ ಸಂಕಲನದ ಮೊದಲ ವಚನ ಹೀಗಿದೆ –

"ಜ್ಞಾನದ ಬಲದಿಂದ ಅಜ್ಞಾನದ ಕೇಡ ನೋಡಯ್ಯಾ ; ಜ್ಯೋತಿಯ ಬಲದಿಂದ ತಮಂಧದ ಕೇಡ ನೋಡಯ್ಯಾ ; ಸತ್ಯದ ಬಲದಿಂದ ಅಸತ್ಯದ ಕೇಡ ನೋಡಯ್ಯಾ; ಕೂಡಲಸಂಗನ ಶರಣರ ಅನುಭಾವದಿಂದ ; ಎನ್ನ ಮನದ ಕೇಡ ನೋಡಯ್ಯಾ."
ಇಲ್ಲಿ ಜ್ಞಾನ, ಜ್ಯೋತಿ, ಸತ್ಯ, ಅನುಭಾವಗಳನ್ನು ಒಂದು ಗುಂಪಾಗಿ; ಅಜ್ಞಾನ, ತಮಂಧ (ಕತ್ತಲೆ), ಅಸತ್ಯ, ಮನದ ಕೇಡನ್ನು ಇನ್ನೊಂದು ವಿರೋಧಿ ಗುಂಪಾಗಿ; ಕಲ್ಪಿಸಿ ಜ್ಞಾನಾದಿಗಳು ಅಜ್ಞಾನಾದಿಗಳನ್ನು ನಾಶಪಡಿಸುತ್ತವೆಂದು ಹೇಳಲಾಗಿದೆ. ಆದರೆ ಇಂದು ನಮಗೆ ತಕ್ಷಣ ಎದುರಾಗುವ ಪ್ರಶ್ನೆ, ಯಾವ ಬಗೆಯ ಜ್ಞಾನ ? ಯಾವ ಬಗೆಯ ಸತ್ಯ ? ಅನುಭಾವವು ವಾಸ್ತವವೇ ? ಜ್ಞಾನ, ಸತ್ಯಗಳು, ಕಾಲ, ದೇಶ ಸ್ಥಿತಿಗೆ ಸಾಪೇಕ್ಷವಲ್ಲವೇ ? ಅನುಭಾವ ಎನ್ನುವುದು ಧಾರ್ಮಿಕ ವ್ಯಕ್ತಿಗಳ ಒಂದು ವಿಧದ ಭ್ರಮೆಯಲ್ಲವೇ ? ಬಸವಣ್ಣ ಇಲ್ಲಿ ಲಿಂಗಾಯತ ಮತದ ಅರಿವಿಗೆ ಜ್ಞಾನ, ಜ್ಯೋತಿ, ಸತ್ಯ ಎನ್ನುತ್ತಿಲ್ಲವೇ ? ಇವನ್ನು ಇಂದು ಒಪ್ಪುವುದಕ್ಕಾಗುತ್ತದೆಯೇ ? ಖಂಡಿತ ಇಲ್ಲ. ಅಜ್ಞಾನವೆಂದರೆ ಬಸವಣ್ಣನ ಪ್ರಕಾರ "ಇಹ"ಕ್ಕೆ ಸಂಬಂಧಪಟ್ಟ ಪ್ರಾಪಂಚಿಕ ಸೆಳೆತಗಳು. "ಮನದ ಕೇಡು" ಎಂದರೆ ಭವದ ಸಂಬಂಧ. ಹೀಗೆ ಇಹ-ಪರ ತತ್ವಗಳ ಕರ್ಷಣೆಯಲ್ಲಿ ಇಹವನ್ನು ನೇತ್ಯಾತ್ಮಕವಾಗಿ ನೋಡಿ, ಪರವನ್ನು ಸಮರ್ಥಿಸಲಾಗುತ್ತಿದೆ. ಈ ಧೋರಣೆ ಇಂದಿನ ಜ್ಞಾನ-ವಿಜ್ಞಾನಗಳ ಬೆಳಕಿಗೆ ಎಳ್ಳಷ್ಟೂ ಹೊಂದದು. ಇದನ್ನು ಕಲಿಸುವುದಕ್ಕೆ, ಹುಡುಗರು ಕೇಳುವುದಕ್ಕೆ ತಲೆ ಚಿಟ್ಟೆನ್ನುತ್ತದೆ. ಈ ಸಂಕಲನದ ಬಹಳಷ್ಟು ವಚನಗಳು ಇದೇ ಬಗೆಯವು. ವಚನ ವಾಙ್ಮಯದ ಸಾಮಾಜಿಕ ಕಾಳಜಿ ಇರುವ ಕೆಲವು ವಚನಗಳಿವೆ. ಅಂಥವನ್ನು ಮಾತ್ರ ಓದಿಸಬಹುದೇನೋ, ಅದೂ ಕೂಡ ಇಂದಿನ ಬೆಳಕಿನಲ್ಲಿ.

ಒಟ್ಟಾರೆ ಎಲ್ಲ ಜ್ಞಾನಗಳ ಅಖಂಡ ಅರಿವಿನ ಹಿನ್ನೆಲೆಯಲ್ಲಿ ನಾವು ದಿನಂಪ್ರತಿ ಬದುಕುವ ಕ್ರಮಕ್ಕೆ "ಸಂಸ್ಕೃತಿ" ಎನ್ನುತ್ತೇವೆ. "ಅರಿವು" ಪ್ರತಿಯೊಬ್ಬರ ಸೊತ್ತಾಗುವುದು ಈಗ ನಮ್ಮಲ್ಲಿರುವ "ವ್ಯವಸ್ಥೆ"ಯಿಂದ ಸಾಧ್ಯವಿಲ್ಲ. ಆದರೆ ಸಾಧ್ಯ ಮಾಡುವ ನಿರಂತರ ಪ್ರಯತ್ನಗಳು ಬೇರೆ ಬೇರೆ ಒತ್ತಡಗಳಿಂದ ನಡೆದಿರಬೇಕಾಗುತ್ತದೆ. ಅನಕ್ಷರತೆಯ ವಿರುದ್ಧ "ಅಕ್ಷರ" ಕಲಿಕೆಯ ನಾನಾ ಬಗೆಯ ಪ್ರಯತ್ನಗಳು ಇಂಥ ಆಶಯದ ಭಾಗಗಳೇ. ಆದರೆ ಅಲ್ಲಿ ಏನನ್ನು, ಏಕೆ, ಹೇಗೆ ಕಲಿಸಲಾಗುತ್ತದೆ ? ಇದು ಮುಖ್ಯ ಪ್ರಶ್ನೆ. ಇದಕ್ಕೂ "ವ್ಯವಸ್ಥೆ"ಯ ಹಿನ್ನೆಲೆಯಲ್ಲಿಯೇ ಉತ್ತರವಿರುತ್ತದೆ. ಅನಕ್ಷರಸ್ಥರಿಗೂ ಅವರದೇ ಆದ ಪರಂಪರಾಗತ "ಅರಿವು" ಇದ್ದೇ ಇದೆ. ಈ ಸಾಮಾಜಿಕ ಅರಿವಿನಲ್ಲಿ ಗಂಭೀರವಾದ ಮಿತಿಗಳು ಕಾಣಿಸುತ್ತಿರುವುದರಿಂದ ಅವನ್ನು ಅಕ್ಷರದ ಮೂಲಕ ಹೋಗಲಾಡಿಸುವ ಆಶಯವೊಂದಿದೆ. ಆದರೆ ಈ ಅವಸರದಲ್ಲಿ ಪರಂಪರಾಗತ ಅರಿವಿನ ಸ್ವರೂಪವನ್ನು ಅರ್ಥಮಾಡಿಕೊಂಡಿಲ್ಲವಾದ್ದರಿಂದ, "ಆಧುನಿಕತೆ"ಯ ಸವಾಲುಗಳನ್ನು ಜನಸಮೂಹಗಳು ಹೇಗೆ ಎದುರಿಸುತ್ತಿವೆ ಎಂಬುದಕ್ಕೆ ಸರಿಯಾದ ಉತ್ತರ ಸಿಗುತ್ತಿಲ್ಲ. ಇಂದು ಪ್ರತಿದಿನವೂ ಕಾಣುತ್ತಿರುವ ರೈತರ ಆತ್ಮಹತ್ಯೆಯನ್ನು ಈ ಹಿನ್ನೆಲೆಯಲ್ಲೇ ನೋಡಬೇಕೆನಿಸುತ್ತದೆ. ಇದು "ಪರಂಪರಾಗತ ಅರಿವು" ಮತ್ತು "ಆಧುನಿಕ ಅರಿವು"ಗಳ ಸಂಘರ್ಷದ ಫಲವೇಕಾಗಿರಬಾರದು ? ಜಾಗತೀಕರಣ, ಉದಾರೀಕರಣ, ಖಾಸಗೀಕರಣಗಳನ್ನು ತಳಪಾಯವಾಗಿ ಮಾಡಿಕೊಂಡಿರುವ ವಿಕೃತರೂಪಿ ಆಧುನಿಕತೆಯ ವಿರುದ್ಧ ಹೋರಾಡುವುದಕ್ಕೆ ಪರಂಪರಾಗತ ಗ್ರಾಮೀಣ ಅರಿವೊಂದೇ ಸಾಕಾಗುವುದಿಲ್ಲ.

ಈ ಸಮಸ್ಯೆಯನ್ನು ಸಾಂಸ್ಕೃತಿಕ ಚಿಂತನೆಯ ಸಂದರ್ಭದಲ್ಲಿಟ್ಟು ಹೇಳುವುದಾದರೆ ''ಜನಪದ ಸಂಸ್ಕೃತಿ'' ಮತ್ತು ''ವರ್ಗ ಸಂಸ್ಕೃತಿ''ಗಳ ಮುಖಾಮುಖಿಯೆಂದು ಪರಿಭಾವಿಸಬಹುದು. ''ಜನಪ್ರಿಯ'' ಮತ್ತು ''ವರ್ಗ'' ಸಂಸ್ಕೃತಿಗಳು ವಿವಿಧ ರೂಪಾಕೃತಿಗಳಲ್ಲಿ ಜನತೆಯನ್ನು ಬಾಧಿಸುತ್ತಿವೆ. ಕಮರ್ಶಿಯಲ್ ಸಿನೇಮಾ, ಟಿ. ವಿ., ಕೆಸೆಟ್, ಸಿ.ಡಿ.ಗಳ ರೂಪದ ''ಜನಪ್ರಿಯ'' ಮತ್ತು ''ವರ್ಗ'' ಸಂಸ್ಕೃತಿಗಳ ಜತೆ ಧಾರ್ಮಿಕ ಪೀಠಗಳೂ ಕೈಗೂಡಿಸುತ್ತಿರುವುದು ಕುತೂಹಲದ ವಿಷಯ. ಕರ್ನಾಟಕದಲ್ಲಿ ಮುಖ್ಯವಾಗಿ ಲಿಂಗಾಯತ ಮತ್ತು ಬ್ರಾಹ್ಮಣ ಧರ್ಮಪೀಠಗಳು ಸಂಸ್ಕೃತಿಯ ಹೆಸರಿನಲ್ಲಿ ರಾಜಕೀಯ ಮಾಡುತ್ತಿವೆ. ಈ ಶೋಷಕ ಧರ್ಮಪೀಠಗಳ ಮಾದರಿಯಲ್ಲಿ ಇತರ ಧರ್ಮಪೀಠಗಳೂ, ಸಣ್ಣ, ಪುಟ್ಟ ಮಠ ಮಂದಿರಗಳೂ ಹೆಜ್ಜೆ ಇಡುತ್ತಿವೆ. ಬೂರ್ಜ್ವಾ ರಾಜಕೀಯದ ಜತೆ ಇವುಗಳ ಗಾಢವಾದ ನಂಟು ಅವಕ್ಕೆ ತೀರ ಸಹಜವಾದ ಸಂಬಂಧ. ಜನಪದ ಮತ್ತು ಜನತೆಯ ಸಂಸ್ಕೃತಿಗಳ ಮುಖವಾಡಗಳನ್ನು ಧರಿಸಲಿಕ್ಕೂ ಇವು ಹಿಂದೆ ಮುಂದೆ ನೋಡುವುದಿಲ್ಲ. ''ನಿರಾಶ್ರಿತ'' ಬಂಡಾಯ ಕಲಾವಿದರು, ವಿದ್ವಾಂಸರು ಇವುಗಳ ನೆರಳಿಗೆ ಹೋಗಿ ನಿಲ್ಲುತ್ತಿರುವುದರಿಂದಲೂ ಈ ಅಪಾಯ ಉಂಟಾಗುತ್ತಿದೆ. ಈ ಸಂದರ್ಭದಲ್ಲಿ ಅಲ್ಲಮನನ್ನು ಕುರಿತು ಬರೆದ ಡಿ. ಆರ್. ನಾಗರಾಜರ ನೆನಪು ಬರುತ್ತಿದೆ. ''ಆಧುನಿಕತೆ''ಯ ಅವಾಂತರದ ಬೇರೊಂದು ಮಾದರಿ ಈ ವಿಧದಲ್ಲೂ ಇದೆ. ಇದರಲ್ಲಿ ಬಸವರಾಜ ಕಲ್ಗುಡಿ ವಚನಕಾರರ ಕುರಿತು ಬರೆದ ಪುಸ್ತಕವನ್ನೂ ಸೇರಿಸಬಹುದು.

''ಪ್ರಗತಿಪರ'' ಎಂಬ ಮುಖವಾಡವನ್ನು ಕಳಚಿ ಹಾಕಿದರೆ, ಧರ್ಮಪೀಠಗಳ ಶೋಷಕ ಸ್ವರೂಪದ ನಗ್ನತೆ ನಿಚ್ಚಳವಾಗುತ್ತದೆ. ಮುಖ್ಯವಾಗಿ ಅವು ಹಿಂದಲ ದೊರೆಗಳಿಂದ ಮತ್ತು ಇತರ ಶ್ರೀಮಂತರಿಂದ ಬಂದ ಪುಕ್ಕಟೆ ಹಣ(ದಾನ)ದ ಮೇಲೆ ನಿಂತಿರುವ, ಇಂದು ಕ್ಯಾಪಿಟೇಶನ್, ಡೊನೇಶನ್ ರೂಪದ ಸುಲಿಗೆಯ ಪಾಪದಲ್ಲಿ ನಿರತವಾಗಿರುವ ಅಪಾಯಕಾರಿ ಸಂಸ್ಥೆಗಳು. ಅವು ಜನತೆಯ ಸಂಸ್ಕೃತಿಯ ಪರವಾಗಿ ಮತ್ತು ಜನಪದ ಸಂಸ್ಕೃತಿಯ ಪರವಾಗಿ ನಿಲ್ಲುವುದು ಖಂಡಿತ ಸಾಧ್ಯವಿಲ್ಲ. ಅದನ್ನು ನಿರೀಕ್ಷಿಸುವುದೂ ತಪ್ಪು. ಲಿಂಗಾಯತ ಮಠಗಳು ೧೨ನೇ ಶತಮಾನದ ವೀರಶೈವ ಚಳುವಳಿಯ ಬೈ ಪ್ರೊಡಕ್ಟ್ ಆದ ವಚನಗಳನ್ನು ಬಳಸಿಕೊಂಡು ತಮ್ಮ ಅಸ್ತಿತ್ವದ ''ಪ್ರಾಮುಖ್ಯತೆ''ಯನ್ನು ಸಾಬೀತುಪಡಿಸಿಕೊಳ್ಳಲು ವ್ಯರ್ಥ ಪ್ರಯತ್ನ ಮಾಡುತ್ತಿವೆ. ಅವು ಧರ್ಮವನ್ನು ಸಂಸ್ಕೃತಿಯ ಹೆಸರಿನಲ್ಲಿ ಪ್ರಚಾರ ಮಾಡಲು ಸಾಂಸ್ಕೃತಿಕ ತಂಡಗಳನ್ನು ಕಟ್ಟಿಕೊಂಡಿವೆ. ಈ ''ಧರ್ಮ ಸಂಸ್ಕೃತಿ'' (ಶೋಷಕ)ವರ್ಗ ಸಂಸ್ಕೃತಿಯ ಭಾಗ ಮಾತ್ರ. ಅದನ್ನು ''ಜನತೆಯ'' ಸಂಸ್ಕೃತಿಯನ್ನಾಗಿ ಮಾಡಹೊರಟಿರುವ ಹುನ್ನಾರಿನ ವಿರುದ್ಧ ಹೋರಾಡಲೇಬೇಕು. ದೇಶಮಟ್ಟದಲ್ಲಿ ಹಿಂದೂ ಕೋಮುವಾದಿ ಪಕ್ಷ ಮತ್ತು ಅದರ ವಿವಿಧ ಸಂಘಟನೆಗಳು ಮಂದಿರ ಮಸೀದಿಯಂಥ ಸಾಂಸ್ಕೃತಿಕ ಧಾರ್ಮಿಕ ವಿಷಯವನ್ನೇ ಬಳಸಿಕೊಂಡು ಪ್ರಭುತ್ವದಲ್ಲಿರುವುದು ಇದರ ಇನ್ನೊಂದು ಮುಖ. ಪ್ರಗತಿಪರ, ಪ್ರಜಾಸತ್ತಾತ್ಮಕ ಶಕ್ತಿಗಳನ್ನು ಗುರುತಿಸುವ, ಒಟ್ಟುಗೂಡಿ ಹೋರಾಟವನ್ನು ಮುಂದುವರಿಸುವ ಅಗತ್ಯವನ್ನು ಮನಗಾಣಬೇಕು. ಸ್ನೇಹಿತರು ಯಾರು, ವೈರಿಗಳು ಯಾರು ಎಂದು ಅಂದಾಜಿಸುವಲ್ಲಿ ಬಳಸುವ ಮಾನದಂಡಗಳ ಬಗ್ಗೆ ಅನುಮಾನವೇಕೆ ?

ಸಂಸ್ಕೃತಿಯ ಜತೆ ಧರ್ಮವನ್ನು ಬೆರೆಸುತ್ತಿರುವ ವಿವಿಧ ಗಂಡಾಂತರಗಳ ವಿರುದ್ಧ ಹೋರಾಡಬೇಕಿದೆ. ಸಂಸ್ಕೃತಿ ಪರಂಪರೆಯಲ್ಲಿರುವ ಮತೀಯ ಮೌಢ್ಯಗಳನ್ನು ಹೊಲಸು ರಾಜಕೀಯಕ್ಕೆ ಬಳಸಿಕೊಳ್ಳುತ್ತಿರುವ ನೇರ ಮತ್ತು ಸೂಕ್ಷ್ಮ ಮಾರ್ಗಗಳೆರಡನ್ನೂ ವಿರೋಧಿಸಬೇಕು. ಜಾತ್ಯತೀತ, ಪ್ರಗತಿಪರ, ಪ್ರಜಾಸತ್ತಾತ್ಮಕವಾದ ''ಜನತೆಯ'' ಸಂಸ್ಕೃತಿಯ ಪರ್ಯಾಯದ ಮೂಲಕ ಇವನ್ನು ಎದುರಿಸಬೇಕು. ''ಬಂಡಾಯ'', ''ಇಪ್ಟಾ'', ''ಸಮುದಾಯ'', ''ದಲಿತ'' ಸಂಘಟನೆ, ರೈತ ಸಂಘಟನೆಗಳು ಕೂಡಿ ಇದೆಲ್ಲವನ್ನೂ ಪರ್ಯಾಲೋಚಿಸಿ ಕ್ರಿಯೆಗಿಳಿಯುವ ತುರ್ತಿದೆ.

**ಎಸ್. ಎಸ್. ಹಿರೇಮಠ**
ಕನ್ನಡ ಪ್ರಾಧ್ಯಾಪಕ, ಎ. ಡಿ. ಬಿ. ಪ್ರಥಮದರ್ಜೆ ಕಾಲೇಜು,
ಹರಪನಹಳ್ಳಿ - ೫೮೩ ೧೩೧

---

*೫೮ನೇ ಪುಟದಿಂದ*

ತುಸು ಚೋದ್ಯದಿಂದಲೇ ಗಮನಿಸುತ್ತಿದ್ದ ಸ್ಥಳೀಕರ ನಿರೀಕ್ಷೆ ಹುಸಿಯಾಗಲಿಲ್ಲ.

ಒಂದು ರಾತ್ರಿ ಮೇರಿಯಮ್ಮನ ಡಬ್ಬಿ ಪುಡಿಪುಡಿಯಾಯಿತು. ಮರುದಿನ ಮಣ್ಣಿನ ಮಗ ಗಣಪನನ್ನೂ ಒಕ್ಕಲೆಬ್ಬಿಸುವುದು ಗ್ಯಾರಂಟಿ ಅನ್ನುವ ಹೊತ್ತಿಗೆ, ಒಂದು ದಿನ ಗಣಪನ ಅಪಹರಣವೂ ಆಯಿತು. ಅದೇನು ವಾಸನೆ ಬಡಿಯಿತೋ ಹತ್ತಿರದ ಠಾಣೆಯ ಇಬ್ಬರು ಪೊಲೀಸಿನವರು ರಾತ್ರಿ ಡ್ಯೂಟಿಗೆ ಅಲ್ಲಿ ನಿಯುಕ್ತರಾಗಿ, ಕಾನೂನು ಮತ್ತು ಸುವ್ಯವಸ್ಥೆ ಕಾಪಾಡುವ ಹೊಣೆ ಹೊರಬೇಕಾಯಿತು.

ಎಲ್ಲಾ ದೇವರ ಆಟ! ಕೆಲ ದಿನಗಳು ಗತಿಸುತ್ತಿದ್ದಂತೆಯೇ ಪರಸ್ಪರ ರಾಜಿಯಾಗಿ, ಮೇರಿಯಮ್ಮ ಕಾಂಪೌಂಡು ಹಿಗ್ಗಿಸಿಕೊಂಡು ಡೀಸೆಂಟಾಗಿ ಷೋಕೇಸಿನಲ್ಲಿ ಫಳಫಳ ಹೊಳೆಯುತ್ತ ಭಕ್ತಾಕರ್ಷಣೆಯ ಕೇಂದ್ರವಾದಳು. ಪಕ್ಕದಲ್ಲಿಯೇ ವಕ್ರತುಂಡನೂ ತುಸು ನಿಧಾನವಾಗಿ ಯಾದರೂ ಚಿಕ್ಕಕೋಣೆ ಕಟ್ಟಿಸಿಕೊಂಡು ನೆಲೆಯೂರಿದ. ಅರ್ಚಕ ಕುಟುಂಬವೊಂದರ ಅನ್ನಕ್ಕೆ ದಾರಿಯಾಯಿತು. ಆ ದೇವರುಗಳ ದೆಸೆಯಿಂದಾಗಿ, ಅವರ ಪಕ್ಕದಲ್ಲಿಯೇ ಬೇಕರಿ, ಎಸ್.ಟಿ.ಡಿ. ಬೂತು, ಮಾಂಸ ಕತ್ತರಿಸುವ ಅಂಗಡಿ – ಮುಂಗಟ್ಟುಗಳನ್ನು ತೆರೆಯಲು ಅನುವು ದೊರೆಯಿತು. ಅವೆಲ್ಲ ದೇವರ ಕೃಪೆಯಲ್ಲಿ ಈಗ ಸುರಕ್ಷಿತ. ಮೇರಿಯಮ್ಮ v/s ಗಜಾನನ ಕೇಸು ಅಂತೂ ಇತ್ಯರ್ಥವಾಗಿ ಹೀಗೆ ಸುಖಾಂತ್ಯವಾಗುತ್ತಿದ್ದಂತೆ ಹತ್ತಿರದ ಖಾಸಗಿ ಶಾಲೆಗೆ ಸೇರಿದ್ದ ಖಾಲಿ ನಿವೇಶನದಲ್ಲಿ ತಿರುಪತಿ ವೆಂಕಟರಮಣಸ್ವಾಮಿಯನ್ನು ಸ್ಥಾಪಿಸುವ ಪ್ರಯತ್ನವೂ ಚೆನ್ನ ಹಿಂದೆಯೇ ನಡೆಯಿತಾದರೂ ಅದು ಸಫಲವಾಗಲಿಲ್ಲ. ಕಾರಣವಿಷ್ಟೆ, ಆತನನ್ನು ಸ್ಥಾಪಿಸ ಹೊರಟ ಜನರ ತೋಳ್ಬಲ ಸಾಕಾಗಲಿಲ್ಲವೆಂದು ಕಾಣುತ್ತದೆ.

ಅದುವರೆವಿಗೆ, ಹತ್ತಿರದ ಕೊಳಗೇರಿಯಲ್ಲಿ ಕೂತಿದ್ದ ವಲಸೆ ದೇವತೆ ಈಗ ಸೆಡ್ಡು ಹೊಡೆದು ಮುಖ್ಯರಸ್ತೆಗೆ ಬಂದಳು. ಬಿ.ಎಂ.ಟಿ.ಸಿ. ಬಸ್ಸು ನಿಲ್ದಾಣಕ್ಕೆಂದು ಬಿಟ್ಟು ಕೊಟ್ಟಿದ್ದ ದೊಡ್ಡ ಮೈದಾನದ ಮೂಲೆಯೊಂದರಲ್ಲಿ ನೆಲೆಗೊಳ್ಳಲು ನಡೆಸಿದ ಯತ್ನವನ್ನು ವಿಫಲಗೊಳಿಸಿದ ಸಾರಿಗೆ ಸಂಸ್ಥೆಯವರು ತುರ್ತಾಗಿ ಅದನ್ನು ಬಸ್‌ನಿಲ್ದಾಣವನ್ನಾಗಿ ರೂಪಿಸಿದರು. ಹೀಗಾಗಿ ಆ ಜಾಗ ಬಚಾವಾಯಿತು.

ಹೇಳಿಕೇಳಿ ಶಕ್ತಿದೇವತೆ ಆಕೆ. ತನ್ನ ತಾಕತ್ತು ತೋರಿಸಬೇಡವೆ? ಹೇಗೂ ಬೀದಿಗಿಳಿದಾಗಿದೆ. ಮೇಲ್ಕಂಡ ಮೇರಿಯಮ್ಮ ಗಣಪತಿಗಳಂತಹ ಸೈಲೆಂಟು – ಸೊಫಿಸ್ಟಿಕೇಟು ದೇವರುಗಳೇ ನಿರೂಮಳಾಗಿ ಜಾಗ ಹೊಡೆದಿರುವಾಗ ಈಕೆ ಹ್ಯಾಗೆ ಸುಮ್ಮನಿದ್ದಾಳು ? ಸ್ಥಳೀಯ ನೀರಿನ ಟ್ಯಾಂಕನ್ನೇ ತನ್ನ ಮಡಿಲಿನಲ್ಲಿರಿಸಿಕೊಂಡು ಕೊನೆಗೂ ಅಲ್ಲಿ ಅಂಡೂರಿದ್ದು ದೊಡ್ಡ ಕತೆ. ಆಕೆಯ ಗುಡಿ ಕಟ್ಟುವಲ್ಲಿ ಸ್ಥಳೀಯ ಪೊಲೀಸರು ಎರಡು ಬಾರಿ ವಿಫಲಗೊಳಿಸಿದರಾದರೂ, ಮೂರನೆಯ ಬಾರಿಗೆ ಐವತ್ತು ಹೆಣ್ಣಾಳುಗಳೇ ನಿಂತು ಒಂದೇ ರಾತ್ರಿಯಲ್ಲಿ ಕಟ್ಟಿಬಿಟ್ಟರಂತೆ. ರಾತ್ರಿ ಅಡ್ಡಿಪಡಿಸಲು ಹೋದ ಬೀಟ್ ಪೊಲೀಸಿನವರಲ್ಲಿ ಒಬ್ಬನಿಗೆ ಹಾಕಬಾರದ ಜಾಗಕ್ಕೆ ಕೈಹಾಕಿ ಹೆದರಿಸಿ ಅವರನ್ನು ಅಟ್ಟಿಬಿಟ್ಟ ಆ ಹೆಣ್ಣಾಳುಗಳು ಎಂಥ ಗಟ್ಟಿಗಾತಿಯರಿರಬೇಕು ?

ಮರುದಿನ ಬೆಳಗಾಗುವುದರೊಳಗಾಗಿ ಎದ್ದುನಿಂತ ದೇವಸ್ಥಾನವನ್ನು ನಿಬ್ಬೆರಗಾಗಿ ನಿಂತು ನೋಡುತ್ತಿದ್ದ ಜನ ಆ ರೋಚಕ ಪುಕಾರುಗಳನ್ನು ಕೇಳಿ ಪಿಸಪಿಸ ನಕ್ಕರು. ಅದಕ್ಕಿಂತ ಆ ಕೃತ್ಯಕ್ಕೆ ಸ್ಥಳೀಯ ಪ್ರಭಾವ ವ್ಯಕ್ತಿಗಳ ಕುಮ್ಮಕ್ಕು ಇದ್ದಿತಾದುದರಿಂದಲೇ, ಪೊಲೀಸಿನವರು ನಿಸ್ಸಹಾಯಕರಾಗಿ ಸುಮ್ಮನಾಗಬೇಕಾಯಿತೆಂದು ಜನ ಆಡಿಕೊಂಡರು. ಆಕೆಯ ದೈತ್ಯಶಕ್ತಿಯ ಮುಂದೆ ಯಾರ ಆಟವೂ ನಡೆಯಲಿಲ್ಲ. ಅಂತೂ ಬಿಟ್ಟ ಜಾಗದಲ್ಲಿ ಆಕೆ ಪ್ರತಿಷ್ಠಾಪನೆಗೊಂಡೇ ಬಿಟ್ಟಳು. ಈಗ ಅದು ಅಮ್ಮನವರ ಬೃಹತ್ ಯಾತ್ರಾ ಸ್ಥಳ. ಹತ್ತಿರದ ಸರ್ಕಾರೀ ವಸತಿಗೃಹಗಳಲ್ಲಿ ವಾಸಿಸುವ ಕೆಲ 'ಎಜುಕೇಟೆಡ್ ಫೂಲ್ಸ್' ಕೂಡ ಸಕುಟುಂಬ ಪರಿವಾರದೊಂದಿಗೆ ಹೋಗಿ ಅಡ್ಡಬಿದ್ದು ಕೃತಾರ್ಥರಾದರು. ಅಕ್ಷರವಂತರೆಲ್ಲ ವಿಚಾರವಂತರಲ್ಲವೆಂಬುದನ್ನು ಸಾಬೀತುಪಡಿಸಿದರು.

ಇದು ನಿದರ್ಶನಕ್ಕಾಗಿ ಒಂದು ಬಡಾವಣೆಯಲ್ಲಿ ನಡೆದ ವಿದ್ಯಮಾನಗಳನ್ನು ಮಾತ್ರ ಇಲ್ಲಿ ಹೇಳಿದ್ದು, ಇಂಥವೇ ಬೆಂಗಳೂರಿನ ಸಾಕಷ್ಟು ಕಡೆ ದೇವರ ಹೆಸರಿನಲ್ಲಿ ಭಾನಗಡಿಗಳು ರಾಜಾರೋಷವಾಗಿ ನಡೆಯುತ್ತಲೇ ಇರುತ್ತವೆ. ಇಂಥ ಅಕ್ರಮಗಳನ್ನು ತೊಡೆದು ಹಾಕಬೇಕಾದರೆ ಪ್ರತ್ಯೇಕ ಕಾನೂನನ್ನೇ ಮಾಡಬೇಕಾದ ಸವಾಲು ಈಗ ಸರ್ಕಾರದ ಮುಂದಿದೆ.

**ಈರಪ್ಪ ಎಂ. ಕಂಬಳಿ**
ಸಂಶೋಧನಾಧಿಕಾರಿ, ಭಾಷಾಂತರ ನಿರ್ದೇಶನಾಲಯ
ಕಾವೇರಿ ಭವನ, ಎಫ್.ಬ್ಲಾಕ್, ಬೆಂಗಳೂರು - ೯

# ಹೊಸತು

ಸಾಮಾಜಿಕ, ಸೈದ್ಧಾಂತಿಕ, ಸಾಂಸ್ಕೃತಿಕ ಕ್ಷೇತ್ರಕ್ಕೆ




ನವಕರ್ನಾಟಕ ಪ್ರಕಾಶನದ ಹೆಮ್ಮೆಯ ಕೊಡುಗೆ

ಸಂ : 1001

ನೆಮ್ಮದಿಯ ನಾಳೆ ನಿಮ್ಮದಾಗಲೆಂದು ಹಾರೈಸಿ
ಹೊಸತು ಪತ್ರಿಕೆ ಚಂದಾ ಉಡುಗೊರೆ

ಹೊಸತು
ನವಕರ್ನಾಟಕ ಪ್ರಕಾಶನ

ಒಂದು ವರ್ಷದ
ಚಂದಾ ಮೊಬಲಗನ್ನು
ಸ್ವೀಕರಿಸಲಾಗಿದೆ

ಇವರಿಂದ ಪ್ರೀತಿಯ ಅಣ್ಣ ಆಕಾಶನ
ನೆನಪಿನ ಕಾಣಿಕೆ

ಇವರಿಗೆ ಒಲವಿನ ತಂಗಿ ಭೂಮಿಕಾಳ
ಹುಟ್ಟುಹಬ್ಬದ ಸಂದರ್ಭ

(ಹೊಸತು ಪರವಾಗಿ)

ದಿನಾಂಕ 12-12-2002

ಆಕಾಶ
(ಉಡುಗೊರೆ ನೀಡುವವರ ಸಹಿ)

**ಜೀವನದ ಎಲ್ಲ ಕ್ಷೇತ್ರಗಳ ಆಗು-ಹೋಗುಗಳನ್ನು ಗಂಭೀರ ವಿಶ್ಲೇಷಣೆಗೆ ಒಳಪಡಿಸುವ ತಿಂಗಳ ಪತ್ರಿಕೆ**

## ಉಡುಗೊರೆಯಾಗಿ 'ಹೊಸತು ಚಂದಾ'

## ಹಬ್ಬ - ಹರಿದಿನ, ಮದುವೆ, ಗೃಹಪ್ರವೇಶ, ಹುಟ್ಟುಹಬ್ಬ ಇತ್ಯಾದಿ ಸಮಾರಂಭಗಳಲ್ಲಿ ಚಂದಾ ಕೂಪನ್ ಉಡುಗೊರೆ ನೀಡಿ

ವಾರ್ಷಿಕ ಚಂದಾ ರೂ. 100 :: 3 ವರ್ಷಕ್ಕೆ ರೂ. 250 :: ಬಿಡಿ ಪ್ರತಿ ರೂ. 10 :: ಡೆಮಿ 1/4 :: ಪುಟಗಳು - 64

ಸಂ : 3001

ನೆಮ್ಮದಿಯ ನಾಳೆ ನಿಮ್ಮದಾಗಲೆಂದು ಹಾರೈಸಿ
ಹೊಸತು ಪತ್ರಿಕೆ ಚಂದಾ ಉಡುಗೊರೆ



ಇವರಿಂದ ..........

ಇವರಿಗೆ ..........

ಹೊಸತು
ನವಕರ್ನಾಟಕ ಪ್ರಕಾಶನ

ಮೂರು ವರ್ಷದ
ಚಂದಾ ಮೊಬಲಗನ್ನು
ಸ್ವೀಕರಿಸಲಾಗಿದೆ

(ಹೊ

ಮೂರು ವರ್ಷದ ಚಂದಾದೊಂದಿಗೆ ಮೂರು ಪುಸ್ತಕಗಳು ಉಚಿತ ಹಾಗೂ ನವಕರ್ನಾಟಕ ಪ್ರಕಟಣೆಗಳ ಮೇಲೆ ಶೇ. 20ರ ರಿಯಾಯಿತಿ. ನಿಮ್ಮ ಚಂದಾ ನವೀಕರಿಸಿ. ಉಡುಗೊರೆ ನೀಡುವ ಮೂಲಕ ಹೊಸ ಗೆಳೆಯರನ್ನು ಪರಿಚಯಿಸಿ

'ಹೊಸತು ಚಂದಾ' ಉಡುಗೊರೆ ಕೂಪನ್‌ಗಳು ಬೆಂಗಳೂರು, ಮಂಗಳೂರು, ಮೈಸೂರು ಹಾಗೂ ಗುಲ್ಬರ್ಗಾ ನಗರಗಳಲ್ಲಿರುವ ನವಕರ್ನಾಟಕ ಪುಸ್ತಕ ಮಳಿಗೆಗಳಲ್ಲೂ ಲಭ್ಯ


ವಿವರಗಳಿಗೆ : ಹೊಸತು
15, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಅಂ. ಪೆ. ಸಂಖ್ಯೆ 5159
ಬೆಂಗಳೂರು-560 001 ಫೋನ್ : 2203580/81/82 e-mail : nkp@bgl.vsnl.net.in.

HOSATHU Kannada Monthly / February 2004 Rs. 10
RNI Regn. No. KARKAN/1999/614 REGD. CPMG / KA / BGE – 7 / 2003-05 Licenced to post without prepayment. Licence No. WPP-14



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Chief Editor : Dr. G. Ramakrishna